ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ.ಏ. ಶಂಕರಗೌಡ

ಜಗದೀಶ್ ಕೊಪ್ಪ

ಪ್ರಕಟಣೆ:

ಮಂಡಲದ ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನ ಸೌಧ, ಬೆಂಗಳೂರು-560001

# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2004-2005

---

**ಅಧ್ಯಕ್ಷರು**

**ವಿ.ಆರ್. ಸುದರ್ಶನ್**

ಸಭಾಪತಿಗಳು,

ಕರ್ನಾಟಕ ವಿಧಾನ ಪರಿಷತ್ತು

**ಸದಸ್ಯರು**

**ಕೃಷ್ಣ**

ಸಭಾಧ್ಯಕ್ಷರು,

ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನ ಸಭಾ ಸದಸ್ಯರು ಹಾಗೂ

ಉಪ ಸಮಿತಿಯ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**

ವಿಧಾನ ಸಭಾ ಸದಸ್ಯರು

**ಆರ್. ಧೃುವನಾರಾಯಣ್**

ವಿಧಾನ ಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**

ವಿಧಾನ ಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನ ಸಭಾ ಸದಸ್ಯರು

**ಡಾ|| ವಿ.ಎಸ್. ಆಚಾರ್ಯ** (ದಿನಾಂಕ 26.11.04ರವರೆಗೆ)

ವಿಧಾನ ಪರಿಷತ್ತಿನ ಸದಸ್ಯರು

**ಡಾ|| ಎಲ್. ಹನುಮಂತಯ್ಯ** (ದಿನಾಂಕ 26.11.04ರವರೆಗೆ)

ವಿಧಾನ ಪರಿಷತ್ತಿನ ಸದಸ್ಯರು

**ಡಾ|| ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ತಿನ ಸದಸ್ಯರು

**ವಿಠಲ ಹೆರೂರು** (ದಿನಾಂಕ 26.11.04 ರಿಂದ)

ವಿಧಾನ ಪರಿಷತ್ತಿನ ಸದಸ್ಯರು

**ಖಾಜ್ಞಿ ಅರಶದ ಅಲಿ** (ದಿನಾಂಕ 26.11.04ರಿಂದ)

ವಿಧಾನ ಪರಿಷತ್ತಿನ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

**ಸಂಪಾದಕ ವರ್ಗ**

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಧಿಕಾರಿ ವರ್ಗ**

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರ್‌ರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

| | |
|---|---|
| ಕೆ. ಜಯಶಂಕರ ಮೂರ್ತಿ | ಕಾರ್ಯದರ್ಶಿ(ಪ್ರ) |
| ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

**ಸಂಪಾದಕರು**

ಎಲ್.ಎನ್. ಮುಕುಂದರಾಜ್, ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

K.V. Shankargowda: Prathibhavantha samsadiya Patugala Baduku Baraha Malike (Eminent Parliamentarian Series) Written by N. Jagadish Koppa Senior sub-Editor (News) Udaya T.V. published by Karnataka Legislature Library Committee, Vidhana Soudha, Bangalore-01.

Pages - 159 + 8 = 167

Rupees - 20.00



First Edition: 2005.

Number of Copies: 2000

Printed and Designed by:

Government Printing Press, Bangalore-01.

© ಶ್ರೀ ಕೆ.ವಿ. ಶಂಕರಗೌಡ : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಮಾಲಿಕೆ ಲೇಖಕರು: ಎನ್. ಜಗದೀಶ್ ಕೊಪ್ಪ, ಹಿರಿಯ ಉಪ ಸಂಪಾದಕ (ವಾರ್ತಾ ವಿಭಾಗ) ಉದಯ ಟಿ.ವಿ. ಪ್ರಕಟಣೆ: ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ, ವಿಧಾನ ಸೌಧ, ಬೆಂಗಳೂರು- 1.

ಪುಟ ಸಂಖ್ಯೆ: 159 + 8

ಬೆಲೆ: ರೂ: 20.00



ಮೊದಲನೆ ಮುದ್ರಣ: 2005

ಪ್ರತಿಗಳು: 2000

ಮುಖಪುಟ ವಿನ್ಯಾಸ ಮತ್ತು ಮುದ್ರಣ :

ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001

## ಪೀಠಿಕೆ

ಮಂಡ್ಯ ಜಿಲ್ಲೆ ಕರ್ನಾಟಕದ ಸಮೃದ್ಧ ಜಿಲ್ಲೆಗಳಲ್ಲಿ ಒಂದು. ಆರ್ಥಿಕ, ಸಾಮಾಜಿಕ, ರಾಜಕೀಯ ಇವೆಲ್ಲಕ್ಕಿಂತ ಹೆಚ್ಚಾಗಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕಕ್ಕೆ ಈ ಜಿಲ್ಲೆಯ ಕೊಡುಗೆ ಅಪಾರವಾದುದು.

ಈ ಜಿಲ್ಲೆಯ ನೆಲದಲ್ಲಿ ಸ್ವಾತಂತ್ರ್ಯ ಪೂರ್ವದಿಂದಲೂ ಹಲವಾರು ದಾಖಲೆಯ ಮೈಲಿಗಲ್ಲುಗಳು ರಾಜಕೀಯ ರಂಗದಲ್ಲಿ ಸ್ಥಾಪಿತವಾಗಿವೆ.

ಸ್ವಾಭಿಮಾನಕ್ಕೆ ಪರ್ಯಾಯ ಹೆಸರೇ ಮಂಡ್ಯ ಎನ್ನುವಂತಹ ಸ್ಥಿತಿಯಲ್ಲಿ ಜಿಲ್ಲೆಯ ಜನತೆ ಅನ್ಯಾಯ, ಅಸಮಾನತೆಗಳ ವಿರುದ್ಧ ಸದಾ ಸಿಡಿದೆದ್ದು ಹೋರಾಡುತ್ತಲೇ ಬಂದಿದ್ದಾರೆ.

ಬ್ರಿಟೀಷರ ಸರ್ಕಾರದ ವಿರುದ್ಧ ಗಾಂಧಿ ನೀಡಿದ ಹೋರಾಟದ ಕರೆಗೆ ಓಗೊಟ್ಟು, ಜಿಲ್ಲೆಯ ಅನೇಕ ಹಿರಿಯ ಚೇತನಗಳು ಸ್ವಾತಂತ್ರ್ಯ ಹೋರಾಟದ ಸಾಗರಕ್ಕೆ ದುಮುಕಿದ್ದು ಈಗ ಇತಿಹಾಸ. ಜಿಲ್ಲೆಯ ಜನರ ಸ್ವಾತಂತ್ರ್ಯ ಹೋರಾಟಕ್ಕೆ ಸಾಕ್ಷಿಯಾಗಿ ಶಿವಪುರ ಸತ್ಯಾಗ್ರಹ ಚಳುವಳಿ ಇತಿಹಾಸದಲ್ಲಿ ದಾಖಲಾಗಿದೆ. ಈ ಚಳುವಳಿಯು ಪ್ರತೀಕವಾಗಿ ಬೆಂಗಳೂರು-ಮೈಸೂರು ರಸ್ತೆಯ ಶಿವಪುರದಲ್ಲಿ ಚಳುವಳಿ ನಡೆದ ಸ್ಥಳದಲ್ಲಿ ಹೆಮ್ಮೆಯ ಸತ್ಯಾಗ್ರಹ ಸೌಧ ಎದ್ದು ನಿಂತಿದೆ.

ಭೂ ಕಂದಾಯ ತಾರತಮ್ಯವನ್ನು ವಿರೋಧಿಸಿ 50ರ ದಶಕದಲ್ಲಿ ನಡೆಸಿದ ಇರ್ವಿನ್ ನಾಲಾ ಚಳುವಳಿ, ಕನ್ನಂಬಾಡಿ ಕಟ್ಟೆಯ ದಕ್ಷಿಣ ಭಾಗದಲ್ಲಿ ಸರ್ಕಾರ ನಿರ್ಮಿಸಲು ಹೊರಟ ವರುಣಾ ನಾಲಾ ವಿರುದ್ಧ ಚಳುವಳಿ ಅಥವಾ 80ರ ದಶಕದ ನಂತರ ಕರ್ನಾಟಕದಲ್ಲಿ ಹುಟ್ಟಿಕೊಂಡ ರೈತ ಚಳುವಳಿ ಹೀಗೆ ಇವೆಲ್ಲಕ್ಕೂ ಭದ್ರ ಬುನಾದಿ ಹಾಕಿ ವೇದಿಕೆ ನಿರ್ಮಿಸಿಕೊಟ್ಟಿದ್ದು ಈ ಜಿಲ್ಲೆಯ ನೆಲ ಮತ್ತು ಜನ. ಅಷ್ಟೇ ಏಕೆ ಇತ್ತೀಚಿಗೆ ನಡೆದ ಕಾವೇರಿ ಚಳುವಳಿ ಕೂಡ ಮಂಡ್ಯ ಜಿಲ್ಲೆಯ ಹೆಸರಿನೊಂದಿಗೆ ಬೆರೆತು ವಿಲೀನಗೊಂಡಿದೆ.

ಮಂಡ್ಯ ಜಿಲ್ಲೆ ಕೇವಲ ಚಳುವಳಿ ಮತ್ತು ಪ್ರತಿಭಟನೆಗೆ ಸೀಮಿತವಾಗಿಲ್ಲ. ಕರ್ನಾಟಕ ರಾಜಕೀಯ ರಂಗ ಕಂಡ ಹಲವಾರು ಧೀಮಂತ ನಾಯಕರಿಗೆ ಜನ್ಮ ಕೊಟ್ಟು ಬೆಳೆಸಿ ಪ್ರೋತ್ಸಾಹಿಸಿದ ನೆಲ ಇದಾಗಿದೆ. ಅಂದಿನ ಎಚ್.ಕೆ.ವೀರಣ್ಣಗೌಡ, ಸಾಹುಕಾರ್ ಚನ್ನಯ್ಯ, ಇಂಡುವಾಳು ಹೊನ್ನಯ್ಯ, ಟಿ.ಮರಿಯಪ್ಪ, ಕೆ.ಪುಟ್ಟಸ್ವಾಮಿ, ಎಸ್.ಸಿ. ಮಲ್ಲಯ್ಯ ಮುಂತಾದ ರಾಜ್ಯ ಮಟ್ಟದ ನಾಯಕರು ಬೆಳೆದು ರೂಪುಗೊಂಡಿದ್ದು ಈ ಜಿಲ್ಲೆಯ ನೆಲದಲ್ಲಿ.

ಸ್ವಾತಂತ್ರ್ಯ ಪೂರ್ವದ 20ನೇ ಶತಮಾನದ ಆದಿಯಲ್ಲಿ ಮಂಡ್ಯ ಜಿಲ್ಲೆ ಬೆಂಗಾಡಾಗಿತ್ತು. ಕೃಷಿಯನ್ನೆ ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದ ಇಲ್ಲಿನ ಜನರ ಬದುಕು ಮಳೆಯ ಮೇಲೆ ಅವಲಂಬಿತವಾಗಿತ್ತು.

ಈ ಜನರ ಪುಣ್ಯವೋ ಎಂಬಂತೆ ಅಂದಿನ ಮೈಸೂರು ದೊರೆ ನಾಲ್ವಡಿ ಕೃಷ್ಣರಾಜ ಒಡೆಯರು ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟೆ ಕಟ್ಟಲು ಆಸಕ್ತಿ ತೋರಿದಾಗ, ಅಂದಿನ ದಿವಾನ್ ಸರ್.ಎಂ. ವಿಶ್ವೇಶ್ವರಯ್ಯ ತಮ್ಮ ತಾಂತ್ರಿಕ ಕೌಶಲ್ಯದಿಂದ ಬೃಹತ್ ಅಣೆಕಟ್ಟು ಕಟ್ಟಿ (ಕೃಷ್ಣರಾಜ ಸಾಗರ ಅಥವಾ ಕನ್ನಂಬಾಡಿ ಕಟ್ಟೆ) ಈ ಜಿಲ್ಲೆಯ ನೆಲಕ್ಕೆ ನೀರುಣಿಸಿ, ಇಲ್ಲಿನ ಜನರ ಪಾಲಿಗೆ ಅನ್ನದಾತರಾದರು.

ಕನ್ನಂಬಾಡಿ ಕಟ್ಟೆ ನಿರ್ಮಾಣದಿಂದ ಜಿಲ್ಲೆಯ ಸಾಮಾಜಿಕ ಬದುಕು ಬದಲಾಯಿತು, ಜೊತೆಗೆ ಜನತೆ ಆರ್ಥಿಕವಾಗಿ ಚೇತರಿಸಿಕೊಂಡರು.

ಆದರೆ ಶೈಕ್ಷಣಿಕವಾಗಿ, ರಾಜಕೀಯ ಹೇಳಿಕೊಳ್ಳುವಂತಹ ಸಾಧನೆ ಇಲ್ಲದೆ, ಪ್ರಬುದ್ಧತೆಯ ಕೊರತೆಯನ್ನು ಜಿಲ್ಲೆ ಅನುಭವಿಸಿದ್ದನ್ನು ಅಲ್ಲಗೆಳೆಯಲಾಗದು.

ಸ್ವಾತಂತ್ರ್ಯ ನಂತರ ಜಿಲ್ಲೆಯ ಸಮಗ್ರ ಚಿತ್ರಣವೇ ಬದಲಾಯಿತು. ದಿವಂಗತ ಕೆ.ವಿ. ಶಂಕರಗೌಡರ ಚಿಂತನೆ, ದೂರದೃಷ್ಟಿ ಹಾಗೂ ಶೈಕ್ಷಣಿಕ ವಲಯ, ಸಹಕಾರ ರಂಗಕ್ಕೆ ಅವರು ನೀಡಿದ ಕೊಡುಗೆ ಮತ್ತು ಅವರ ಅವಿರತ ಶ್ರಮವೇ ಇದಕ್ಕೆ ಕಾರಣ ಎಂದರೆ ತಪ್ಪಾಗಲಾರದು.

ಇಂದು ಇಡೀ ಅಖಂಡ ಕರ್ನಾಟಕದಲ್ಲಿ ಮಂಡ್ಯ ಜಿಲ್ಲೆ ಎಂದರೆ ಕೆ.ವಿ. ಶಂಕರಗೌಡ ಎಂಬ ನಂಬಿಕೆ ಬೆಳೆದು ಬಂದಿದೆ, ಇದು ತಪ್ಪು ಗ್ರಹಿಕೆ ಅಲ್ಲ.

ಜಿಲ್ಲೆಯ ರಾಜಕೀಯ, ಶೈಕ್ಷಣಿಕ ಹಾಗೂ ಗ್ರಾಮೀಣಾಭಿವೃದ್ಧಿಗೆ ಶ್ರಮಿಸಿ, ಸಹಕಾರದ ತತ್ವಗಳನ್ನು ಹಳ್ಳಿ ಹಳ್ಳಿಗಳಿಗೆ ತಲುಪಿಸಿದ ಕೀರ್ತಿ ಶಂಕರಗೌಡರಿಗೆ ಸಲ್ಲಬೇಕು ಹಾಗಾಗಿ ಕೆ.ವಿ.ಶಂಕರಗೌಡರಿಗೆ ಆಧುನಿಕ ಮಂಡ್ಯದ ಶಿಲ್ಪಿ ಎಂಬ ಬಿರುದು ನೀಡಿರುವುದು ಅತಿಶಯೋಕ್ತಿ ಏನಲ್ಲ. ಈ ಪುಸ್ತಕವನ್ನು ರಚಿಸಿದ ಲೇಖಕ ಜಗದೀಶ ಕೊಪ್ಪ ಅವರಿಗೆ ಗ್ರಂಥಾಲಯ ಸಮಿತಿ ಅಭಿನಂದನೆ ಸಲ್ಲಿಸುತ್ತದೆ.

ವಿ.ಆರ್. ಸುದರ್ಶನ್
ಸಭಾಪತಿಗಳು

ಕೃಷ್ಣ
ಸಭಾಧ್ಯಕ್ಷರು

# ಮೊದಲ ಮಾತು

ಸಮಾಜಕ್ಕೆ ವಿಸ್ಮೃತಿ ಆವರಿಸಿಕೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಇತಿಹಾಸ ಮಾತ್ರ ನಮಗೆ ಮಾರ್ಗದರ್ಶನವಾಗಬಲ್ಲದು ಎಂದು ನನ್ನ ನಂಬಿಕೆ.

ಈ ನಿಟ್ಟಿನಲ್ಲಿ ಕರ್ನಾಟಕದ ವಿಧಾನಸಭೆ ಸಚಿವಾಲಯ ನಾಡಿನ ಹಿರಿಯ ರಾಜಕೀಯ ನಾಯಕರ ಬದುಕು, ಸಾಧನೆ ಹಾಗೂ ಅವರ ಚಿಂತನೆಗಳ ಕುರಿತ ಕೃತಿಗಳನ್ನು "ಸಂಸದೀಯ ಪಟುಗಳು" ಮಾಲಿಕೆಯಲ್ಲಿ ಹೊರ ತರುತ್ತಿರುವುದು ಅಭಿನಂದನಾರ್ಹ ವಿಷಯವಾಗಿದೆ.

ಈ ಕೃತಿಗಳು ಇಂದಿನ ರಾಜಕಾರಣಿಗಳಿಗೆ ಮಾತ್ರವಲ್ಲ ಯುವ ಜನಾಂಗಕ್ಕೂ ಮಾರ್ಗದರ್ಶನವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

ಈ ನಾಡಿನ ಹಿರಿಯ ಚೇತನಗಳಲ್ಲಿ ಒಬ್ಬರಾದ, ಆಧುನಿಕ ಮಂಡ್ಯ ಶಿಲ್ಪಿ ಎಂದೇ ಹೆಸರಾದ ಗಾಂಧಿವಾದಿ, ಶಿಕ್ಷಣ ತಜ್ಞ ದಿವಂಗತ ಕೆ.ವಿ. ಶಂಕರಗೌಡರ ಕುರಿತು ಕೃತಿ ರಚಿಸಲು ಅವಕಾಶ ಮಾಡಿಕೊಟ್ಟ ಉಭಯ ಸದನಗಳ ಸಭಾಧ್ಯಕ್ಷರುಗಳಿಗೆ ಹಾಗೂ ಗ್ರಂಥಾಲಯ ಉಪ ಸಮಿತಿ ಅಧ್ಯಕ್ಷರು ಮತ್ತು ಸಹ ಸದಸ್ಯರು ಇವರಲ್ಲದೆ ವಿಧಾನ ಸಭಾ ಸಚಿವಾಲಯ, ಸಂಶೋಧನಾ ವಿಭಾಗ, ಗ್ರಂಥಾಲಯ ವಿಭಾಗದ ಎಲ್ಲಾ ಅಧಿಕಾರಿಗಳಿಗೂ, ಸಿಬ್ಬಂದಿಗಳಿಗೂ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು
29.3.2005

ಎನ್. ಜಗದೀಶ್ ಕೊಪ್ಪ
ಹಿರಿಯ ಉಪ ಸಂಪಾದಕರು (ವಾರ್ತಾ ವಿಭಾಗ)
ಉದಯ ಟಿವಿ, ಬೆಂಗಳೂರು.

# ಪರಿವಿಡಿ

## ಭಾಗ - 3

# ಜನನ-ಬಾಲ್ಯ

ಜಿಲ್ಲಾ ಕೇಂದ್ರವಾದ ಮಂಡ್ಯ ನಗರದಿಂದ 8 ಕಿಲೋ ಮೀಟರ್ ದೂರವಿರುವ ಕೀಲಾರ ಎಂಬ ಗ್ರಾಮ ಶಂಕರಗೌಡರ ಹುಟ್ಟೂರು. ಮಂಡ್ಯ-ಬೆಸಗರಹಳ್ಳಿ ರಸ್ತೆಯಲ್ಲಿರುವ ಈ ಊರು ಜಿಲ್ಲೆಯ ಅತ್ಯಂತ ಪ್ರಾಚೀನ ಗ್ರಾಮಗಳಲ್ಲಿ ಒಂದಾಗಿದೆ. ಕೀಲಾರ ಹಿಂದೆ ಬ್ರಾಹ್ಮಣರ ಅಗ್ರಹಾರವಾಗಿತ್ತು ಎಂಬುದಕ್ಕೆ ಅನೇಕ ಸಾಕ್ಷ್ಯಾಧಾರಗಳು ಸಹ ದೊರಕಿವೆ. 17ನೇ ಶತಮಾನದಲ್ಲಿ ಮಂಡ್ಯ ಜಿಲ್ಲೆ ಗಡಿ ಭಾಗದ ಕೊನೆಯ ಗ್ರಾಮವಾದ ಕೌಡ್ಲೆಯಲ್ಲಿ ದೊರೆತ ದೇವರಾಜ ಒಡೆಯರ ಕಾಲದ ಶಾಸನ (ಕ್ರಿ.ಶ. 1163)ದಲ್ಲಿ ಕೀಲಾರ ಗ್ರಾಮವನ್ನು ಬ್ರಾಹ್ಮಣರಿಗೆ ದತ್ತಿ ನೀಡಿದ ಅಂಶ ದಾಖಲಾಗಿದೆ.

ಹೀಗೆ ಇತಿಹಾಸದ ಅನೇಕ ಕುರುಹುಗಳನ್ನು, ತನ್ನ ಒಡಲಲ್ಲಿ ಇಟ್ಟುಕೊಂಡು ಪೋಷಿಸುತ್ತಾ ಬಂದಿರುವ ಕೀಲಾರ ಗ್ರಾಮದ ಬೋಚಿ ಮಂಚೇಗೌಡ, ಕೆ.ವಿ. ಶಂಕರಗೌಡರ ಕುಟುಂಬದ ಮೂಲ ಪುರುಷರು. ಕೀಲಾರ ಗ್ರಾಮದಲ್ಲಿ 150 ವರ್ಷಗಳ ಹಿಂದೆಯೇ 200 ಎಕರೆಗಿಂತಲೂ ಅಧಿಕ ಭೂಮಿ, ಆಳು-ಕಾಳುಗಳನ್ನು ಹೊಂದಿದ್ದ ಬೋಚಿ ಮಂಚೇಗೌಡರು ಕೀಲಾರದ ಯಜಮಾನರಾಗಿದ್ದರು.

ಸುತ್ತಮುತ್ತಲಿನ ಹಳ್ಳಿಗಳಿಗೆ ತೆರಳಿ, ಕುಟುಂಬಗಳ ನಡುವಿನ, ಜಾತಿ-ಜಾತಿಗಳ ನಡುವಿನ, ಗುಂಪುಗಳ ನಡುವಿನ ಸಂಘರ್ಷ, ವ್ಯಾಜ್ಯಗಳನ್ನು ನಿಷ್ಪಕ್ಷವಾಗಿ ಬಗೆಹರಿಸಿ ಅತ್ಯುತ್ತಮ ತೀರ್ಪುಗಾರರೆಂದು ಹೆಸರು ವಾಸಿಯಾಗಿದ್ದರು. ಆ ಕಾಲದಲ್ಲಿ ತಮ್ಮ ಮನೆಯಲ್ಲಿ ಕುದುರೆ ಸಾಕಿದ್ದ ಮಂಚೇಗೌಡರು, ಕುದುರೆ ಸವಾರಿ ಮೂಲಕ ಹಳ್ಳಿಗಳಲ್ಲಿ ಸಂಚರಿಸುತ್ತಾ, ಗ್ರಾಮ ಸಮುದಾಯದ ಸ್ವಾಸ್ಥ್ಯ ಕಾಪಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಬೋಚಿ ಮಂಚೇಗೌಡರಿಗೆ ಇಬ್ಬರು ಪುತ್ರರು. ಕುರಿ ಈರೇಗೌಡ ಮತ್ತು ಮಂಚೇಗೌಡ. ಕುರಿ ಈರೇಗೌಡ ಮತ್ತು ಬಾಣಸವಾಡಿ ಸಿದ್ದಮ್ಮ ದಂಪತಿಗಳಿಗೆ 6 ಮಂದಿ ಹೆಣ್ಣು ಮಕ್ಕಳ ನಂತರ ಜನಿಸಿದ ಪುತ್ರ ಈ ವೀರೇಗೌಡ. ವೀರೇಗೌಡರೆ ಕೆ.ವಿ. ಶಂಕರಗೌಡರ ತಂದೆ.

ಅವಧಿಗೆ ಮುನ್ನ ಅಂದರೆ 7 ತಿಂಗಳಿಗೆ ಜನಿಸಿದ ವೀರೇಗೌಡ ಬಾಲ್ಯದಲ್ಲಿ ನಿರಂತರ ಅನಾರೋಗ್ಯದಿಂದ ಸಾವು-ಬದುಕಿನ ನಡುವೆ ಹೋರಾಡಿ, ತಂದೆ ತಾಯಿಗಳ ಹಾರೈಕೆಯಿಂದಾಗಿ ಬದುಕಿ ಉಳಿದಿದ್ದು ಒಂದು ಪವಾಡವೇ ಸರಿ.

ಕೆ.ವಿ. ಶಂಕರಗೌಡರಲ್ಲಿ ಬದುಕಿನುದ್ದಕ್ಕೂ ಕಂಡು ಬಂದ ಆಚಾರ-ವಿಚಾರ, ಸಂಸ್ಕೃತಿ, ಕಲೆ, ಸಾಹಿತ್ಯ ಇವುಗಳ ಬಗೆಗಿನ ಒಲವು ಇವೆಲ್ಲವೂ ತಂದೆಯಿಂದಲೇ ಬಂದ ಬಳುವಳಿಗಳು.

ವೀರೇಗೌಡರು ಬಾಲ್ಯದಿಂದಲೇ ಮಾಂಸಾಹಾರ ತ್ಯಜಿಸಿ, ಪೂಜೆಪುನಸ್ಕಾರಗಳತ್ತ ಗಮನಹರಿಸಿ, ಹರಿಕಥೆ, ಭಜನೆ, ನಾಟಕ ಇವುಗಳತ್ತ ಒಲವು ಬೆಳೆಸಿಕೊಂಡರು. ತನ್ನೂರಿನ ಈಶ್ವರ ದೇವಾಲಯ ಮತ್ತು ಮಾರಮ್ಮನ ದೇವಸ್ಥಾನಗಳನ್ನು ಅಭಿವೃದ್ಧಿಪಡಿಸಿದರಲ್ಲದೆ, ಪ್ರತಿ ಸೋಮವಾರ ಗ್ರಾಮಸ್ಥರು, ಶ್ರಮದಾನದ ಮೂಲಕ ಊರಿನ ಅಭಿವೃದ್ಧಿ ಕೆಲಸಗಳಲ್ಲಿ ತೊಡಗುವಂತೆ ಪ್ರೇರೇಪಿಸಿದರು. ಅಂದಿನ ಕಾಲದಲ್ಲಿ ಕೂಲಿ ಮಠದಲ್ಲಿ ಮರಳಿನ ಮೇಲೆ ಅಕ್ಷರ ಅಭ್ಯಾಸ ನಡೆಸಿ, ಅಕ್ಷರ ವಂಚಿತ ಕುಟುಂಬದ ಮೊದಲ ವಿದ್ಯಾವಂತ ಎಂಬ ಕೀರ್ತಿಗೆ ಪಾತ್ರರಾದರು. ಮಹಾಭಾರತ, ರಾಮಾಯಣ ಮುಂತಾದ ಪುರಾಣ ಕಥನಗಳ ಪಠಣದ ಮೂಲಕ ಅಧ್ಯಾತ್ಮದತ್ತ ಒಲವು ಬೆಳೆಸಿಕೊಂಡರು.

ವೀರೇಗೌಡರು ಕೃಷಿಕ ಕುಟುಂಬದ ಒಕ್ಕಲಿಗನ ಮಗನಾಗಿ ಹುಟ್ಟಿ ಬೆಳೆಸಿಕೊಂಡು ಬಂದ ಸಂಸ್ಕಾರ ಗುಣಗಳಿಂದಾಗಿ ಮೈಸೂರಿನ ವೇದಾಂತಿಗಳೆಂದೇ ಹೆಸರುವಾಸಿಯಾದ ಶಿವರಾಮಶಾಸ್ತ್ರಿಗಳ ಪರಿಚಯ ಮಾಡಿಕೊಂಡರು. ನಂತರ ಅವರನ್ನು ಪ್ರತಿವಾರ ಕೀಲಾರ ಗ್ರಾಮಕ್ಕೆ ಆಹ್ವಾನಿಸಿ ಶಂಕರಾಚಾರ್ಯರ ಪರಂಪರೆಯ ಅಮನಸ್ಕ ಯೋಗಾನಂದ ಬೋಧೆ ಮತ್ತು ಪ್ರಮಾಣ ಸಾಗರ, ಶಂಕರ ಗುರುವಿಲಾಸ, ಶಂಕರ ಬೋಧಾಮೃತ ಮುಂತಾದ ಕೃತಿಗಳನ್ನು ಸ್ವತಃ ಅಧ್ಯಯನ ಮಾಡಿದ್ದಲ್ಲದೆ ಇವುಗಳ ಲಾಭ ತನ್ನೂರಿನ ಜನತೆಗೂ ತಲುಪಬೇಕೆಂಬ ಅಭಿಲಾಷೆಯಿಂದ ಊರಿನ ಬೋರೇದೇವರ ದೇವಸ್ಥಾನದ ಸನ್ನಿಧಿಯಲ್ಲಿ ಪ್ರತಿವಾರ ಉಪನ್ಯಾಸ ಕಾರ್ಯಕ್ರಮ ಏರ್ಪಡಿಸಿದರು. ನಂತರ ಹರಿಕಥೆ, ಪ್ರವಚನ, ಭಜನೆ ಇವುಗಳಿಗಾಗಿ ತಾವೇ ಮುಂದೆ ನಿಂತು ಊರಿನಲ್ಲಿ ಶಂಕರಮಠ ಒಂದನ್ನು ನಿರ್ಮಿಸಿದರು. ಪೌರಾಣಿಕ ನಾಟಕಗಳಲ್ಲಿ ಅಭಿನಯಿಸಿ ಉತ್ತಮ ಕಲಾವಿದ ಎಂಬ ಬಿರುದುಗಳಿಸಿದ್ದ ವೀರೇಗೌಡರು ಕೆಲವೊಮ್ಮೆ ಶಾಸ್ತ್ರಿಗಳ ಅನುಪಸ್ಥಿತಿಯಲ್ಲಿ ತಾವೇ ಪ್ರವಚನ ಮಾಡುವುದರ ಮೂಲಕ, ಗ್ರಾಮ ಮಟ್ಟದಲ್ಲೂ ಕಲೆ-ಸಂಸ್ಕೃತಿಗಳ ಉಳಿವಿಗಾಗಿ ಶ್ರಮಿಸಿದರು.

ವೀರೇಗೌಡ ಹಾಗೂ ಅವರ ಪತ್ನಿ ಗೆಜ್ಜಲಗೆರೆ ವೀರಮ್ಮ ದಂಪತಿಗಳಿಗೆ ಜನಿಸಿದ ಎಂಟು ಮಂದಿ ಮಕ್ಕಳಲ್ಲಿ ಶಂಕರಗೌಡರು ಮೂರನೆಯವರು.

ಮೊದಲ ಮಗ ತಮ್ಮಯ್ಯನವರು ಸಹ ತಂದೆಯಂತೆ ನಾಟಕ ಪ್ರಿಯ. ನಂತರ ಜನಿಸಿದ ಹೆಣ್ಣುಮಗಳು ತಾಯಮ್ಮ. ಇವರ ನಂತರ 15-7-1915ರಲ್ಲಿ ಮೂರನೇ ಮಗುವಾಗಿ ಶಂಕರಗೌಡರ ಜನನ. ಬಾಲ್ಯದಲ್ಲಿ ತನ್ನ ಅಣ್ಣನೊಡನೆ ಕೀಲಾರದಲ್ಲೆ ಸರ್ಕಾರಿ ಶಾಲೆಯಾಗಿ ಪರಿವರ್ತನೆಗೊಂಡಿದ್ದ ಕೂಲಿಮಠದಲ್ಲಿ ಅಕ್ಷರ ಅಭ್ಯಾಸ ನಡೆಸುವುದರ ಮೂಲಕ ಶಿಕ್ಷಣಕ್ಕೆ ಗೌಡರು ಪಾದಾರ್ಪಣೆ ಮಾಡಿದರು. ಶಂಕರಗೌಡರಿಗೆ ಬಾಲ್ಯದಿಂದಲೇ ತಂದೆಯ ಪ್ರಭಾವದಿಂದ ಹರಿಕಥೆ, ನಾಟಕ, ಭಜನೆ ಇವುಗಳಲ್ಲಿ ವಿಶೇಷ ಆಸಕ್ತಿ ಮೂಡಿತ್ತು. ಬಹು ತೀಕ್ಷ್ಣಮತಿಯಾದ ಶಂಕರಗೌಡರು ಬಾಲ್ಯದಲ್ಲೇ ತಮಗೆ ಅರಿವಿಲ್ಲದಂತೆ ವೈಚಾರಿಕ

ಮನೋಭಾವನೆಯನ್ನು ಬೆಳೆಸಿಕೊಂಡಿದ್ದರು. ಶಂಕರಗೌಡರ ತಂದೆಯವರ ಆತ್ಮೀಯರಾಗಿ ಕೀಲಾರ ಗ್ರಾಮಕ್ಕೆ ಪ್ರತಿವಾರ ಬಂದು ಪ್ರವಚನ ನೀಡುತ್ತಿದ್ದ ಶಿವರಾಮಶಾಸ್ತ್ರಿಗಳು ಉಪನ್ಯಾಸ ಮುಗಿದ ನಂತರ ಪೂಜೆ ನೆರವೇರಿಸಿ ಗ್ರಾಮಸ್ಥರಿಗೂ ಪ್ರಸಾದ ನೀಡುವ ಪದ್ಧತಿ ರೂಢಿಯಲ್ಲಿತ್ತು. ಆ ವೇಳೆಯಲ್ಲಿ ಗ್ರಾಮಸ್ಥರು ಸಹ ಶಾಸ್ತ್ರಿಯವರ ಪಾದತೊಳೆದು ಆ ನೀರನ್ನು ಪಾದೋದಕ ಎಂದು ಸ್ವೀಕರಿಸುತ್ತಿದ್ದರು. ಬಾಲಕನಾಗಿದ್ದ ಶಂಕರಗೌಡರಿಗೆ ಇದು ಸರಿಕಾಣಲಿಲ್ಲ. ತಂದೆಯ ಆಣತಿಗೆ ಎದುರಾಗಿ ಪಾದೋದಕ ಸ್ವೀಕರಿಸಲು ಶಂಕರಗೌಡರು ನಿರಾಕರಿಸುವುದರ ಮೂಲಕ ಬಾಲ್ಯದಲ್ಲೆ ಕಂದಾಚಾರ-ಮೂಢನಂಬಿಕೆಗಳಿಗೆ ತಿಲಾಂಜಲಿ ಇತ್ತರು.

ಇದೇ ಸಮಯದಲ್ಲಿ ದಸರಗುಪ್ಪೆ ರಾಮಯ್ಯ ಎಂಬುವರು ತಮ್ಮ ಮಡದಿಯ ನಿಧನಾನಂತರ ಗುರುಬೋಧನೆ ಸ್ವೀಕರಿಸಿ, ಆದಿ ಚುಂಚನಗಿರಿ ಮಠ ಸೇರಿದ್ದರು. ಅವರು ಶಂಕರಗೌಡರ ತಂದೆಯ ಮಿತ್ರರಾಗಿದ್ದರಿಂದ ಹಾಗೊಮ್ಮೆ-ಹೀಗೊಮ್ಮೆ ಕೀಲಾರಕ್ಕೆ ಬಂದು ವಾರಗಟ್ಟಲೆ ಶಂಕರಗೌಡರ ಮನೆಯಲ್ಲಿ ತಂಗುತ್ತಿದ್ದರು. ಬಾಲಕ ಶಂಕರಗೌಡರಿಗೆ ಪ್ರಶ್ನೆಗಳಿಗೆ ತಣಿಯದ್ದ ಪ್ರಶ್ನೆಗಳಿಗೆ, ಕುತೂಹಲದ ದಾಹಗಳಿಗೆ ರಾಮಯ್ಯ ಉತ್ತರಿಸುವುದರ ಮೂಲಕ ಶಂಕರಗೌಡರ ವೈಚಾರಿಕ ಪ್ರಜ್ಞೆಯ ಬೆಳವಣಿಗೆಗೆ ಸಹಕಾರಿಯಾದರು.

ಬಾಲಕ ಶಂಕರಗೌಡರು 12ನೇ ವಯಸ್ಸಿಗೆ ತನ್ನೂರಿನಲ್ಲಿ ಔಪಚಾರಿಕ ಪ್ರಾಥಮಿಕ ಶಿಕ್ಷಣ ಮುಗಿಸಿದ ನಂತರ ಮಾಧ್ಯಮಿಕ ಶಾಲೆಗೆ ಮಂಡ್ಯ ನಗರ ಸೇರುವ ಪ್ರಮೇಯ ಬಂತು. ಆದರೆ ಆ ಕಾಲದಲ್ಲಿ ಖಾಸಗಿಯಾಗಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆ ಕಟ್ಟುವ ಅವಕಾಶ ಇತ್ತು. ಖಾಸಗಿಯಾಗಿ ಓದಿ ತೇರ್ಗಡೆಯಾದ ವಿದ್ಯಾರ್ಥಿಗಳು ಮಾಧ್ಯಮಿಕ ಶಾಲೆ ಸೇರಿ, ಇಂಗ್ಲೀಷ್ ಮಾತ್ರ ಓದಿ ಎರಡೇ ವರ್ಷಗಳಲ್ಲಿ ಅಂತಿಮ ಪರೀಕ್ಷೆ ತೆಗೆದುಕೊಳ್ಳಬಹುದಾಗಿತ್ತು. ಅಂದು ಕೀಲಾರದಲ್ಲಿ ಶಾಲಾ ಶಿಕ್ಷಕರಾಗಿದ್ದ ಬೂತನಹೊಸೂರು ಮರೀಗೌಡ ಎಂಬುವರು ಶಂಕರಗೌಡರ ನೆರವಿಗೆ ಬಂದರು. ಮರೀಗೌಡರ ಮನೆಯಲ್ಲಿ ಶ್ರದ್ಧೆಯಿಂದ ಓದಿ ಮನೆಪಾಠ ಹೇಳಿಸಿಕೊಂಡ ಶಂಕರಗೌಡ ಶ್ರೀರಂಗಪಟ್ಟಣದಲ್ಲಿ ನಡೆಯುತ್ತಿದ್ದ ಪರೀಕ್ಷೆಗೆ ಹಾಜರಾಗಿ, ಖಾಸಗಿಯಾಗಿ ಓದುತ್ತಿದ್ದ ವಿದ್ಯಾರ್ಥಿಗಳಲ್ಲೆ ಅತಿ ಹೆಚ್ಚು ಅಂಕ ಗಳಿಸಿ ಬುದ್ದಿವಂತ ವಿದ್ಯಾರ್ಥಿ ಎನಿಸಿಕೊಂಡರು.

ಮುಂದೆ ಅನಿವಾರ್ಯವಾಗಿ ಎಲ್.ಎಸ್.ಪರೀಕ್ಷೆಗೆ ಮಂಡ್ಯ ನಗರ ಸೇರಬೇಕಾಗಿ ಬಂತು. ತಂದೆ ವೀರೇಗೌಡರು ಮಂಡ್ಯ ನಗರ ಸಮೀಪದ ಕೊಮ್ಮೇರಹಳ್ಳಿಯಲ್ಲಿ ಇದ್ದ ಸಂಬಂಧಿಕರ ಮನೆಯಲ್ಲಿ ಶಂಕರಗೌಡರನ್ನು ಇರಿಸಿ ಮಂಡ್ಯದ ಶಾಲೆಗೆ ಸೇರಿಸಿದ್ದರು, ಆ ದಿನಗಳಲ್ಲಿ ಎಲ್.ಎಸ್.ಪರೀಕ್ಷೆಗೆ ವಿಶೇಷ ಮಾನ್ಯತೆ ಇತ್ತು. ಇಂದಿನ ಪದವಿಗೆ ಸಮನಾಗಿದ್ದ ಎಲ್.ಎಸ್. ಪರೀಕ್ಷೆ ಪಾಸು ಮಾಡಿದ ಶಂಕರಗೌಡರು ಪ್ರೌಢಶಾಲೆಗೆ ಮೈಸೂರು-ಬೆಂಗಳೂರು ಅಥವಾ ಚನ್ನಪಟ್ಟಣಕ್ಕೆ ಸೇರಬೇಕಾಗಿತ್ತು. ತಂದೆ ಹಾಗೂ ಸಹೋದರರ ಒತ್ತಾಸೆ ಮತ್ತು

ಸಹಕಾರದಿಂದ ಶಂಕರಗೌಡರು ಚನ್ನಪಟ್ಟಣದಲ್ಲಿ ಪ್ರೌಢಶಾಲೆಗೆ ಸೇರಿ, ವಸತಿ ನಿಲಯಕ್ಕೆ ದಾಖಲಾದರು.

1930ರಲ್ಲಿ ನೀಳಜಡೆ ಇದ್ದು ಖಾದಿ ವಸ್ತ್ರ, ಟೋಪಿ ಧರಿಸಿ ಬರಿಗಾಲಲ್ಲಿ ನಡೆದಾಡುತ್ತಿದ್ದ ಶಂಕರಗೌಡರು ವಸತಿ ನಿಲಯದಲ್ಲಿ ಪ್ರತಿವಾರ ನಡೆಯುತ್ತಿದ್ದ ಪ್ರಾರ್ಥನೆ, ಭಜನೆಯಲ್ಲಿ ಪಾಲ್ಗೊಂಡು ಎಲ್ಲರ ಗಮನ ಸೆಳೆದರು. ಪ್ರೌಢಶಿಕ್ಷಣದ ಸಮಯದಲ್ಲೇ ಗೌಡರು ಪಠ್ಯಪುಸ್ತಕಗಳ ಜೊತೆಗೆ ಇತರೆ ಸಾಹಿತ್ಯ ಕೃತಿಗಳತ್ತ ಆಸಕ್ತಿ ಬೆಳೆಸಿಕೊಂಡರು. ಅಂದಿನ ಕಾಲದಲ್ಲಿ ಜನಪ್ರಿಯವಾಗಿದ್ದ ಗಳಗನಾಥರ ಕಾದಂಬರಿ, ಬಿಂಡಿಗನವಿಲೆ ವೆಂಕಟಾಚಾರ್ಯರ ಅನುವಾದಿತ ಬಂಗಾಳಿ ಕಾದಂಬರಿಗಳು, ಸರ್ವಜ್ಞನ ವಚನಗಳು, ಸೋಮೇಶ್ವರ ಶತಕ ಮುಂತಾದ ಕೃತಿಗಳ ಜೊತೆಗೆ ರಾಬಿನ್‌ಸನ್ ಕ್ರೂಸೋನ ಆಂಗ್ಲ ಸಾಹಸಮಯ ಕೃತಿಗಳನ್ನು ಓದಿ ಮುಗಿಸಿದರು.

ಸಾಹಿತ್ಯ ಕೃತಿಗಳ ಜೊತೆಗೆ ದಿನಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡ ಅವರು ಅಂದು ಪ್ರಕಟವಾಗುತ್ತಿದ್ದ "ತಾಯಿನಾಡು" ಪತ್ರಿಕೆಯನ್ನು ಓದುತ್ತಾ, ನಾಡಿನ-ರಾಷ್ಟ್ರದ ರಾಜಕೀಯ ಚಟುವಟಿಕೆಗಳ ಬಗ್ಗೆ ಆಸಕ್ತಿ ಬೆಳೆಸಿಕೊಂಡರು.

1931ರಲ್ಲಿ ಕರ್ನಾಟಕಕ್ಕೆ ಬಂದಿದ್ದ ಗಾಂಧಿಜೀ, ತಮ್ಮ ಮೈಸೂರು ಪ್ರವಾಸದ ನಡುವೆ ಚನ್ನಪಟ್ಟಣದಲ್ಲಿ ನಡೆಸಿದ ಸಾರ್ವಜನಿಕ ಸಭೆಯಲ್ಲಿ ಪಾಲ್ಗೊಂಡ ಕೆ.ವಿ. ಶಂಕರಗೌಡರು ಸ್ವಾತಂತ್ರ್ಯ ಹೋರಾಟದ ಬಗ್ಗೆ ಆಸಕ್ತಿ ತಾಳಿದರು.

ಪ್ರೌಢಶಾಲೆಯ ಹಂತದಲ್ಲಿ ಕಲೆ-ಸಂಸ್ಕೃತಿ ಜೊತೆಗೆ ವೈಚಾರಿಕ ಪ್ರಜ್ಞೆ ಬೆಳೆಸಿಕೊಂಡ ಶಂಕರಗೌಡರು ಧಾರ್ಮಿಕ ಅಂಧಶ್ರದ್ಧೆ, ಕಂದಾಚಾರ, ಜಾತಿಧರ್ಮಗಳ ಬಗ್ಗೆ ಅಸಹನೆ ತಾಳಿದ್ದರು. ತನ್ನ ಜೊತೆ ಓದುತ್ತಿದ್ದ ಕೆಳಜಾತಿಯ ಸಹಪಾಠಿಯೊಬ್ಬನನ್ನು ತನ್ನೂರಿಗೆ ಕರೆದೊಯ್ದು ಸಹ ಭೋಜನ ಮಾಡಿ ತನ್ನ ಹೃದಯವಂತಿಕೆ ಮೆರೆದರು. ನಿರೀಕ್ಷೆಯಂತೆ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನೂ ಶಂಕರಗೌಡರು ಉನ್ನತ ದರ್ಜೆಯಲ್ಲಿ ಪಾಸು ಮಾಡಿದರು. ಗೌಡರು ಪರೀಕ್ಷೆಯ ನಂತರ ಯಾವುದಾದರೂ ಸರ್ಕಾರಿ ಉದ್ಯೋಗ ಸೇರಬೇಕೆಂದು ಅವರ ಸಹೋದರ ತಮ್ಮಯ್ಯನವರ ಅಭಿಲಾಷೆಯಾಗಿತ್ತು, ಆದರೆ ಆ ಹೊತ್ತಿಗಾಗಲೆ ಶಂಕರಗೌಡರ ಇತರ ಸಹೋದರರು ಓದಿಗೆ ಶರಣು ಹೊಡೆದು, ತಮ್ಮ ಕುಟುಂಬದ ಮೂಲ ಕಸುಬಾದ ಕೃಷಿಯತ್ತ ಒಲಿದಿದ್ದರು ಹಾಗಾಗಿ ಕುಟುಂಬದ ಏಕೈಕ ವಿದ್ಯಾವಂತರಾಗಿ ಬೆಳೆಯುತ್ತಿದ್ದ ಶಂಕರಗೌಡರ ಬದುಕನ್ನು ಚಿವುಟಿ ಹಾಕಲು ಅವರ ತಂದೆ ವೀರೇಗೌಡರಿಗೆ ಮನಸ್ಸು ಬರಲಿಲ್ಲ. ಜೊತೆಗೆ ಶಂಕರಗೌಡರನ್ನು ಆಸ್ತಿ ಮಾರಿಯಾದರೂ ಓದಿಸುತ್ತೇನೆ ಎಂದು ಗೆಳೆಯರಿಗೆ, ಹಿತೈಷಿಗಳಿಗೆ ಅವರು ವಾಗ್ದಾನ ನೀಡಿದ್ದರು.

ಇದರಿಂದಾಗಿ ವೀರೇಗೌಡರು ತಮ್ಮ ಪುತ್ರ ಶಂಕರಗೌಡರನ್ನು ಮೈಸೂರಿನಲ್ಲಿ ಇಂಟರ್ ಮಿಡಿಯಟ್‌ಗೆ ಸೇರಿಸುವುದು ಅನಿವಾರ್ಯವಾಯಿತು. ಮೈಸೂರಿನಲ್ಲಿ ವೀರೇಗೌಡರಿಗೆ

ಪರಿಚಿತರಾಗಿದ್ದ ಚೌಡಯ್ಯ ಎಂಬುವರು ರೈಲ್ವೆ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದರು. ಅವರ ಮನೆಯಲ್ಲಿ ವಸತಿ ವ್ಯವಸ್ಥೆ ಏರ್ಪಡಿಸಿ ಚೌಡಯ್ಯನವರಿಗೆ ತಿಂಗಳಿಗೆ 10ರೂ. ನಂತೆ ಊಟ-ವಸತಿ ವೆಚ್ಚ ಕೊಡಲು ಒಪ್ಪಿದರು.

ರೈಲ್ವೆ ಕಾಲೋನಿಯಲ್ಲಿದ್ದ ಚೌಡಯ್ಯನವರ ಮನೆಗೆ ಸೇರಿದ ಶಂಕರಗೌಡರ ವೇಷ-ಭೂಷಣ ಮೈಸೂರು ನಗರದಲ್ಲೂ ವಿದ್ಯಾಭ್ಯಾಸದ ಅವಧಿಯಲ್ಲಿ ಯಾವ ಬದಲಾವಣೆ ಕಾಣಲಿಲ್ಲ. ಎಂದಿನಂತೆ ಬರಿಗಾಲಲ್ಲೆ ರೈತನ ಮಗನಾಗಿ ಕಾಲೇಜು ಸೇರಿದ ಗೌಡರು, ತಮ್ಮ ಆಸಕ್ತಿಯ ವಿಷಯಗಳಾದ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರಗಳನ್ನು ತೆಗೆದುಕೊಂಡು ಶಿಕ್ಷಣ ಮುಂದುವರಿಸಿದರು. ಅಂದು ಕಾಲೇಜಿನಲ್ಲಿ ಗೌಡರಿಗೆ ಎಸ್.ವಿ. ರಂಗಣ್ಣನವರಂತಹ ಪ್ರಾಧ್ಯಾಪಕರು, ತ್ಯಾಗರಾಜನ್‌ರಂತಹ ಉಪನ್ಯಾಸಕರು ಗುರುಗಳಾಗಿದ್ದರಲ್ಲದೆ, ರಸಋಷಿ ಕುವೆಂಪು ಸದಾ ಧ್ಯಾನಸ್ಥ ಮನಸ್ಥಿತಿಯಲ್ಲಿ ಇದ್ದಂತೆ ತೋರುತ್ತಿದ್ದರು. ಜೊತೆಗೆ ತಲ್ಲೀನರಾಗಿ ಪಾಠಮಾಡುತ್ತಿದ್ದ ಅವರ ನೆನಪು ಶಂಕರಗೌಡರ ಬದುಕಿನ ಕೊನೆಯವರೆಗೂ ಅಚ್ಚಳಿಯದೆ ಉಳಿದಿತ್ತು.

ಇಂಟರ್ ಮೀಡಿಯಟ್ ಓದುತ್ತಿದ್ದ ಗೌಡರು ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಕಾರಣ ಅವರಿಗೆ ವಿದ್ಯಾರ್ಥಿ ವೇತನ ದೊರಕಿತು. ಇದು ಅವರ ಆರ್ಥಿಕ ಸ್ಥಿತಿ ಸುಧಾರಿಸುವಲ್ಲಿ ಸಹಕಾರಿಯಾಯಿತು. ಕಾಲೇಜ್ ಶಿಕ್ಷಣಕ್ಕೆ ಬಂದ ನಂತರ ಗೌಡರು ತಮ್ಮ ನೀಳ ಜಡೆ ಕತ್ತರಿಸಿ ಕ್ರಾಪಿನ ವೇಷಕ್ಕೆ ಒಲಿದರು. 1935ರಲ್ಲಿ ಅನೇಕ ನಾಟಕಗಳು, ವಿವೇಕಾನಂದರ ಜೀವನಗಾಥೆ, ಮತ್ತು ಬೋಧನೆ ಇವುಗಳನ್ನೆಲ್ಲಾ ಓದಿ ಮುಗಿಸಿದರು. 1935ರಲ್ಲಿ ಮೈಸೂರಿನಲ್ಲಿ ಇಂಟರ್ ಮೀಡಿಯಟ್ ಮುಗಿಸಿದ ಗೌಡರು, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ ಪದವಿಗೆ ಸೇರಿದರು. ಅವರ ಅದೃಷ್ಟಕ್ಕೆ ಚೌಡಯ್ಯನವರ ಇನ್ನೊಬ್ಬ ತಮ್ಮ ಸಿದ್ದಯ್ಯ ರೈಲ್ವೆ ಉದ್ಯೋಗಿಯಾಗಿ ಬೆಂಗಳೂರಿನಲ್ಲಿ ಇದ್ದುದರಿಂದ ವಸತಿ ಸಮಸ್ಯೆ ಉಂಟಾಗಲಿಲ್ಲ.

ಮೊದಲನೇ ವರ್ಷದ ಬಿ.ಎಸ್ಸಿ., ಪದವಿ ಶಿಕ್ಷಣವನ್ನು ಗಂಭೀರವಾಗಿಯೇ ಪರಿಗಣಿಸಿದ್ದ ಗೌಡರು ಪರೀಕ್ಷೆಯಲ್ಲಿ ಮಾತ್ರ ಎಡವಿದರು. ಪರೀಕ್ಷಾ ವೇಳಾಪಟ್ಟಿಯ ಬಗ್ಗೆ ತಪ್ಪುಗ್ರಹಿಕೆಯಿಂದಾಗಿ ಮೊದಲನೇ ವರ್ಷ ಕೆಲವು ವಿಷಯಗಳ ಪರೀಕ್ಷೆಗೆ ಹಾಜರಾಗಲು ಗೌಡರಿಗೆ ಸಾಧ್ಯವಾಗಲಿಲ್ಲ, ಆದ್ದರಿಂದ ಮೊದಲ ವರ್ಷ ಪರೀಕ್ಷೆಯಲ್ಲಿ ಫೇಲಾದ ಗೌಡರು ತಮ್ಮ ಹಳ್ಳಿಗೆ ಹಿಂದಿರುಗುವ ಬದಲು ಬೆಂಗಳೂರು ನಗರ ಸಭೆಯಲ್ಲಿ ಕಂದಾಯ ವಸೂಲಿ ಮಾಡುವ ಶಾನುಭೋಗ ಹುದ್ದೆಗೆ ಸೇರಿದರು.

ಆದರೆ ಕೆಲಸಕ್ಕೆ ಸೇರಿದ ಅಲ್ಪ ಸಮಯದಲ್ಲೇ ಅಲ್ಲಿನ ಮೇಲಧಿಕಾರಿಯೊಬ್ಬರು ಜಾತಿಯ ಹೆಸರಿನಲ್ಲಿ ನಿಂದಿಸಿದ ಕಾರಣಕ್ಕಾಗಿ ಕೆಂಡಾಮಂಡಲವಾದ ಗೌಡರು ಉದ್ಯೋಗಕ್ಕೆ ರಾಜೀನಾಮೆ ಇತ್ತು ಮಂಡ್ಯಕ್ಕೆ ಹಿಂದಿರುಗಿದರು.

ಆ ವೇಳೆಗಾಗಲೇ ದೇಶದಲ್ಲೆಡೆ ಸ್ವಾತಂತ್ರ್ಯ ಹೋರಾಟ ತೀವ್ರ ಕಾವು ಪಡೆದುಕೊಂಡಿತ್ತು. ಮದ್ದೂರಿನ ಬಳಿ ಶಿವಪುರದಲ್ಲಿ ಧ್ವಜ ಸತ್ಯಾಗ್ರಹ ಕಾರ್ಯಕ್ರಮಕ್ಕೆ ಸಿದ್ಧತೆ ನಡೆದಿತ್ತು. ಗೌಡರು ಈ ಸ್ವಾತಂತ್ರ್ಯ ಹೋರಾಟದಲ್ಲಿ ಸ್ವಯಂಸೇವಕರಾಗಿ ದುಡಿದರಲ್ಲದೆ, ನಂತರ ಗೌರಿಬಿದನೂರಿನ ವಿದುರಾಶ್ವತ ಚಳುವಳಿಯಲ್ಲಿ ಕೂಡ ಪಾಲ್ಗೊಂಡರು. ಮತ್ತೆ ಬೆಂಗಳೂರಿಗೆ ಹಿಂದಿರುಗಿದ ಗೌಡರು 1940ರಲ್ಲಿ ಬಿ.ಎಸ್ಸಿ ಪದವಿ ಮುಗಿಸಿದರು.

ಆ ವೇಳೆಗಾಗಲೇ ಶಂಕರಗೌಡರ ತಂದೆ ವೀರೇಗೌಡರು ಅಸು ನೀಗಿದ್ದರು. ತಂದೆಯನ್ನು ಕಳೆದುಕೊಂಡ ದುಃಖದಲ್ಲಿ ಅನಾಥಪ್ರಜ್ಞೆಯಿಂದ ನರಳುತ್ತಿದ್ದ ಗೌಡರಿಗೆ ಕಾನೂನು ಓದುವ ಆಸೆ ಹುಟ್ಟಿತು. ಆ ಕಾಲದಲ್ಲಿ ಲಾ ಕಾಲೇಜಿಗೆ ಸೇರಲು ಗೌಡರು ಬೆಳಗಾಂ ಅಥವಾ ಮದ್ರಾಸ್ ನಗರಗಳಿಗೆ ಹೋಗಬೇಕಾಗಿತ್ತು. ಆದರೆ ತಂದೆಯ ನಿಧನಾನಂತರ ಗೌಡರಿಗೆ ಶಿಕ್ಷಣ ಮುಂದುವರೆಸುವ ನಿಟ್ಟಿನಲ್ಲಿ ಯಾವುದೇ ಉತ್ತೇಜನ ಇರಲಿಲ್ಲ. ಇಂತಹ ಸಂಕಷ್ಟ ಸ್ಥಿತಿಯಲ್ಲಿ ಗೌಡರ ನೆರವಿಗೆ ಬಂದವರು ಗೌಡರ ಸಹಪಾಠಿಗಳೂ, ಗೆಳೆಯರೂ ಆಗಿದ್ದ ಎಂ.ಎಚ್.ಮರೀಗೌಡ ಮತ್ತು ಡಿ. ಲಿಂಗೇಗೌಡ (ಇವರಲ್ಲಿ ಮರೀಗೌಡರು ತೋಟಗಾರಿಕೆ ಇಲಾಖೆ ನಿರ್ದೇಶಕರಾಗಿ ಇತಿಹಾಸ ಸೃಷ್ಟಿಸಿದರು) ತಮಗೆ ಮನೆಯಿಂದ ಬರುತ್ತಿದ್ದ ಹಣವನ್ನು ಶಂಕರಗೌಡರಿಗೆ ಕೊಟ್ಟು ಬೆಳಗಾಂ ರೈಲು ಹತ್ತಿಸಿದವರು. ಈ ಗೆಳೆಯರ ಸಹಾಯವನ್ನು ಗೌಡರು ಕಡೆ ಕ್ಷಣದವರೆಗೂ ನೆನಪಿಸಿಕೊಳ್ಳುತ್ತಿದ್ದರು. ಬೆಳಗಾಂ ನಗರ ತಲುಪಿದ ಗೌಡರು ಕಾಲೇಜಿಗೆ ದಾಖಲಾಗಿ ವಸತಿನಿಲಯ ಸೇರಿದರು. ಸ್ನೇಹಿತರು ಕಳಿಸಿದ ಹಣ ಮೊದಲ ತಿಂಗಳಿಗೆ ಸಾಕಾಯ್ತು, ಎರಡನೇ ತಿಂಗಳು ಮನೆಯಿಂದ ಹಣ ಬರಬಹುದೆಂಬ ಗೌಡರ ನಿರೀಕ್ಷೆ ಹುಸಿಯಾಯಿತು. ಕಡೆಗೆ ನಿರಾಶರಾಗಿ ಕಾನೂನು ಶಿಕ್ಷಣಕ್ಕೆ ವಿದಾಯ ಹೇಳಲು ನಿರ್ಧರಿಸಿ, ಕಾಲೇಜಿನ ಪ್ರಾಂಶುಪಾಲರ ಬಳಿ ತೆರಳಿದ ಗೌಡರು ತಮ್ಮ ಪರಿಸ್ಥಿತಿಯನ್ನು ವಿವರಿಸಿದರು.

ನೋಡಲು ದೈತ್ಯರಾಗಿದ್ದ ಪ್ರಾಂಶುಪಾಲ ಪ್ರೊ. ಕೇಳ್ಕರ್ ಅಷ್ಟೇ ಹೃದಯ ವೈಶಾಲ್ಯ ಹೊಂದಿದ್ದರು. ಗೌಡರ ಸ್ಥಿತಿ ಅರ್ಥಮಾಡಿಕೊಂಡ ಅವರು ಗೌಡರಿಗೆ ಶುಲ್ಕದಿಂದ ವಿನಾಯಿತಿ ದೊರಕಿಸಿ ಕೊಟ್ಟುದ್ದಲ್ಲದೆ, ವಿದ್ಯಾರ್ಥಿವೇತನ ಕೊಡಿಸುವಲ್ಲಿ ಸಹಕರಿಸಿದರು. ಪ್ರಾಂಶುಪಾಲರ ಪ್ರೀತಿ-ಕಾಳಜಿಗಳಿಂದ ಶಂಕರಗೌಡರು ಕಾನೂನು ಶಿಕ್ಷಣವನ್ನು ಗಂಭೀರವಾಗಿಯೇ ತೆಗೆದುಕೊಂಡರೂ ಸಹ ಮೊದಲ ವರ್ಷ ಅನುತ್ತೀರ್ಣರಾದರು. ತಮ್ಮ ಬದುಕಿನ ಅಸ್ಥಿರತೆ ಹಾಗೂ ಸ್ವಾತಂತ್ರ್ಯದ ಹೋರಾಟದ ಬಗೆಗಿನ ಆಸಕ್ತಿ ಗೌಡರಿಗೆ ಶಿಕ್ಷಣದ ಬಗೆಗಿನ ಒಲವನ್ನು ಕಡಿಮೆ ಮಾಡಿತ್ತು. ನಂತರ ಮಂಡ್ಯಕ್ಕೆ ಹಿಂದಿರುಗಿದ ಗೌಡರು ಒಂದು ವರ್ಷಕಾಲ ಶಿಕ್ಷಕರಾಗಿ ಶಾಲೆಯಲ್ಲಿ ಪಾಠಮಾಡಿದರು, ಈ ಅವಧಿಯಲ್ಲಿ ಶಂಕರ ಗೌಡರ ವ್ಯಕ್ತಿತ್ವಕ್ಕೆ ಮರುಹೋದ ಬೆಟ್ಟಶೆಟ್ಟರು ಗೌಡರ ಶಿಷ್ಯರಾಗಿ ನಂತರ ಅವರ ಕಟ್ಟ ಅನುಯಾಯಿಯಾದರು. ಅವರ ಗೌಡರ ಬದುಕಿನ ಕೊನೆಯವರೆಗೆ ಅವರ ಸಂಗಾತಿಯಾಗಿ ಎಲ್ಲಾ ರಂಗಗಳಲ್ಲೂ ದುಡಿದರು.

ಇದೇ ವೇಳೆಗೆ ಗೌಡರ ಶಿಕ್ಷಣಕ್ಕೆ ಆರ್ಥಿಕ ನೆರವು ಹಾಗೂ ಒಳ್ಳೆ ಭವಿಷ್ಯ ರೂಪಿಸುವ ನಿಟ್ಟಿನಲ್ಲಿ ಯೋಚಿಸಿದ ಗೌಡರ ಅಣ್ಣ, ತಮ್ಮ ದೂರದ ಸಂಬಂಧಿಗಳೂ, ಪರಿಚಿತರೂ ಆದ ಹೊನ್ನಾಯ್ಕನಹಳ್ಳಿ ಸಿಂಗ್ರೀಗೌಡರ ಪುತ್ರಿ ಶುಶೀಲಮ್ಮನವರ ಜೊತೆ ಮದುವೆ ವಿಷಯ ಪ್ರಸ್ತಾಪಿಸಿದರು. ಪ್ರಾರಂಭದಲ್ಲಿ ಮದುವೆ ಬೇಡ ಎನ್ನುತ್ತಿದ್ದ ಗೌಡರು, ಕಾನೂನು ಶಿಕ್ಷಣವನ್ನು ಯಾವ ಅಡೆ-ತಡೆ ಇಲ್ಲದೆ ಮುಗಿಸುವ ಆಸೆಯಿಂದ, ಸುಶೀಲಮ್ಮನವರನ್ನು ತಮ್ಮ ಬಾಳ ಸಂಗಾತಿಯನ್ನಾಗಿ ಸ್ವೀಕರಿಸಲು ಒಪ್ಪಿ, ಮದುವೆ ಒಪ್ಪಂದ ಮಾಡಿಕೊಂಡರು. ನಂತರ ತಮ್ಮ ಮಾವ ಸಿಂಗ್ರೀಗೌಡರ ಆರ್ಥಿಕ ನೆರವಿನಿಂದ ಬೆಳಗಾಂಗೆ ತೆರಳಿದ ಗೌಡರು ಶಿಕ್ಷಣ ಮುಂದುವರೆಸಿದರು. ಶಿಕ್ಷಣದ ನಡುವೆಯೂ ಸ್ವಾತಂತ್ರ್ಯ ಹೋರಾಟದ ಕಡೆಗಿನ ಅವರ ಒಲವು ಮಾತ್ರ ಅವರನ್ನು ಬಿಡಲಿಲ್ಲ. 1942ರಲ್ಲಿ ಚಲೆಜಾವ್ ಚಳುವಳಿ ದೇಶಾದ್ಯಂತ ನಡೆಯುತ್ತಿದ್ದಂತೆ, ಬೆಳಗಾಂ ನಗರದಲ್ಲೂ ನಡೆದಾಗ ಶಂಕರಗೌಡರು ಅದರಲ್ಲಿ ಭಾಗಿಯಾಗಿ ಪೋಲೀಸರ ಕೆಂಗಣ್ಣಿಗೆ ಗುರಿಯಾದರು. ಗೌಡರ ಬಂಧನಕ್ಕೆ ಪೋಲಿಸರು ಕಾಲೇಜಿಗೆ ತೆರಳಿದಾಗ, ಶಿಷ್ಯನ ಸ್ವಾತಂತ್ರ್ಯ ಹೋರಾಟದ ಪ್ರೇಮಕ್ಕೆ ಪ್ರಾಂಶುಪಾಲರು ಅವಕ್ಕಾದರೂ ನಂತರ ಪೊಲೀಸರಿಂದ ಗೌಡರ ಬಂಧನವನ್ನು ತಪ್ಪಿಸುವಲ್ಲಿ ಯಶಸ್ವಿಯಾದರು. ಸ್ವಾತಂತ್ರ್ಯ ಚಳುವಳಿಯ ಅದಮ್ಯ ಉತ್ಸಾಹದ ನಡುವೆಯೂ ಗೌಡರು 1944ರಲ್ಲಿ ಎಲ್.ಎಲ್.ಬಿ. ಪದವಿ ಪಡೆದು, ಭವಿಷ್ಯದ ಬದುಕಿನ ಮಾರ್ಗ ಅರಸುತ್ತಾ ಮಂಡ್ಯಕ್ಕೆ ಹಿಂದಿರುಗಿದರು.

# ಸಾರ್ವಜನಿಕ ಬದುಕಿಗೆ

1944ರ ಏಪ್ರಿಲ್ ತಿಂಗಳಲ್ಲಿ ಶಂಕರಗೌಡರು ಎಲ್.ಎಲ್.ಬಿ. ಪರೀಕ್ಷೆಯಲ್ಲಿ ಪಾಸಾಗುವುದರ ಮೂಲಕ ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಿದರು. ನೋವಿನ ಸಂಗತಿ ಎಂದರೆ, ಪರೀಕ್ಷೆ ಫಲಿತಾಂಶವನ್ನು ಕೇಳುವ ಅದೃಷ್ಟ ಶಂಕರಗೌಡರ ಅಣ್ಣ ತಮ್ಮೇಗೌಡರಿಗೆ ಇರಲಿಲ್ಲ. ಹಗಲಿರುಳು ಸಹೋದರನ ಶಿಕ್ಷಣ ಮತ್ತು ಶ್ರೇಯೋಭಿವೃದ್ಧಿಗೆ ಶ್ರಮಿಸಿದ್ದ ತಮ್ಮೇಗೌಡರು ಅದೇ ವರ್ಷ ಫೆಬ್ರವರಿ ತಿಂಗಳಲ್ಲಿ ಮೆದುಳು ಜ್ವರಕ್ಕೆ ಬಲಿಯಾದರು.

ತಮ್ಮ ಕಾನೂನು ವಿದ್ಯಾಭ್ಯಾಸಕ್ಕೆ ಆರ್ಥಿಕ ನೆರವನ್ನು ಒದಗಿಸಿದ್ದ ಹೊನ್ನಾಯ್ಕನಹಳ್ಳಿಯ ಸಿಂಗ್ರೀಗೌಡರ ಪುತ್ರಿ ಸುಶೀಲಮ್ಮನವರನ್ನು, ಕುಟುಂಬದ ಸದಸ್ಯರ ಒತ್ತಾಸೆಯಂತೆ ಶಂಕರಗೌಡರು 1944ರ ಫೆಬ್ರವರಿ ಕೊನೆಯ ವಾರದಲ್ಲಿ ವಿವಾಹವಾದರು. ವಿವಾಹದೊಂದಿಗೆ ತಮ್ಮ ದಾಂಪತ್ಯ ಜೀವನವನ್ನು ಶಂಕರಗೌಡರು ತಮ್ಮ ಹುಟ್ಟೂರು ಕೀಲಾರದಲ್ಲೇ ಪ್ರಾರಂಭಿಸಿದರು.

ಆ ವೇಳೆಗಾಗಲೇ ಮಳೆ ಆಶ್ರಯವನ್ನೇ ನಂಬಿ ಬೆಂಗಾಡಾಗಿದ್ದ ಮಂಡ್ಯ ಜಿಲ್ಲೆ , ಕೃಷ್ಣರಾಜ ಸಾಗರ ಅಣೆಕಟ್ಟು ನಿರ್ಮಾಣದೊಂದಿಗೆ ನೀರಾವರಿ ಪ್ರದೇಶವಾಗಿ ಮಾರ್ಪಟ್ಟಿತ್ತು. ಕಾವೇರಿ ನೀರು ಜಿಲ್ಲೆಯ ನೆಲದಲ್ಲಿ ಹರಿಯತೊಡಗಿದಂತೆ, ಗ್ರಾಮಾಂತರ ಪ್ರದೇಶಗಳಲ್ಲಿ ಮಲೇರಿಯಾ ರೋಗ ಹರಡತೊಡಗಿತು. ನೀರೇ ಜನತೆಯ ಪಾಲಿಗೆ ಶಾಪವಾಗತೊಡಗಿತು. ಇದಕ್ಕೆ ಪ್ರಬಲವಾದ ಮತ್ತೊಂದು ಕಾರಣವೂ ಇತ್ತು. ಸ್ವಚ್ಛತೆ ಎಂಬುದನ್ನು ತಮ್ಮ ಜೀವನದಲ್ಲಿ ಎಂದೂ ಕಂಡಿರದ ಹಳ್ಳಿಗಾಡಿನ ಜನ ಮನೆ ಮುಂದೆ ಹಿಂದೆ ಎಲ್ಲೆಂದರಲ್ಲಿ ತಿಪ್ಪೆ ಗುಂಡಿ ನಿರ್ಮಿಸಿಕೊಂಡಿದ್ದರು. ಶೌಚಾಲಯಗಳ ಕಲ್ಪನೆಯೂ ಇಲ್ಲದ ಅವರು ಬಯಲನ್ನೇ ಶೌಚಾಲಯವನ್ನಾಗಿಸಿಕೊಂಡು, ನಡೆದಾಡುವ ರಸ್ತೆಯನ್ನೇ ಮೋರಿಯನ್ನಾಗಿ ಮಾಡಿಕೊಂಡಿದ್ದರು. ಜಿಲ್ಲೆಯ ನೆಲದಲ್ಲಿ ನೀರು ಹರಿಯತೊಡಗಿದ ಮೇಲೆ ಸೊಳ್ಳೆಗಳು ಈ ತಿಪ್ಪೆ ಗುಂಡಿಗಳನ್ನೇ ತಮ್ಮ ವಾಸ ಸ್ಥಾನವನ್ನಾಗಿಸಿಕೊಂಡವು.

ವಿದ್ಯಾವಂತ ಶಂಕರಗೌಡರು ತಮ್ಮೂರಿಗೆ ಬಂದು ನೆಲೆಸಿದ ಮೇಲೆ ಜನತೆಯ ರೋಗಕ್ಕೆ ಮೂಲ ಕಾರಣವನ್ನು ಮೊದಲು ಕುಡುಕೊಂಡರು. ಗ್ರಾಮೀಣ ಜನತೆಯ ಅಜ್ಞಾನ, ಮೂಢನಂಬಿಕೆ, ಕೊಳಕುತನ ಎಲ್ಲವೂ ಅವರಿಗೆ ಮನವರಿಕೆಯಾಗತೊಡಗಿದವು. ಈ ಕಾರಣಕ್ಕಾಗಿ ಗೌಡರು ಸ್ವಚ್ಛತಾ ಆಂದೋಲನವನ್ನು ತಮ್ಮ ಹುಟ್ಟೂರು ಕೀಲಾರದಲ್ಲೇ ಪ್ರಾರಂಬಿಸಿದರು.

ಶಂಕರಗೌಡರು ಸಾಮಾಜಿಕ ಸೇವೆಗೆ ಪಾದಾರ್ಪಣೆ ಮಾಡುವ ಮುನ್ನ ಕೀಲಾರದಲ್ಲಿ ಎರಡು ಗುಂಪುಗಳಿದ್ದವು. ಮಂಚಮ್ಮನ ಪಾಲು, ಚೌಡಮ್ಮನ ಪಾಲು ಎಂದು ಪ್ರತ್ಯೇಕವಾಗಿ ಗುರುತಿಸಿಕೊಂಡಿದ್ದ ಈ ಕುಟುಂಬಗಳನ್ನು ಕೆಳಪಾಲು-ಮೇಲುಪಾಲು ಎಂದು ಸಹ

ಕರೆಯುತ್ತಿದ್ದರು. ಮೇಲುನೋಟಕ್ಕೆ ಈ ಕುಟುಂಬಗಳು ಪ್ರತ್ಯೇಕ ಗುಂಪು ರಚಿಸಿಕೊಂಡಿದ್ದರೇ ವಿನಃ ವೈಮನಸ್ಸು, ದ್ವೇಷ-ಜಗಳ ಯಾವುದೂ ಇರಲಿಲ್ಲ. ಊರಿನಲ್ಲಿದ್ದ ದೇವಸ್ಥಾನಗಳ ಪೂಜೆ ಅಥವಾ ಊರ ಹಬ್ಬವನ್ನು ಒಟ್ಟಾಗಿಯೇ ಆಚರಿಸುತ್ತಿದ್ದರು. ಈ ಊರಿನ ಜನ, ದೇವರು, ಧರ್ಮ ಹಾಗೂ ಜಾತಿ ಮತ್ತು ತಮ್ಮ ಕುಲ ಕಸುಬಾದ ವ್ಯವಸಾಯದ ಬಗ್ಗೆ ಅನನ್ಯ, ಭಕ್ತಿ, ಕಾಳಜಿಗಳನ್ನು ವಹಿಸಿದ್ದರೆ ಹೊರತು, ಆರೋಗ್ಯ, ಸ್ವಚ್ಛತೆ ಕುರಿತು ಯೋಚಿಸಿರಲಿಲ್ಲ, ಜೊತೆಗೆ ಅವುಗಳ ಬಗ್ಗೆ ಅರಿವು ಕೂಡ ಇರಲಿಲ್ಲ.

ಈ ಸ್ಥಿತಿಯಲ್ಲಿ ಶಂಕರಗೌಡರು ಊರ ಮುಖಂಡರೊಡಗೂಡಿ ಎಲ್ಲರನ್ನೂ ಒಗ್ಗೂಡಿಸಿ, ಆರೋಗ್ಯದ ಬಗ್ಗೆ ತಿಳಿ ಹೇಳಿದರು. ಗ್ರಾಮಾಂತರ ಪ್ರದೇಶಗಳಲ್ಲಿ ಅನಾರೋಗ್ಯದಿಂದ ಸಂಭವಿಸುತ್ತಿರುವ ಸಾವಿಗೆ ಮೂಢನಂಬಿಕೆ, ಅಜ್ಞಾನವೇ ಕಾರಣ ಎಂಬುದನ್ನು ಮನದಟ್ಟು ಮಾಡಿಕೊಟ್ಟರು. ಇವೆಲ್ಲವುಗಳ ಪರಿಣಾಮವಾಗಿ ಊರ ಜನತೆ ಪ್ರತಿ ಸೋಮವಾರ ಶ್ರಮದಾನದ ಮೂಲಕ ಊರಿನ ಸ್ವಚ್ಛತೆ ಅಭಿವೃದ್ಧಿ ಮುಂತಾದ ಕಾರ್ಯಗಳಿಗೆ ಮುಂದಾದರು. ಕೀಲಾರ ಗ್ರಾಮ, ತಿಪ್ಪೆಗುಂಡಿ/ಮೋರಿ ಇವುಗಳಿಂದ ಬಿಡುಗಡೆಗೊಂಡು ಸ್ವಚ್ಛವಾಗುತ್ತಿದ್ದಂತೆ ಸೊಳ್ಳೆಗಳ ಹಾವಳಿ ಕ್ರಮೇಣ ಕಡಿಮೆಯಾಗತೊಡಗಿತು. ಜನತೆ ಮಲೇರಿಯಾ ರೋಗಕ್ಕೆ ತುತ್ತಾಗುವುದು ನಿಂತಿತು. ಹೀಗೆ ಶ್ರಮದಾನದ ಮೂಲಕ ಊರಿನ ಸ್ವಚ್ಛತೆಗೆ ಕೈ ಹಚ್ಚಿದ ಗೌಡರು, ಗ್ರಾಮ ಪಂಚಾಯಿತಿಯಲ್ಲಿ ತಾಂಡವವಾಡುತ್ತಿದ್ದ ರಾಜಕೀಯ ಹೊಲಸನ್ನು ತೊಡೆದು ಹಾಕಲು ಪಣತೊಟ್ಟರು. ಶಂಕರಗೌಡರು ಅಧ್ಯಕ್ಷರಾದರೆ ತಮ್ಮದೇನು ಅಭ್ಯಂತರವಿಲ್ಲ ಎಂಬ ಅಭಿಪ್ರಾಯ ಊರಿನ ರಾಜಕೀಯದ ಎರಡು ಬಣಗಳಿಂದ ಕೇಳಿ ಬಂದಾಗ ಸಹಜವಾಗಿ ಶಂಕರಗೌಡರು ಅವಿರೋಧವಾಗಿ ಅಧ್ಯಕ್ಷರಾಗಿ ಆಯ್ಕೆಯಾದರು.

ಕೀಲಾರ ಗ್ರಾಮ ಪಂಚಾಯತಿಯ ಅಧ್ಯಕ್ಷರಾಗಿ ಆಯ್ಕೆಯಾದ ಕೂಡಲೇ ಗೌಡರು ಊರಿನಲ್ಲಿ ಆಸ್ಪತ್ರೆ ತೆರೆಯಲು ಮುಂದಾದರು. ಕಟ್ಟಡ ನಿರ್ಮಾಣಕ್ಕಾಗಿ ಅವಶ್ಯಕ ಇದ್ದ ನಿಧಿ ಸಂಗ್ರಹಣೆಗಾಗಿ ಗೆಳೆಯರನ್ನು ಒಗ್ಗೂಡಿಸಿ ಪೌರಾಣಿಕ ನಾಟಕ ಪ್ರದರ್ಶನ ಏರ್ಪಡಿಸಿ, ಇದರಿಂದ ಸಿಕ್ಕ ಹಣದಲ್ಲಿ ಕಟ್ಟಡ ನಿರ್ಮಿಸಿದರು. ಇದೇ ರೀತಿ ಕೀಲಾರದಲ್ಲಿ ಹಾಲು ಉತ್ಪಾದಕರ ಸಂಘ, ರೈತರ ಸಹಕಾರ ಸಂಘ, ಶಾಲಾ-ಕಟ್ಟಡಗಳ ಸ್ಥಾಪನೆಗೆ ಶಂಕರಗೌಡರು ಮುಂದಾದರು.

ಸಾಮಾಜಿಕ ಸೇವೆ ನಡುವೆ 1944ರ ಜೂನ್ ತಿಂಗಳಲ್ಲಿ ಉಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ವಕೀಲ ವೃತ್ತಿ ನಡೆಸಲು ಬೇಕಾದ ಅನುಮತಿಯನ್ನು ಕೂಡ ಪಡೆದು ಕೊಂಡರು.

ಆ ವೇಳೆಗೆ ಮಂಡ್ಯ ನಗರದಲ್ಲಿ ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಹೆಚ್.ಹೊಂಬೇಗೌಡರು ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ಸೇವೆ ಸಲ್ಲಿಸುತ್ತಿದ್ದರು. ಗೌಡರು ವಕೀಲಿ ವೃತ್ತಿಯ ಅನುಭವಕ್ಕಾಗಿ ಅವರ ಕಛೇರಿಯಲ್ಲಿ ಸಹಾಯಕರಾಗಿ ಸೇರಿಕೊಂಡರು.

ಕೆ.ವಿ.ಶಂಕರಗೌಡರಲ್ಲಿದ್ದ ಚಿಂತನೆ, ಗ್ರಾಮಾಭಿವೃದ್ಧಿಯ ಬಗೆಗಿನ ಒಲವು ಇವೆಲ್ಲವೂ ಹೊಂಬೇಗೌಡರಲ್ಲಿ ಗೌಡರ ಬಗ್ಗೆ ಗೌರವ ಮೂಡಿಸಿದವು. ವಕೀಲಿ ವೃತ್ತಿಯಲ್ಲಿ ಶಂಕರಗೌಡರಿಗೆ ಒಳ್ಳೆಯ ಭವಿಷ್ಯವಿದೆ ಎಂದು ಹೊಂಬೇಗೌಡರು ಸ್ನೇಹಿತರ ಬಳಿ ಹೇಳಿಕೊಳ್ಳುತ್ತಿದ್ದರು. ಸುಮಾರು ಒಂದೂವರೆ ವರ್ಷಕಾಲ ವಕೀಲಿ ವೃತ್ತಿಯಲ್ಲಿ ತೊಡಗಿಸಿಕೊಂಡಿದ್ದ ಗೌಡರು 1946ರಲ್ಲಿ ನಡೆದ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದರ ಮೂಲಕ ವಕೀಲಿ ವೃತ್ತಿಗೆ ವಿದಾಯ ಹೇಳಿದರು.

ಶಂಕರಗೌಡರಿಗೆ ರಾಜಕೀಯ ಕ್ಷೇತ್ರದಲ್ಲಿ ಆಸಕ್ತಿ ಬೆಳೆಯುತ್ತಿದ್ದಂತೆ ಕೂಡ ಹಳ್ಳಿಗಾಡಿನ ಸಮುದಾಯಕ್ಕೆ ನೆರವಾಗಬಲ್ಲ ಅರ್ಥಪೂರ್ಣ ಕೆಲಸಗಳನ್ನು ಮಾಡಬೇಕೆಂಬ ಹೆಬ್ಬಯಕೆ ಸಹ ಇತ್ತು. ಈ ನಡುವೆ ದಲ್ಲಾಳಿಗಳ ನಡುವೆ ನರಳುತ್ತಿದ್ದ ರೈತ ಸಮುದಾಯದ ಶೋಷಿತ ಬದುಕು ಅವರನ್ನು ಕಾಡತೊಡಗಿತು. ಇಂತಹ ಸಮಯದಲ್ಲಿ ಹಿರಿಯ ನೇತಾರರಾದ ಹೆಚ್.ಸಿ.ದಾಸಪ್ಪನವರು ಮಂಡ್ಯಕ್ಕೆ ಬಂದಿದ್ದ ಸಂದರ್ಭದಲ್ಲಿ ಕರಡಳ್ಳಿ ಗ್ರಾಮದ ಸಿಂಗಾರಿಗೌಡರ ಮನೆಯಲ್ಲಿ ತಂಗಿದ್ದರು. ಈ ವಿಷಯ ತಿಳಿದ ಗೌಡರು ಕರಡಹಳ್ಳಿಗೆ ತೆರಳಿ, ಸಮಸ್ಯೆಗಳಿಗೆ ಸಿಲುಕಿರುವ ರೈತರ ಬದುಕನ್ನು ದಾಸಪ್ಪನವರ ಮುಂದೆ ಬಿಡಿಸಿಟ್ಟರು. ರೈತರ ಏಳಿಗೆಗಾಗಿ ಐರ್ಲೆಂಡ್‌ನಲ್ಲಿ ಇರುವ ಬೇಸಾಯಗಾರರ ಸಹಕಾರ ಸಂಘದ ಮಾದರಿಯಲ್ಲೇ ಸಹಕಾರ ಸಂಘ ಸ್ಥಾಪನೆಗೆ ದಾಸಪ್ಪನವರು ನೀಡಿದ ಸಲಹೆ, ಶಂಕರಗೌಡರಿಗೆ ಕಗ್ಗತ್ತಲಿನಲ್ಲಿ ಹೊಳೆದ ಕೋಲ್ಮಿಂಚಿನಂತೆ ದಾರಿ ತೋರಿತು. ಗ್ರಾಮಾಭಿವೃದ್ಧಿಗೆ ಮತ್ತು ರೈತರ ಏಳಿಗೆಗೆ ಇದೇ ಸೂಕ್ತ ಮಾರ್ಗ ಎಂದು ನಿರ್ಧರಿಸಿದ ಗೌಡರು, ಒಂದು ವಾರದ ಅವಧಿಯಲ್ಲೇ ಮಂಡ್ಯ ನಗರದ ಸಿನಿಮಾ ಮಂದಿರವೊಂದರಲ್ಲಿ ಸಮಾನ ಮನಸ್ಕರ ಸಭೆ ಕರೆದರು. ಸಭೆಯಲ್ಲಿ ಒಕ್ಕೊರಲಿನ ಬೆಂಬಲದಿಂದ ಉತ್ತೇಜಿತರಾದ ಗೌಡರು ಪಿ.ಎನ್. ಜವರಪ್ಪಗೌಡ, ಕೆ. ಬೆಟ್ಟಶೆಟ್ಟರು, ನಾರಾಯಣ್ ಮುಂತಾದ ಮಿತ್ರರೊಡಗೂಡಿ ಜಟಕಾ ಬಂಡಿಯಲ್ಲಿ ಗ್ರಾಮ ಪ್ರದೇಶಗಳಲ್ಲಿ ಸಂಚರಿಸಿ, ತಲಾ 10ರೂ. ಗಳ ಷೇರು ಸಂಗ್ರಹಿಸಿ, 1948ರಲ್ಲಿ ಇರ್ವಿನ್ ನಾಲಾ ರೈತರ ಸಹಕಾರ ಸಂಘ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಮಂಡ್ಯ ನಗರ ಪೇಟೆ ಬೀದಿಯಲ್ಲಿ ಬಾಡಿಗೆ ಮನೆಯೊಂದರಲ್ಲಿ ಪ್ರಾರಂಭವಾದ ಈ ಸಂಘದ ಮೂಲಕ ರೈತರಿಗೆ ವ್ಯವಸಾಯ ಸಲಕರಣೆಗಳು ಸೇರಿದಂತೆ ಅವಶ್ಯಕ ಪಡಿತರ ವಸ್ತುಗಳನ್ನು ವಿತರಿಸಲು ಮುಂದಾದರು. ಅಂದಿನ ಕಾಲದಲ್ಲಿ ಬಳಕೆ ವಸ್ತುಗಳ ನಿಯಂತ್ರಣದಡಿ ಸರಬರಾಜಾಗುತ್ತಿದ್ದ ಬಟ್ಟೆಗಳನ್ನು ಸಹ ಸಂಘದಲ್ಲಿ ಮಾರಾಟ ಮಾಡಲಾಗುತ್ತಿತ್ತು.

ಬಿತ್ತನೆ ಬೀಜ, ರಸಗೊಬ್ಬರ, ಪಡಿತರ ವಸ್ತುಗಳ ಮಾರಾಟದ ಜೊತೆಗೆ ರೈತರಿಗೆ ಸಾಲ ನೀಡುವ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಬಲು ಬೇಗ ಪ್ರಸಿದ್ಧಿಗೆ ಬಂದ ಸಹಕಾರ ಸಂಘ ತನ್ನ ಕಾರ್ಯಾಚರಣೆಯನ್ನು ಇತರೆ ಪ್ರದೇಶಗಳಿಗೂ ವಿಸ್ತರಿಸಿತು.

ಕೇವಲ 2 ವರ್ಷದಲ್ಲಿ ಶಂಕರಗೌಡರ ನೇತೃತ್ವದಲ್ಲಿ ಅಭಿವೃದ್ಧಿ ಪಥದಲ್ಲಿ ಸಾಗಿದ ಸಹಕಾರ ಸಂಘ ಲಾಭ ಗಳಿಸುವಲ್ಲಿ ಯಶಸ್ವಿಯಾದುದಲ್ಲದೆ, ನಿವೇಶನ ಕೊಂಡು ಸ್ವಂತ ಕಟ್ಟಡದಲ್ಲಿ ನೆಲೆಯೂರಲು ಸಾಧ್ಯವಾಯಿತು.

ಗೌಡರ ಈ ಸಹಕಾರಿ ಆಂದೋಲನ ರಾಜ್ಯದಲ್ಲಿ ಅಷ್ಟೇ ಅಲ್ಲ, ಇಡೀ ರಾಷ್ಟ್ರದಲ್ಲಿ ಹೆಸರಾಗಿ ಹಲವಾರು ಆಸಕ್ತರ ಗಮನ ಸೆಳೆಯಿತು. ನಾಡಿನ ಮೂಲೆ-ಮೂಲೆಯಿಂದ ಜನತೆ ಮಂಡ್ಯ ನಗರಕ್ಕೆ ಆಗಮಿಸಿ, ಸಹಕಾರ ಸಂಘದ ಚಟುವಟಿಕೆಗಳನ್ನು ಗಮನಿಸಿದರು. ಮುಂದಿನ 10 ವರ್ಷಗಳ ಅವಧಿಯಲ್ಲಿ ಸಂಘದ ವ್ಯಾಪ್ತಿಯಲ್ಲಿ ಅಕ್ಕಿ ಗಿರಣಿ, ಎಣ್ಣೆ ಗಿರಣಿ, ಪಶು ಆಹಾರ ತಯಾರಿಕಾ ಘಟಕ ಮುಂತಾದವು ಪ್ರಾರಂಭಗೊಂಡವು. ಮುಂದೆ ಸಹಕಾರ ಸಂಘದಲ್ಲಿ ನಡೆಸುತ್ತಿದ್ದ ಆರ್ಥಿಕ ವಹಿವಾಟನ್ನು ಸ್ಥಗಿತಗೊಳಿಸಿ, ಶಂಕರಗೌಡರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಅನ್ನು ಸ್ಥಾಪಿಸಿದರು.

ಇಂದು ಮಂಡ್ಯ ನಗರದ ಹೃದಯ ಭಾಗದಲ್ಲಿ ಶಂಕರಗೌಡರು ಸ್ಥಾಪಿಸಿದ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ಸಹಕಾರ ಸಂಘ ಎಲ್ಲವೂ ಗೌಡರ ಸಹಕಾರ ಕ್ರಾಂತಿಯ ಯಶಸ್ಸಿನ ಕಥನಕ್ಕೆ ಸಾಕ್ಷಿಯಾಗಿವೆ.

# ರಾಜಕೀಯ ಬದುಕು

ಕೆ.ವಿ. ಶಂಕರಗೌಡರು ವಿದ್ಯಾಭ್ಯಾಸದ ನಂತರ ತಮ್ಮೂರಿಗೆ ಹಿಂತಿರುಗಿ ಊರಿನ ಅಭಿವೃದ್ಧಿ ಮೂಲಕ, ಮಂಡ್ಯ ನಗರಕ್ಕೂ ತಮ್ಮ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ, ಸಹಕಾರ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದರೂ, ಕೂಡ ಅವರ ಒಳ ಮನಸ್ಸಿನಲ್ಲಿ ರಾಜಕೀಯ ಆಕಾಂಕ್ಷೆಯನ್ನು ಸದಾ ತುಡಿಯುತ್ತಿತ್ತು.

ವಿದ್ಯಾರ್ಥಿಯಾಗಿದ್ದಾಗಲೇ, 1938ರಲ್ಲಿ ಮದ್ದೂರಿನ ಶಿವಪುರದಲ್ಲಿ ನಡೆದ ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ತನ್ನ ಸಹೋದರರ ಜೊತೆ ಪಾಲ್ಗೊಂಡು ಸ್ವಯಂ ಸೇವಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಬೆಳಗಾಂನಲ್ಲಿ ಕಾನೂನು ವಿದ್ಯಾಭ್ಯಾಸ ಮಾಡುತ್ತಿದ್ದಾಗಲೆ 1942ರ ಚಲೇಜಾವ್ ಚಳುವಳಿಯಲ್ಲಿ ಪಾಲ್ಗೊಂಡು ತಮ್ಮ ದೇಶ ಪ್ರೇಮ ಮೆರೆದಿದ್ದರು.

ಶಂಕರಗೌಡರು ಸಮಾಜ ಸೇವೆ ನಡುವೆ ರಾಜಕೀಯವನ್ನು ತಮ್ಮ ಕಾರ್ಯ ಕ್ಷೇತ್ರವನ್ನಾಗಿಸಿಕೊಂಡು 1946ರಲ್ಲಿ ರಾಜಕೀಯರಂಗಕ್ಕೆ ಅಧಿಕೃತವಾಗಿ ಪಾದಾರ್ಪಣೆ ಮಾಡಿದರು.

1946ರಲ್ಲಿ ಮಂಡ್ಯ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಎಂ.ಕೆ. ಬೊಮ್ಮೇಗೌಡರ ಪರವಾಗಿ ಚುನಾವಣಾ ಪ್ರಚಾರದಲ್ಲಿ ಪಾಲ್ಗೊಂಡರು.

1947ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಹಿರಿಯ ಸದಸ್ಯರಾಗಿದ್ದ ಸೋಮನಹಳ್ಳಿ ಎಸ್.ಸಿ. ಮಲ್ಲಯ್ಯನವರು ನಿಧನರಾದಾಗ ಅವರಿಂದ ತೆರವಾದ ಸ್ಥಾನಕ್ಕೆ ಬೊಮ್ಮೇಗೌಡರನ್ನು ನಿಲ್ಲಿಸಿ ಗೆಲ್ಲಿಸಿ ಕಳಿಸುವಲ್ಲಿ ಬಹುವಾಗಿ ಶ್ರಮಿಸಿದರು.

1947ರ ಅಕ್ಟೋಬರ್ ತಿಂಗಳಿನಲ್ಲಿ ಸರ್ಕಾರ ಸ್ಥಾಪನೆಗೆ ಆಗ್ರಹಿಸಿ ಅರಮನೆ ಚಳುವಳಿ ನಡೆದಾಗ, ಚಳುವಳಿಯ ಮುಂಚೂಣಿಯಲ್ಲಿ ನಿಂತು 49 ದಿನಗಳ ಸೆರೆಮನೆ ವಾಸವನ್ನೂ ಕೂಡ ಅನುಭವಿಸಿದರು. ಕಡೆಗೂ ಚಳುವಳಿ ಯಶಸ್ವಿಯಾಗಿ ಅಂದಿನ ಮೈಸೂರು ರಾಜ್ಯದ ಪ್ರಥಮ ಮುಖ್ಯಮಂತ್ರಿಯಾಗಿ ಕೆ.ಸಿ. ರೆಡ್ಡಿ ಆಯ್ಕೆಯಾದರು. ಮೈಸೂರು ರಾಜ್ಯಕ್ಕೊಂದು ಸಂವಿಧಾನ ರಚಿಸುವ ಸಲುವಾಗಿ ರಾಜ್ಯಾಂಗ ಸಭೆ ಅಸ್ತಿತ್ವಕ್ಕೆ ಬಂದಾಗ, ಮಂಡ್ಯ ಜಿಲ್ಲೆಯಿಂದ ಚುನಾಯಿತರಾದ ಐವರು ಪ್ರತಿನಿಧಿಗಳಲ್ಲಿ ಶಂಕರಗೌಡರು ಸಹ ಒಬ್ಬರಾಗಿದ್ದರು.

1948ರಲ್ಲಿ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದ ಗೌಡರು, ಕಾಂಗ್ರೆಸ್ ಪಕ್ಷದ ಸಂಘಟನೆಯಲ್ಲಿ ಸಕ್ರಿಯವಾಗಿ ದುಡಿದರು. ಅದೇ ವೇಳೆಗೆ ಸರ್ಕಾರದಲ್ಲಿ ಸಚಿವರಾಗಿದ್ದ ಟಿ.ಮರಿಯಪ್ಪ ಸಮಗ್ರ ಗ್ರಾಮೀಣಾಭಿವೃದ್ಧಿಗೆ ಯೋಜನೆಯೊಂದನ್ನು ತಯಾರಿಸಿ, ಅದಕ್ಕೆ ಜಿಲ್ಲಾ ಮಟ್ಟದ ಸಮಿತಿಗಳನ್ನು ನೇಮಕ ಮಾಡಿದರು. ಮಂಡ್ಯ ಜಿಲ್ಲಾ ಸಮಿತಿಗೆ ಗೌಡರೇ

ಅವಿರೋಧವಾಗಿ ನೇಮಕಗೊಂಡರು. ಜಿಲ್ಲೆಯ ರಸ್ತೆಗಳ ಅಭಿವೃದ್ಧಿಗಾಗಿ ರೈತರು ಕಾರ್ಖಾನೆಗೆ ಸರಬರಾಜು ಮಾಡುವ ಕಬ್ಬಿಗೆ ಶುಲ್ಕ ನಿಗದಿಪಡಿಸಿ, ಆ ಶುಲ್ಕದಿಂದ ರಸ್ತೆ ಅಭಿವೃದ್ಧಿಪಡಿಸಲು ಹಿರಿಯ ನಾಯಕ ಹೆಚ್.ಸಿ. ದಾಸಪ್ಪ ಸಲಹೆ ನೀಡಿದಾಗ, ದಾಸಪ್ಪನವರ ಮಾರ್ಗದರ್ಶನದಲ್ಲಿ ಅವರ ಸಲಹೆಗಳನ್ನು ಪರಿಣಾಮಕಾರಿಯಾಗಿ ಜಿಲ್ಲೆಯಲ್ಲಿ ಅನುಷ್ಠಾನಕ್ಕೆ ತಂದರು.

ತಮ್ಮ ಕ್ರಿಯಾಶೀಲ ವ್ಯಕ್ತಿತ್ವದಿಂದಾಗಿ ಶಂಕರಗೌಡರು 1952ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಮಂಡ್ಯ ಕ್ಷೇತ್ರದಿಂದ ವಿಧಾನಸಭಾ ಚುನಾವಣೆಗೆ ಸ್ಪರ್ಧಿಸಿ ಜಯಶಾಲಿಯಾದರು.

ಶಾಸನ ಸಭೆಯ ಸದಸ್ಯರಾಗಿ ಪ್ರಥಮ ಬಾರಿ ಆಯ್ಕೆಯಾದ ಅವರು ತಮ್ಮ ನಿಷ್ಠುರ ಮಾತು ಮತ್ತು ಹಾಗೂ ಪ್ರಾಮಾಣಿಕ ರಾಜಕೀಯ ಬದುಕಿನಿಂದಾಗಿ, ಅವಧಿಯನ್ನು ಪೂರ್ಣಗೊಳಿಸಲಿಲ್ಲ. 1954ರಲ್ಲಿ ವಿಧಾನಸಭೆಯ ಬಜೆಟ್ ಅಧಿವೇಶನದಲ್ಲಿ, ಆಡಳಿತಾರೂಢ ಪಕ್ಷದ ಸದಸ್ಯರಾಗಿದ್ದುಕೊಂಡು, ಸರ್ಕಾರ ಗ್ರಾಮಾಭಿವೃದ್ಧಿಗೆ ಸಮರ್ಪಕ ಹಣ ನೀಡದಿರುವ ಬಗ್ಗೆ ಟೀಕಿಸಿದರು. ರೈತರ ಏಳಿಗೆಗೆ ಆಸಕ್ತಿ ವಹಿಸದ ಸರ್ಕಾರ ರಾಜೀನಾಮೆ ನೀಡಬೇಕೆಂದು ಒತ್ತಾಯಿಸಿದರು.

ಆದರೆ ವಿಧಾನಸಭೆಯಲ್ಲಿ ಹಿರಿಯ ಸದಸ್ಯ ಎಚ್.ಕೆ. ವೀರಣ್ಣಗೌಡ, ಶಂಕರಗೌಡರ ಕಾಳಜಿಯ ಬಗ್ಗೆ ಕಟು ಟೀಕೆ ಮಾಡಿದಾಗ ಮನನೊಂದ ಗೌಡರು ತಮ್ಮ ಸದಸ್ಯತ್ವ ಸ್ಥಾನಕ್ಕೆ ರಾಜೀನಾಮೆ ನೀಡಿ ಹೊರಬಂದರು.

ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡಿದ ನಂತರ ಮತ್ತೇ ಮಂಡ್ಯದ ಸಾರ್ವಜನಿಕ ಬದುಕಿನಲ್ಲಿ ತಮ್ಮನ್ನು ತೊಡಗಿಸಿಕೊಂಡ ಗೌಡರು, ಈ ಬಾರಿ ಮಂಡ್ಯ ಜಿಲ್ಲೆಯಲ್ಲಿನ ಶಿಕ್ಷಣ ಕ್ಷೇತ್ರದತ್ತ ಒಲವು ಹರಿಸಿದರು. ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದ ಅವರು, ಪ್ರತಿ ಹಳ್ಳಿ-ಹಳ್ಳಿಯಲ್ಲೂ ಶಾಲೆ ತೆರೆಯಲು ಕಾರಣಕರ್ತರಾದರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಗ್ರಾಮಾಂತರ ಪ್ರದೇಶಗಳಿಂದ ಪಟ್ಟಣಕ್ಕೆ ಬರುತ್ತಿದ್ದ ವಿದ್ಯಾರ್ಥಿಗಳು ಊಟ-ವಸತಿಗಾಗಿ ಅನುಭವಿಸುತ್ತಿದ್ದ ಪಾಡನ್ನು ಕಣ್ಣಾರೆ ಕಂಡು ಅನುಭವಿಸಿದ್ದ ಗೌಡರು ಮಂಡ್ಯ ನಗರದಲ್ಲಿ ಸಾರ್ವಜನಿಕ ಒಕ್ಕಲಿಗರ ಹಾಸ್ಟೆಲ್ ತೆರೆಯಲು ಮುಂದಾದರು. ಕಟ್ಟಡದ ನಿರ್ಮಾಣಕ್ಕೆ ನಿಧಿ ಸಂಗ್ರಹಿಸಲು 'ದಾನಶೂರ ಕರ್ಣ' ಪೌರಾಣಿಕ ನಾಟಕವನ್ನಾಡಿ ತಾವೇ ಕರ್ಣನ ಪಾತ್ರ ವಹಿಸಿದರು. ಈ ನಡುವೆ ಮಂಡ್ಯ ನಗರದಲ್ಲಿ ಸಮಾನ ಮನಸ್ಕ ಗೆಳೆಯರೊಡಗೂಡಿ ತಾವೇ ಸ್ಥಾಪಿಸಿದ್ದ ಜನತಾ ಶಿಕ್ಷಣ ಸಂಸ್ಥೆಗೆ ಇಂಜಿನಿಯರಿಂಗ್ ಕಾಲೇಜು ತರಲು ಪ್ರಯತ್ನಿಸಿದರು. ಆದರೆ ತಮ್ಮ ರಾಜಕೀಯ ವಿರೋಧಿಗಳ ಅಡ್ಡಗಾಲಿನ ಪರಿಣಾಮವಾಗಿ ಮಂಡ್ಯಕ್ಕೆ ದಕ್ಕಬೇಕಾದ ಕಾಲೇಜು ಹಾಸನಕ್ಕೆ ದೊರೆಯಿತು.

ಪ್ರಾಥಮಿಕ ಶಿಕ್ಷಣ ಹಾಗೂ ವಯಸ್ಕರ ಶಿಕ್ಷಣದ ಬಗ್ಗೆ ಅಪಾರ ಕಾಳಜಿ ಹೊಂದಿದ ಶಂಕರಗೌಡರು ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿ ಅಧ್ಯಕ್ಷರಾಗಿ, ಅಕ್ಷರ ಲೋಕದಿಂದ

ವಂಚಿತರಾಗಿದ್ದ ಗ್ರಾಮ ಭಾರತದ ಯುವಕರಿಗೆ ಅಕ್ಷರ ಕಲಿಸುವ ಕ್ರಾಂತಿಗೆ ಮುಂದಾದರು. ಮಂಡ್ಯ ನಗರದಲ್ಲಿ ವಯಸ್ಕರ ಶಿಕ್ಷಣ ಸಮಾವೇಶ ನಡೆಸಿ, ಅಂದು ಉಪರಾಷ್ಟ್ರಪತಿಯಾಗಿದ್ದ ಶಿಕ್ಷಣ ತಜ್ಞ ಡಾ|| ಎಸ್. ರಾಧಾಕೃಷ್ಣರನ್ನು ಸಮಾವೇಶಕ್ಕೆ ಆಹ್ವಾನಿಸಿ ಅವರಿಂದ ಪ್ರಶಂಸೆಗೆ ಪಾತ್ರರಾದರು.

ಶಿಕ್ಷಣದಿಂದ ಮಾತ್ರ ಗ್ರಾಮ ಮತ್ತು ದೇಶದ ಅಭಿವೃದ್ಧಿ ಎಂದು ನಂಬಿದ್ದ ಗೌಡರು, 1957ರಲ್ಲಿ ಮಂಡ್ಯ ನಗರದಲ್ಲಿ ಮುದ್ರಣಾಲಯವನ್ನು ತೆರೆದು'ಜನಮನ' ಎಂಬ ವಾರಪತ್ರಿಕೆ ಪ್ರಾರಂಭಿಸಿದರು. ಈ ಪತ್ರಿಕೆಯಲ್ಲಿ ಶಿಕ್ಷಣ, ಗ್ರಾಮೀಣಾಭಿವೃದ್ಧಿ, ಸಹಕಾರ ಮುಂತಾದ ರಂಗಗಳ ಬಗ್ಗೆ ತಜ್ಞ ಲೇಖಕರಿಂದ ಲೇಖನ ಬರೆಸಿ ಅವರಿಗೆ ಕೈ ತುಂಬಾ ಗೌರವ ಧನ ಪಾವತಿಸಿದರು. ಇಡೀ ಕರ್ನಾಟಕದಲ್ಲೇ ಆ ಕಾಲದಲ್ಲಿ ಲೇಖಕರಿಗೆ ಅತೀ ಹೆಚ್ಚು ಸಂಭಾವನೆ ನೀಡುವ ಪತ್ರಿಕೆ ಎಂಬ ಹೆಗ್ಗಳಿಕೆ ಗೌಡರ ವಾರಪತ್ರಿಕೆ ಪಾತ್ರವಾಗಿತ್ತು. 9 ತಿಂಗಳ ಕಾಲ ಪತ್ರಿಕೆ ನಡೆಸಿದ ಗೌಡರು, ವ್ಯವಹಾರಿಕ ಕೊರತೆಯಿಂದ ನಷ್ಟ ಅನುಭವಿಸಿ ಕಡೆಗೆ ಪತ್ರಿಕೆ ಹಾಗೂ ಮುದ್ರಣಾಲಯ ಎರಡನ್ನೂ ಮುಚ್ಚಿದರು.

1962ರಲ್ಲಿ ಮಂಡ್ಯ ಕ್ಷೇತ್ರದಿಂದ ಚುನಾವಣೆಗೆ ನಿಂತ ಗೌಡರು ತಮ್ಮ ಎದುರಾಳಿ ಜೆ.ದೇವಯ್ಯನವರ ವಿರುದ್ಧ ಕೇವಲ 300 ಮತಗಳ ಅಂತರದಿಂದ ಸೋತರು. ಸೋಲನ್ನು ಎಂದೂ ಮನಸ್ಸಿಗೆ ಹಚ್ಚಿಕೊಳ್ಳದ ಗೌಡರು ರಾಜಕೀಯವನ್ನು ಕ್ರೀಡೆ ಎಂಬಂತೆ ಭಾವಿಸಿ ಮತ್ತೇ ತಮ್ಮ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡರು. 1966ರಲ್ಲಿ ಮೇಲ್ಮನೆಗೆ ನಡೆದ ಸ್ಥಳೀಯ ಸಂಸ್ಥೆ ಚುನಾವಣೆಯಲ್ಲಿ ಅವಕಾಶ ಧಕ್ಕಿಸಿಕೊಂಡ ಅವರು, ಸುಲಲಿತವಾಗಿ ಆಯ್ಕೆಯಾದುದಲ್ಲದೆ, ಪ್ರಥಮ ಬಾರಿಗೆ ಶಿಕ್ಷಣ ಸಚಿವರಾಗಿ ಪದವಿಯನ್ನು ಅಲಂಕರಿಸಿದರು. ತಮ್ಮ ತಾರುಣ್ಯದಿಂದಲೂ ಶಿಕ್ಷಣ ರಂಗದ ಬಗ್ಗೆ ವಿಶೇಷ ಒಲವು ಬೆಳೆಸಿಕೊಂಡಿದ್ದ ಶಂಕರಗೌಡರಿಗೆ ಶಿಕ್ಷಣ ಕ್ಷೇತ್ರದಲ್ಲಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಕೀರ್ತಿ ಗಳಿಸಲು ಸಾಧ್ಯವಾಯಿತು.

ಶಿಕ್ಷಣ ಸಚಿವರಾಗಿ ಶಂಕರಗೌಡರು ಮಾಡಿದ ಸಾಧನೆಗಳು ಕರ್ನಾಟಕ ರಾಜ್ಯ ಇತಿಹಾಸದಲ್ಲಿ ದಾಖಲಾಗಿ ಉಳಿಯುವಂತವು. ಅವರ ಈ ಸಾಧನೆ 'ನಿತ್ಯ ಸಚಿವ' ಎಂಬ ಬಿರುದನ್ನು ದಯಪಾಲಿಸಿತು.

ಕನ್ನಡ ಪಠ್ಯಪುಸ್ತಕಗಳ ರಚನೆ, ತ್ರಿಭಾಷಾ ಸೂತ್ರದ ವಿಷಯದಲ್ಲಿ ತೆಗೆದುಕೊಂಡ ನಿಲುವು, ಶಿಕ್ಷಣ ಇಲಾಖೆಯ ವಿಕೇಂದ್ರೀಕರಣ ಇವೆಲ್ಲವೂ ಶಂಕರಗೌಡರ ಹೆಸರನ್ನು ಅವಿಸ್ಮರಣೀಯಗೊಳಿಸಿದವು. ಶಂಕರಗೌಡರು ವೀರೇಂದ್ರ ಪಾಟೀಲರ ನೇತೃತ್ವದ ಸರ್ಕಾರದಲ್ಲಿ ಸಚಿವರಾಗಿ ಮುಂದುವರಿಯುತ್ತಿದ್ದಾಗಲೇ ರಾಷ್ಟ್ರ ಮಟ್ಟದ ರಾಜಕಾರಣದಲ್ಲಿ ಹಲವಾರು ಮಹತ್ವದ ಬದಲಾವಣೆಗಳಾದವು.

ಕಾಂಗ್ರೆಸ್ ನಾಯಕಿ ಇಂದಿರಾಗಾಂಧಿ ಹಾಗೂ ಕಾಂಗ್ರೆಸ್ ಅಧ್ಯಕ್ಷ ಎಸ್.ನಿಜಲಿಂಗಪ್ಪನವರ ನಡುವೆ ಭಿನ್ನಾಭಿಪ್ರಾಯ ಉಂಟಾಗಿ 1969ರಲ್ಲಿ ಬೆಂಗಳೂರಿನ ಲಾಲ್‌ಬಾಗ್ ಗಾಜಿನ ಮನೆಯಲ್ಲಿ ನಡೆದ ಐತಿಹಾಸಿಕ ಸಮಾವೇಶದಲ್ಲಿ ಕಾಂಗ್ರೆಸ್ ಪಕ್ಷ ಇಬ್ಭಾಗವಾಯಿತು.

ಎಸ್. ನಿಜಲಿಂಗಪ್ಪ ಪ್ರತ್ಯೇಕ ಪಕ್ಷ ರಚಿಸಿಕೊಂಡು ಸಂಸ್ಥಾ ಕಾಂಗ್ರೆಸ್ ಎಂದು ಹೆಸರಿಟ್ಟರು. ಪಕ್ಷದ ರಾಜಕೀಯ ಬಿಕ್ಕಟ್ಟು ಶಂಕರಗೌಡರನ್ನು ಇಕ್ಕಟ್ಟಿಗೆ ಸಿಲುಕಿಸಿತು. ಸಂದಿಗ್ಧತೆಯಿಂದ ಚಿಂತಾಕ್ರಾಂತರಾದ ಗೌಡರು ಕಡೆಗೆ ಸಂಸ್ಥಾ ಕಾಂಗ್ರೆಸ್‌ನಲ್ಲಿ ಉಳಿದುಕೊಳ್ಳಲು ನಿರ್ಧರಿಸಿದರು. ಗಾಂಧಿ, ನೆಹರೂ, ಸರ್ದಾರ್ ವಲ್ಲಭಾಯಿ ಪಟೇಲ್ ಮುಂತಾದ ದೇಶಭಕ್ತರ ತ್ಯಾಗ-ಬಲಿದಾನ-ಸ್ವಾತಂತ್ರ್ಯ ಹೋರಾಟ ಇವುಗಳ ಸ್ಫೂರ್ತಿಯಿಂದ ರೂಪುಗೊಂಡಿದ್ದ ಕಾಂಗೆಸ್ ಪಕ್ಷದ ಬಗ್ಗೆ ಗೌಡರಿಗೆ ಅಪಾರ ಗೌರವವಿತ್ತು. ಆದರೆ ತಮ್ಮ ರಾಜಕೀಯ ಬದುಕಿಗೆ ಮಾರ್ಗದರ್ಶನ ಮಾಡಿ ಭದ್ರ ಬುನಾದಿ ಹಾಕಿದ ನಿಜಲಿಂಪ್ಪನವರಿಗೆ ದ್ರೋಹ ಬಗೆಯಲು ಮನಸೊಪ್ಪದ ಶಂಕರಗೌಡರು, ನಿಜಲಿಂಗಪ್ಪನವರ ಆಜ್ಞೆಯಂತೆ ವೀರೇಂದ್ರ ಪಾಟೀಲರಿಗೆ ನಿಷ್ಠೆಯಿಂದ ಉಳಿದರು. ಆದರೆ ಆನಂತರದ ದಿನಗಳಲ್ಲಿ ಹಲವಾರು ಕಾಂಗೆಸ್ ಶಾಸಕರು, ವೀರೇಂದ್ರ ಪಾಟೀಲರ ಬಳಗದಿಂದ ಇಂದಿರಾ ಕಾಂಗೆಸ್‌ಗೆ ಹಾರಿದ ಪರಿಣಾಮವಾಗಿ 71ರಲ್ಲಿ ವೀರೇಂದ್ರ ಪಾಟೀಲರ ಸರ್ಕಾರ ಕರ್ನಾಟಕದಲ್ಲಿ ಪತನವಾಯಿತು.

ತದ ನಂತರ ದೇವರಾಜ ಅರಸು ನೇತೃತ್ವದಲ್ಲಿ ಇಂದಿರಾ ಕಾಂಗ್ರೆಸ್ ಪ್ರವರ್ಧಮಾನಕ್ಕೆ ಬರುತ್ತಿದ್ದಂತೆ, ಸಂಸ್ಥಾ ಕಾಂಗ್ರೆಸ್ ಅವನತಿಯತ್ತ ಜಾರಿತು.

1972ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಯಾಗಿ ಮಂಡ್ಯಕ್ಷೇತ್ರದಿಂದ ಸ್ಪರ್ಧಿಸಿದ ಗೌಡರು ಮತ್ತೆ 147 ಮತಗಳ ಅಂತರದಿಂದ ಅಪಜಯ ಅನುಭವಿಸಿದರು.

ಸೋಲು ಮತ್ತೇ ರಾಜಕೀಯ ರಂಗದ ಸ್ಥಿತ್ಯಂತರಗಳಿಂದ ಬೇಸರಗೊಂಡ ಗೌಡರು ರಾಜಕೀಯ ಚಟುವಟಿಕೆಗೆ ಬಹುತೇಕ ತಿಲಾಂಜಲಿ ಇತ್ತು, ಸಾಹಿತ್ಯ ಮತ್ತು ಸಾಂಸ್ಕೃತಿಕ ಲೋಕದಲ್ಲಿ ತಮ್ಮನ್ನು ತೊಡಗಿಸಿಕೊಂಡರು. 1972ರಲ್ಲಿ ಸಹಕಾರ ತತ್ವಗಳನ್ನು ಪ್ರತಿಪಾದಿಸುವ 'ಕೂಡಿ ಬಾಳೋಣ' ನಾಟಕ ರಚಿಸಿ ಪ್ರದರ್ಶಿಸಿದರು. ನಂತರ ತಾವೇ ನಿರ್ದೇಶಕರಾಗಿ ನಿಂತು ಚಿತ್ರ ಒಂದನ್ನು ಸಹ ನಿರ್ಮಿಸಿದರು. ಆ ನಂತರ ನಿರ್ಮಾಪಕರಾಗಿ'ಹೂ ಬಾಣ' ಎಂಬ ಚಲನಚಿತ್ರವನ್ನು ನಿರ್ಮಿಸಿದರು.

1975ರಲ್ಲಿ ಕಡೆಗೂ ತಮ್ಮ ಶಿಕ್ಷಣ ಸಂಸ್ಥೆಗೆ ಇಂಜಿನಿಯರಿಂಗ್ ಕಾಲೇಜು ತರುವಲ್ಲಿ ಯಶಸ್ವಿಯಾದ ಗೌಡರು ಮಹಾಕವಿ ಕುವೆಂಪು ಅಧ್ಯಕ್ಷತೆಯಲ್ಲಿ ಇಂಜಿನಿಯರಿಂಗ್ ಕಾಲೇಜು ಉದ್ಘಾಟಿಸಿದರು. ಈ ನಡುವೆ 1978ರಲ್ಲಿ ಮಂಡ್ಯ ಜಿಲ್ಲೆಯಲ್ಲಿ ವರುಣಾ ನಾಲೆ ಚಳುವಳಿ ಭುಗಿಲೆದ್ದಿತು.

ಕೃಷ್ಣರಾಜ ಸಾಗರ ಜಲಾಶಯದಿಂದ ಮೈಸೂರು ಜಿಲ್ಲೆಯ ಕೆಲವು ತಾಲ್ಲೂಕುಗಳಿಗೆ ನೀರು ಒದಗಿಸುವ ಉದ್ದೇಶದಿಂದ ಅಂದಿನ ಮುಖ್ಯಮಂತ್ರಿ ದೇವರಾಜ ಅರಸು ವರುಣಾ ನಾಲೆಗೆ ಮುಂದಾದಾಗ ಸಹಜವಾಗಿ ಮಂಡ್ಯ ರೈತರು ಸಿಟ್ಟಿಗೆದ್ದು ಚಳುವಳಿಗೆ ಧುಮುಕಿದರು. ಈ ಚಳುವಳಿಯ ನೇತೃತ್ವ ವಹಿಸಿದ ಗೌಡರು ಐತಿಹಾಸಿಕ 'ಚಡ್ಡಿ ಮೆರವಣಿಗೆ' ನಡೆಸಿ, ಸರ್ಕಾರಕ್ಕೆ ಪ್ರತಿಭಟನೆ ಸೂಚಿಸಿದರು. ಅಂತಿಮವಾಗಿ ಮುಖ್ಯಮಂತ್ರಿ ದೇವರಾಜ ಅರಸುರವರು ಶಂಕರಗೌಡ ಹಾಗೂ ಹಲವಾರು ನಾಯಕರನ್ನು ಬೆಂಗಳೂರಿಗೆ ಕರೆಸಿ, ನಾಲೆಯ ಉದ್ದೇಶ ವಿವರಿಸಿ ಚಳುವಳಿ ಕೈ ಬಿಡುವಂತೆ ಮನವೊಲಿಸುವಲ್ಲಿ ಯಶಸ್ವಿಯಾದರು. ಇವುಗಳ ನಡುವೆ ತಾವೇ ನಿಂತು ಸ್ಥಾಪಿಸಿದ್ದ ಜನತಾ ಶಿಕ್ಷಣ ಸಂಸ್ಥೆಯಿಂದ ಗೌಡರು ಹಲವರ ವಿರೋಧದಿಂದಾಗಿ ಹೊರ ಬರಬೇಕಾಯಿತು. ಇಷ್ಟರ ನಡುವೆಯೂ 1983ರಲ್ಲಿ ಏಕಾಏಕಿ ಮತ್ತೆ ವಿಧಾನಸಭಾ ಚುನಾವಣೆಗೆ ಧುಮುಕಿದರು.

ಹೊಸದಾಗಿ ರೂಪುಗೊಂಡಿದ್ದ ಕೆರೆಗೋಡು ಕ್ಷೇತ್ರದಿಂದ ಶಂಕರಗೌಡರು ತಮ್ಮ ಶಿಷ್ಯ ಹೆಚ್.ಡಿ. ಚೌಡಯ್ಯನವರ ವಿರುದ್ಧ ಸ್ಪರ್ಧಿಸಿ ಈ ಚುನಾವಣೆಯಲ್ಲಿ ಅಪಜಯ ಅನುಭವಿಸಿದರು. ಈ ಸೋಲಿನಿಂದ ತೀವ್ರ ಹತಾಶೆಗೊಂಡ ಗೌಡರು ಸಾರ್ವಜನಿಕ ಬದುಕಿನಿಂದ ದೂರವಾಗಿ ತಮ್ಮ ನೋವು ಮರೆಯಲು ಮತ್ತೆ ನಾಟಕ ರಂಗದತ್ತ ಹೊರಳಿದರು. ಈ ಸಮಯದಲ್ಲೇ 'ಪಾದುಕ ಕಿರೀಟ' ಎಂಬ ಪೌರಾಣಿಕ ನಾಟಕ ಬರೆದು ನಿರ್ದೇಶಿಸಿ ತಾವೇ ದಶರಥನ ಪಾತ್ರ ವಹಿಸಿದರು.

1984ರಲ್ಲಿ ಅಕ್ಟೋಬರ್ ತಿಂಗಳಿನಲ್ಲಿ ಇಂದಿರಾಗಾಂಧಿ ಹತ್ಯೆಯಾಗಿ ರಾಷ್ಟ್ರ ರಾಜಕಾರಣದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಆ ವರ್ಷ ನಡೆದ ಸಂಸತ್ ಚುನಾವಣೆಗೆ ಜಿಲ್ಲೆಯ ಜನ, ಬಲವಂತದಿಂದ ಗೌಡರನ್ನು ಚುನಾವಣೆಗೆ ನಿಲ್ಲಿಸಿ ಗೆಲ್ಲಿಸುವುದರ ಮೂಲಕ ತಾವು ಹಿಂದೆ ಮಾಡಿದ್ದ ತಪ್ಪನ್ನು ತಿದ್ದಿಕೊಂಡರು.

ತಮ್ಮ ಇಳಿವಯಸ್ಸಿನಲ್ಲಿ ಸಂಸತ್ ಪ್ರವೇಶಿಸಿದ ಗೌಡರು ಪ್ರಥಮ ಬಾರಿ ಅಧಿವೇಶನದಲ್ಲಿ ಸದಸ್ಯರು ಭಾಷಣ ಓದುವುದನ್ನು ಕಂಡು ಕಿಡಿ ಕಾರಿದರು. ಇದಕ್ಕೆ ಕಡಿವಾಣ ಹಾಕಬೇಕೆಂದು ಅಧ್ಯಕ್ಷರನ್ನು ಒತ್ತಾಯಿಸಿದರು. ಗ್ರಾಮಗಳ ಸ್ಥಿತಿ-ಗತಿಗಳ ಬಗ್ಗೆ ರೈತ ಸಮುದಾಯದ ನೋವು-ಬವಣೆಗಳ ಬಗ್ಗೆ ಸಂಸತ್ತಿನಲ್ಲಿ ಗೌಡರು ಮಾತನಾಡುವಾಗ ಅವರಲ್ಲಿದ್ದ ತಾತ್ವಿಕ ಸಿಟ್ಟು ಪ್ರದರ್ಶಿತವಾಗುತಿತ್ತು. ದಿನಾಂಕ 18-4-85ರಲ್ಲಿ ಸಂಸತ್ತಿನಲ್ಲಿ ಕೈಗಾರಿಕೆ ಬೇಡಿಕೆ ಕುರಿತು ಮಾತನಾಡುತ್ತಾ "ಇಂದಿನ ಗ್ರಾಮಗಳ ದುಸ್ಥಿತಿಗೆ ರಾಜಕಾರಣಿಗಳೆ ಕಾರಣ" ಎಂದು ನೇರವಾಗಿ ನುಡಿದು ಎಲ್ಲರಲ್ಲೂ ಬೆರಗು ಮತ್ತು ವಿಸ್ಮಯ ಮೂಡಿಸಿದ್ದರು. ಶಂಕರಗೌಡರು ರಾಜಕೀಯವಾಗಿ ಸಂಸತ್ ಸದಸ್ಯ ಸ್ಥಾನವನ್ನು ಎಂದೂ ದುರುಪಯೋಗಪಡಿಸಿಕೊಳ್ಳದೆ ಆ ಸ್ಥಾನಕ್ಕೆ ಗೌರವ ತಂದರು, ಸಂಸತ್ ಸದಸ್ಯರಾಗಿ ಅವರ ರಾಜಕೀಯ ಜೀವನ ಕಡೆಯದಾಯಿತು.

# ಶಿಕ್ಷಣ ಸಚಿವರಾಗಿ ಸಾಧನೆ

ಕೆ.ವಿ. ಶಂಕರಗೌಡರಿಗೆ ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿನ ಆಸಕ್ತಿಗಿಂತ ಹೆಚ್ಚು ಆಸಕ್ತಿ ಶಿಕ್ಷಣ ಕ್ಷೇತ್ರದ ಬಗೆಗಿತ್ತು. ಶಿಕ್ಷಣವೊಂದೇ ಗ್ರಾಮೀಣ ಬದುಕನ್ನು ಹಾಗೂ ರಾಷ್ಟ್ರವನ್ನೂ ಉದ್ಧಾರ ಮಾಡಬಲ್ಲದು ಎಂದು ಅವರು ನಂಬಿದ್ದರು. ಬಡತನವನ್ನು ಮೆಟ್ಟಿ ನಿಲ್ಲಲು ಶಿಕ್ಷಣವೊಂದೇ ಅಸ್ತ್ರ ಎಂದು ಶಂಕರಗೌಡರು ಬಲವಾಗಿ ನಂಬಿದ್ದರು.

ಶಂಕರಗೌಡರಿಗೆ ಶಿಕ್ಷಣದ ಬಗ್ಗೆ ಇದ್ದ ಪ್ರೀತಿಯನ್ನು ಗಮನಿಸಿ, ರಾಜಕೀಯದಲ್ಲಿ ಪ್ರೋತ್ಸಾಹ ನೀಡಿದವರು ಎಸ್. ನಿಜಲಿಂಗಪ್ಪನವರು. 1966ರಲ್ಲಿ ಶಂಕರಗೌಡರು ಮೇಲ್ಮನೆಗೆ ಚುನಾಯಿತರಾದಾಗ, ಸಚಿವ ಸಂಪುಟದಲ್ಲಿ ಅವರಿಗೆ ಪ್ರಿಯವಾದ ಶಿಕ್ಷಣ ಖಾತೆಯನ್ನೇ ನೀಡಿದರು. ಶಿಕ್ಷಣ ಕ್ಷೇತ್ರದಲ್ಲಿ ಶಂಕರಗೌಡರು ಮಾಡಿದ ಸುಧಾರಣೆ, ಕ್ರಾಂತಿಕಾರಕ ಬದಲಾವಣೆ ಕರ್ನಾಟಕ ರಾಜಕೀಯ ಇತಿಹಾಸದಲ್ಲಿ ಅವರಿಗೆ ಶಾಶ್ವತ ಸ್ಥಾನ ದೊರಕಿಸಿಕೊಟ್ಟವು.

ಬಹಳ ದಿನಗಳ ಕಾಲ ಸರ್ಕಾರದ ಮತ್ತು ಸಮಾಜದ ಉಪೇಕ್ಷೆಗೆ ತುತ್ತಾಗಿದ್ದ ಶಿಕ್ಷಣ ಇಲಾಖೆ ಶಂಕರಗೌಡರ ಪ್ರವೇಶದಿಂದ ಸುಧಾರಣೆ ಕಂಡಿತು. ಶಿಕ್ಷಕರ ವೇತನ ಮತ್ತು ಶಿಕ್ಷಕರ ಸ್ಥಾನಮಾನ ತೀರಾ ನಿಕೃಷ್ಟತೆಗೆ ಗುರಿಯಾದ್ದವು. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ದುಡಿಯುತ್ತಿದ್ದ ಶಿಕ್ಷಕರ ವೇತನವನ್ನು ಸರ್ಕಾರದಿಂದ ನೇರವಾಗಿ ಚೆಕ್ ಮೂಲಕ ಪಾವತಿಯಾಗುವಂತೆ ಮಾಡಿ, ಆಡಳಿತ ವರ್ಗದಿಂದ ಆಗುತ್ತಿದ್ದ ಕಿರುಕುಳವನ್ನು ತಪ್ಪಿಸಿದ ಕೀರ್ತಿ ಗೌಡರಿಗೆ ಸಲ್ಲುತ್ತದೆ. ಭಾರತೀಯ ಶಿಕ್ಷಣ ರಂಗದಲ್ಲಿ ಕೊಠಾರಿ ಆಯೋಗದ ವರದಿ ಹೊಸ ಆಯಾಮವನ್ನೇ ಸೃಷ್ಟಿಸಲು ಸಹಾಯಕವಾಯಿತು. ಶಿಕ್ಷಣದಲ್ಲಿ ರಾಷ್ಟ್ರೀಯ ಅವಶ್ಯಕತೆಯನ್ನು ಗುರುತಿಸಿ, ಅವುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಬೇಕೆಂದು ವರದಿಯಲ್ಲಿ ತಿಳಿಸಲಾಗಿತ್ತು. ಈ ವರದಿಯ ಅಂಶಗಳನ್ನೆಲ್ಲಾ ಶಂಕರಗೌಡರು ಜಾರಿಗೆ ತಂದರು.

ಶಿಕ್ಷಣದಲ್ಲಿ ವಿಜ್ಞಾನದ ಶಿಕ್ಷಕರು, ಉತ್ತಮ ಪಠ್ಯ ಪುಸ್ತಕ, ಪ್ರಯೋಗಾಲಯವಿಲ್ಲದೆ ಕಾರ್ಯಕ್ರಮ ಯಶಸ್ವಿಯಾಗುವುದಿಲ್ಲ ಎಂಬುದನ್ನು ಮನಗಂಡ ಅವರು 1968ರಲ್ಲೇ ವಿಜ್ಞಾನ ಶಿಕ್ಷಣ ಸಂಸ್ಥೆ ಪ್ರತ್ಯೇಕವಾಗಿ ಅಸ್ತಿತ್ವಕ್ಕೆ ಬರಬೇಕೆಂದು ಆಗ್ರಹಿಸಿದ್ದರು.

1958ರಲ್ಲಿ ಪಠ್ಯಪುಸ್ತಕಗಳ ರಾಷ್ಟ್ರೀಕರಣ ನೀತಿ ಜಾರಿಗೆ ಬಂದರೂ ಅದರ ವ್ಯವಹಾರವೆಲ್ಲಾ ಶಿಕ್ಷಣ ಇಲಾಖೆ ನಿರ್ದೇಶಕರ ಮೂಲಕ ನಡೆಯುತ್ತಿತ್ತು. ಪಠ್ಯಪುಸ್ತಕ ರಚನೆ, ವಿತರಣೆ ಜವಾಬ್ದಾರಿಯ ಕಾರ್ಯ ಎಂಬುದನ್ನು ಮನಗಂಡ ಶಂಕರಗೌಡರು ಪ್ರತ್ಯೇಕ ಪಠ್ಯಪುಸ್ತಕ ನಿರ್ದೇಶನಾಲಯವನ್ನು ಕೂಡ ಸ್ಥಾಪಿಸಿದರು. 1970ರಲ್ಲಿ ಶಿಕ್ಷಣ ಇಲಾಖೆಯಲ್ಲಿ ವಿಕೇಂದ್ರೀಕರಣ ವ್ಯವಸ್ಥೆ ಜಾರಿಗೆ ತಂದು ಕೆಳಗಿನ ಅಧಿಕಾರಿಗಳಿಗೆ ಹೆಚ್ಚು ಹೊಣೆಗಾರಿಕೆ ಬರುವಂತೆ ನೋಡಿಕೊಂಡ ಶಂಕರಗೌಡರು, ತಾಲ್ಲೂಕು ಬೋರ್ಡ್ ಉಸ್ತುವಾರಿಯಲ್ಲಿ ನಡೆಯುತ್ತಿದ್ದ

ಶಾಲೆಗಳನ್ನು ಸರ್ಕಾರದ ಅಧೀನಕ್ಕೆ ತೆಗೆದುಕೊಳ್ಳಲು ಆದೇಶ ಜಾರಿ ಮಾಡಿದರು. ಶಿಕ್ಷಣದ ಅವಧಿ 10+2+3 ವರ್ಷಗಳಿರಬೇಕೆಂದು ಶಿಕ್ಷಣ ಆಯೋಗದ ಮುಖ್ಯ ಸಲಹೆಯಾಗಿತ್ತು. ಎರಡು ವರ್ಷಗಳ ಪದವಿ ಘಟಕ ಪ್ರತ್ಯೇಕವಾಗಿದ್ದು, ಇದು ಪದವಿ ತರಗತಿಗೆ ವಿದ್ಯಾರ್ಥಿಗಳನ್ನು ಸಿದ್ಧಪಡಿಸುವ ಅವಧಿಯಾಗಿರಬೇಕೆಂದು ಆಯೋಗ ಸಲಹೆ ಮಾಡಿತ್ತು.

ಅದಕ್ಕೂ ಮುನ್ನ ಒಂದು ವರ್ಷದ ಪಿ.ಯು.ಸಿ. ವ್ಯವಸ್ಥೆ ಜಾರಿಯಲ್ಲಿತ್ತು.

ಗೌಡರು ಶಿಕ್ಷಣ ಆಯೋಗದ ಸಲಹೆಯನ್ನು ದೇಶದಲ್ಲಿ ಪ್ರಥಮ ಬಾರಿಗೆ ಜಾರಿಗೆ ತಂದು ಕರ್ನಾಟಕಕ್ಕೆ ಕೀರ್ತಿ ಸಲ್ಲುವಂತೆ ಮಾಡಿದರು.

ಶಿಕ್ಷಣ ತಜ್ಞರಾದ ಜೆ.ಬಿ. ಮಲ್ಲಾರಾಧ್ಯ, ಎಂ.ಪಿ.ಎಲ್. ಶಾಸ್ತ್ರಿ ಮುಂತಾದವರನ್ನು ಒಳಗೊಂಡ ಸಮಿತಿ ನೇಮಕ ಮಾಡಿ ಶಿಕ್ಷಣದ ರೂಪುರೇಷೆಗಳನ್ನು ತಯಾರಿಸಿ 1972ರಲ್ಲಿ ಹೊಸ ವ್ಯವಸ್ಥೆಯನ್ನು ಜಾರಿಗೆ ತಂದರು. "ಮೈಸೂರು ಯೋಜನೆ" ಎಂಬ ಹೆಸರಿನ ಈ ಕ್ರಾಂತಿಕಾರಕ ಯೋಜನೆಯನ್ನು ಭಾರತ ಸರ್ಕಾರ ನೇಮಿಸಿದ ಪಿ.ಡಿ. ಶುಕ್ಲಾ ನೇತೃತ್ವದ ಸಮಿತಿ ಪೂರ್ಣವಾಗಿ ಪರಿಶೀಲಿಸಿ, ಇಡೀ ದೇಶಕ್ಕೆ ಮಾದರಿ ಎಂಬ ಪ್ರಶಂಸೆಯನ್ನು ನೀಡಿದ್ದು ಗೌಡರಿಗೆ ಶಿಕ್ಷಣ ರಂಗದ ಮೇಲೆ ಇದ್ದ ಅದಮ್ಯ ಪ್ರೀತಿಗೆ ಸಾಕ್ಷಿಯಾಗಿದೆ. ಶಂಕರಗೌಡರ ಶಿಕ್ಷಣ ಪ್ರೇಮ ಅವರ ಜೀವನದುದ್ದಕ್ಕೂ ನಿರಂತರವಾಗಿ ಸಾಗಿತ್ತು. 1986ರಲ್ಲಿ ಪಾರ್ಲಿಮೆಂಟ್ ಸದಸ್ಯರಾಗಿದ್ದಾಗ ಕೂಡ, ಅಂದಿನ ಬಜೆಟ್ ಅಧಿವೇಶನದಲ್ಲಿ ಹೊಸ ಶಿಕ್ಷಣ ನೀತಿಯನ್ನು ಕುರಿತು ಮಾತನಾಡಿ ಅವರು, ನೀಡಿದ ಸಲಹೆಗಳು ಇಂದಿಗೂ ಪ್ರಸ್ತುತವಾಗಿವೆ. ಹೊಸ ಶಿಕ್ಷಣ ನೀತಿಯನ್ನು ಸ್ವಾಗತಿಸುತ್ತಾ ಅದರಲ್ಲಿನ ಲೋಪದೋಷಗಳನ್ನು ಎತ್ತಿ ತೋರಿಸಿದರು. ಸ್ವಾತಂತ್ರ್ಯ ನಂತರ ಶಿಕ್ಷಣದಲ್ಲಿ ಗಮನಾರ್ಹ ಪ್ರಗತಿ ಸಾದಿಸದಿರುವುದಕ್ಕೆ ಅತೃಪ್ತಿ ವ್ಯಕ್ತಪಡಿಸಿದ ಗೌಡರು ಇಂದು ನಮ್ಮ ದೇಶಕ್ಕೆ ಬೇಕಾಗಿರುವುದು ಕೇವಲ ಔಪಚಾರಿಕ ಶಿಕ್ಷಣವಲ್ಲ, ಯುವ ಜನಾಂಗ ಉತ್ತಮ ಬದುಕನ್ನು ಹಾಗೂ ಮಾನವೀಯ ಗುಣಗಳನ್ನು ಅಳವಡಿಸಿಕೊಳ್ಳುವಂಥಹ ಶಿಕ್ಷಣ ಬೇಕೆಂದು ಪ್ರತಿಪಾದಿಸಿದರು. 1986ರಲ್ಲಿ ಪ್ರಕಟವಾದ ತ್ರಿಭಾಷಾ ಸೂತ್ರದ ಬಗ್ಗೆ ಮಾತನಾಡಿ, ಈ ನೀತಿಯನ್ನು ಅಳವಡಿಸುವಾಗ ಏಕರೂಪತೆ ಇಲ್ಲದಿರುವ ಬಗ್ಗೆ ವಿಷಾದ ವ್ಯಕ್ತಪಡಿಸಿದರು. ಎಲ್ಲಾ ರಾಜ್ಯಗಳಲ್ಲೂ ಈ ನೀತಿಯನ್ನು ಜಾರಿಗೆ ತರಲು ಕೇಂದ್ರ ಸರ್ಕಾರ ವಿಫಲವಾದುದರ ಬಗ್ಗೆ ವಿಷಾದಿಸಿದರು.

ಇಂಗ್ಲಿಷ್ ಭಾಷೆ ಮೂಲಕ ಶಿಕ್ಷಣ ನೀಡುವ ಧೋರಣೇಯನ್ನು ಖಂಡಿಸಿ, ಮಾತೃ ಭಾಷೆಯಲ್ಲಿ ಶಿಕ್ಷಣ ಇರಬೇಕೆಂದು ಪ್ರತಿಪಾದಿಸಿದರು. ಇಂಗ್ಲೀಷ್ ಶಿಕ್ಷಣದ ವ್ಯಾಮೋಹದಿಂದ ಲಕ್ಷಾಂತರ ಹಳ್ಳಿಯ ಮಕ್ಕಳ ಬದುಕು ಮುರುಟಿ ಹೋಗುತ್ತಿರುವ ಬಗ್ಗೆ ತಮ್ಮ ಅತೃಪ್ತಿ ವ್ಯಕ್ತಪಡಿಸಿದರು.

ನಮ್ಮ ದೇಶದ ಎಲ್ಲ ಕಾಲಕ್ಕೂ ಇಂಗ್ಲೀಷ್ ಭಾಷೆ ಬಳಸಬಾರದು. ಬ್ರಿಟೀಷರ ನಿರ್ಗಮನದ ನಂತರವೂ ಇಂಗ್ಲೀಷ್ ಭಾಷೆ ನಮ್ಮೊಡನೆ ಇರುವುದು ಖಂಡನೀಯ. ಇಂಗ್ಲೀಷ್ ಒಂದು ಐಚ್ಛಿಕ ಭಾಷೆಯನ್ನಾಗಿ ಅಧ್ಯಯನ ಮಾಡಬಹುದು. ಆದರೆ ಶಿಕ್ಷಣ ಕ್ಷೇತ್ರದಲ್ಲಿ ಅದನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸಬಾರದು ಎಂಬುದು ಗೌಡರ ಅಭಿಮತವಾಗಿತ್ತು.

ಹಿಂದಿ ಭಾಷೆಯ ಬಗ್ಗೆ ಗೌಡರು ಹೊಂದಿರುವ ಅಭಿಪ್ರಾಯ ಬಹಳ ಮುಖ್ಯವಾಗಿದೆ. ಹಿಂದಿ ರಾಷ್ಟ್ರೀಯ ಹಾಗೂ ಸಂಪರ್ಕ ಭಾಷೆಯಾಗಬಹುದು. ಆದರೆ ಹಿಂದಿ ಭಾಷೆಯನ್ನು ಅನಾವಶ್ಯಕವಾಗಿ ಇತರೆ ಭಾಷಿಗರ ಮೇಲೆ ಹೇರಲು ಹೊರಟಿದ್ದೆ ಅನಾದಾರಕ್ಕೆ ಕಾರಣವಾಯಿತೆಂದು ಗೌಡರು ಭಾವಿಸಿದ್ದರು.

ಯಾವುದೇ ರಾಜ್ಯದಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣವಾಗಬೇಕೆಂಬುದು ಗೌಡರ ಮುಖ್ಯ ಧ್ಯೇಯವಾಗಿತ್ತು. ಆದಕ್ಕಾಗಿ ತಾವು ಶಿಕ್ಷಣ ಸಚಿವರಾಗಿದ್ದಾಗಲೇ ಭದ್ರ ಅಡಿಪಾಯವನ್ನು ಹಾಕಿದರು.

ಶಂಕರಗೌಡರು ಸಚಿವರಾಗುವುದಕ್ಕೆ ಮುನ್ನವೇ ಕರ್ನಾಟಕ ಸರ್ಕಾರ ಪ್ರಕಟಿಸಲು ರೂಪಿಸಲಾಗಿದ್ದ ಕನ್ನಡ ವಿಶ್ವಕೋಶ ಯೋಜನೆ ನೆನೆಗುದಿಗೆ ಬಿದ್ದಿತ್ತು.

1968ರ ಬಜೆಟ್ ಅಧಿವೇಶನದಲ್ಲಿ ಈ ವಿಷಯ ಕುರಿತಂತೆ ಸದಸ್ಯರು ಸರ್ಕಾರವನ್ನು ತರಾಟೆ ತೆಗೆದುಕೊಂಡಾಗ ಅದನ್ನು ಸವಾಲಾಗಿ ಸ್ವೀಕರಿಸಿದ ಗೌಡರು, ಈ ಯೋಜನೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಿ, ಖ್ಯಾತ ಸಾಹಿತಿ ನಿರಂಜನರ ನೇತೃತ್ವದಲ್ಲಿ ಪ್ರಕಟಿಸಲು ಮುಂದಾಗಿ, ಕನ್ನಡ ಸಾಹಿತ್ಯ ಲೋಕಕ್ಕೆ ಅಪೂರ್ವ ಕೊಡುಗೆಯನ್ನು ನೀಡಿದರು. ಮಕ್ಕಳನ್ನು ಗುರಿಯನ್ನಾಗಿಟ್ಟುಕೊಂಡು ಕಿರಿಯರಿಗೆ ಜ್ಞಾನ ಗಂಗೋತ್ರಿ ಹೆಸರಿನಲ್ಲಿ 7 ಸಂಪುಟಗಳನ್ನು ಹೊರ ತಂದರು.

# ಗಾಂಧೀಜಿ ಆದರ್ಶಗಳು ಮತ್ತು ಕೆ.ವಿ. ಶಂಕರಗೌಡ

ಕೆ.ವಿ. ಶಂಕರಗೌಡರಿಗೆ ತಮ್ಮ ಸುದೀರ್ಘ ರಾಜಕೀಯ ಹಾಗೂ ಸಾಮಾಜಿಕ ಸೇವೆಗಳ ನಡುವೆ ಅವರನ್ನು ಬಲವಾಗಿ ಸೆಳೆದದ್ದು ಗಾಂಧೀಜಿಯ ಚಿಂತನೆಗಳು ಮತ್ತು ಅವರ ಬದುಕು.

ಗ್ರಾಮೀಣಾಭಿವೃದ್ಧಿ ಬಗ್ಗೆ ಗಾಂಧೀಜಿಯವರಿಗೆ ಇದ್ದ ದೂರದೃಷ್ಟಿ ಚಿಂತನೆ ಮತ್ತು ಗುಡಿ ಕೈಗಾರಿಕೆಗಳ ಮಹತ್ವದ ಬಗ್ಗೆ ಅವರಿಗಿದ್ದ ಅಪರಿಮಿತಿ ಜ್ಞಾನ, ದುಡಿಯುವ ಕೈಗಳಿಗೆ ಉದ್ಯೋಗ ನೀಡಬೇಕೆಂಬ ನಿಟ್ಟಿನಲ್ಲಿ ಸ್ವಾಭಿಮಾನದ ಸಂಕೇತವಾಗಿ ಸೃಷ್ಟಿಸಿದ ಖಾದಿ ಗ್ರಾಮೋದ್ಯೋಗ ಎಂಬ ಪರಿಕಲ್ಪನೆ ಹಾಗೂ ಸಹಕಾರ ತತ್ವ ಮತ್ತು ಚಿಂತನೆಗಳು ಶಂಕರಗೌಡರನ್ನು ಬಲವಂತವಾಗಿ ಆವರಿಸಿಕೊಂಡಿದ್ದವು.

ಸುಮಾರು 1971ರ ಸಮಯದಲ್ಲಿ ಗಾಂಧೀಜಿಯವರ ಸಹಾಯಕರಾಗಿ ಕಾರ್ಯ ನಿರ್ವಹಿಸಿದ್ದ ಪ್ಯಾರೆಲಾಲ್ ಬರೆದ "ಮಹಾತ್ಮನ ಕೊನೆಯ ದಿನಗಳು" ಕೃತಿಯನ್ನು ಓದಿದ ಶಂಕರಗೌಡರು ಆ ಕೃತಿಯಿಂದ ತುಂಬಾ ಪ್ರಭಾವಿತರಾಗಿಬಿಟ್ಟರು.

ಭಾರತೀಯ ಸಮಾಜದಲ್ಲಿ ತಾಂಡವವಾಡುತ್ತಿರುವ ಅಜ್ಞಾನ, ಅನಾಚಾರ, ಅನಕ್ಷರತೆಗೆ ಗಾಂಧೀಜಿಯ ತತ್ವಗಳೇ ಪರಿಣಾಮಕಾರಿಯಾದ ಮದ್ದು ಎಂಬುದನ್ನು ಶಂಕರಗೌಡರು ಮನಗಂಡರು. ಅಲ್ಲದೆ ಈ ಮಹತ್ವದ ಕೃತಿಯನ್ನು ಕನ್ನಡಕ್ಕೆ ಅನುವಾದಿಸಲು ಮುಂದಾದರು. ಗಾಂಧೀಜಿಯವರ ಪ್ರಭಾವ ಶಂಕರಗೌಡರ ಮೇಲೆ ಎಷ್ಟೊಂದು ಪರಿಣಾಮ ಬೀರಿತೆಂದರೆ, 1-8-1980ರಲ್ಲಿ ಕರ್ನಾಟಕವು ಸೇರಿದಂತೆ ದೇಶದ ಎಲ್ಲಾ ಮುಖಂಡರಿಗೆ ಮನವಿ ಪತ್ರಗಳನ್ನು ಗೌಡರು ಕಳುಹಿಸಿದ್ದರು. ಅವರು ಬರೆದ ಮನವಿ ಪತ್ರದ ಸಾರಾಂಶ ಇಂತಿದೆ.

ಇಡೀ ಮನುಕುಲದ ಪ್ರಗತಿಗಾಗಿ ಶ್ರಮಿಸಿ, ಜಾಗತಿಕ ಶಾಂತಿಯನ್ನು ಸ್ಥಾಪಿಸುವ ಮೂಲಕ ಸ್ವತಂತ್ರ ಭಾರತ ಸೋದರ ರಾಷ್ಟ್ರಗಳಿಗೆ ಮಾದರಿಯಾಗಬೇಕೆಂಬುದು ರಾಷ್ಟ್ರಪಿತ ಮಹಾತ್ಮಗಾಂಧೀಜಿಯ ಬಯಕೆಯಾಗಿತ್ತು. ಸ್ವತಂತ್ರ ಭಾರತ ಅವರ ಕನಸಿನ ಭಾರತವಾಗದೆ ದರಿದ್ರ ಭಾರತವಾಗುಳಿದಿದೆ. ಕೋಟ್ಯಾಂತರ ಶ್ರಮಜೀವಿಗಳು, ಅದರಲ್ಲಿಯೂ ಹಳ್ಳಿಗರು ಮೌಢ್ಯ ದಾರಿದ್ರ್ಯಗಳ ಕೊಳಕಿನಲ್ಲಿ ಕುಟುಕು ಜೀವನವನ್ನು ಸಾಗಿಸುತ್ತಿದ್ದಾರೆ. ಅವರ ಯೋಗಕ್ಷೇಮದ ಬಗ್ಗೆ ಯಾರಿಗೂ ಕಾಳಜಿಯಿಲ್ಲ. ಅಂಥಹ ಜಗತ್ಪೂಜ್ಯ ಮಹಾತ್ಮನನ್ನು ಹೆತ್ತ, ಅವರ ಆಧ್ಯಾತ್ಮಿಕ ಸಂಸ್ಕೃತಿಗೆ ಉತ್ತರಾಧಿಕಾರಿಯಾಗಿರುವ ದೇಶವಿಂದು ಅವಮಾನದಿಂದ ತಲೆತಗ್ಗಿಸಬೇಕಾಗಿರುವುದು ವಿಷಾದನೀಯವಾಗಿದೆ. ಅವರು ತೋರಿದ ದಾರಿಯಲ್ಲಿ ಸಾಗಲಾರದೆ ನಾವವರ ನಿರೀಕ್ಷೆಗನುಗುಣವಾಗಿ ಮೇಲೇರಲಾಗಲಿಲ್ಲ.

'ಭಾರತ ಹಳ್ಳಿಗಳ ದೇಶ. ಅದರ ಪ್ರಗತಿ ಹಳ್ಳಿಗಳ ಪ್ರಗತಿಯನ್ನವಲಂಬಿಸಿದೆ. ಎಲ್ಲಿಯ ತನಕ ಹಳ್ಳಿಯ ಜನ ನಗರಗಳ ಅಭಿವೃದ್ಧಿಗಾಗಿ, ಅಲ್ಲಿಯ ಜನರ ಸುಖಕ್ಕಾಗಿ ದುಡಿಯುತ್ತಾ,

ಅವರ ತಿರಸ್ಕಾರಕ್ಕೆ ಗುರಿಯಾಗಿ ಮೂಕ ಪ್ರಾಣಿಗಳಂತೆ ಬದುಕುತ್ತಾರೆಯೋ ಅಲ್ಲಿಯ ತನಕ ನಾಡಿನ ಕ್ಷೇಮ ಬರಿಯ ಮಿಥ್ಯೆಯಾಗುತ್ತದೆ. ಜಗತ್ತಿನ ಆಗು ಹೋಗುಗಳಲ್ಲಿ ಕುತೂಹಲಾಸಕ್ತಿಯುಳ್ಳವರೂ, ಸೂಕ್ಷ್ಮವೀಕ್ಷಣ ಸಾಮರ್ಥ್ಯವುಳ್ಳವರೂ, ಧ್ಯಾನ ಮೌನಾದಿಗಳ ಮೂಲಕ ಅತಿರಿಂದ್ರಿಯಾದ ಪಟುತ್ವವನ್ನು ಬೆಳೆಸಿಕೊಂಡಿದ್ದವರೂ ಆದ ಗಾಂಧೀಜಿ ಸ್ವತಂತ್ರಾಲೋಚಕರಾಗಿದ್ದಾರೆಂಬುದನ್ನು ಮರೆಯುವಂತಿಲ್ಲ. ತಾವು ರೂಪಿಸಿದ ಸಾಮಾಜಿಕ ಆರ್ಥಿಕ ಸಿದ್ಧಾಂತಗಳನ್ನು ಅನುಷ್ಠಾನಕ್ಕೆ ತರಬೇಕೆಂದು ಅವರು ಶ್ರಮಿಸಿದ್ದೂ ಉಂಟು. ಹಲವು ಸಲ ಕಾಂಗ್ರೆಸ್ಸು ಆ ಸಿದ್ಧಾಂತವನ್ನು ಚರ್ಚಿಸಿದ್ದೂ ಉಂಟು. ಆ ಬಗ್ಗೆ ಅವರ ಮತ್ತು ನೆಹರುರವರ ನಡುವೆ ಪತ್ರ ವ್ಯವಹಾರ ಸಹ ನಡೆಯುತ್ತದೆ. ನಮ್ಮ ದೃಷ್ಟಿ, ವ್ಯತ್ಯಾಸ ಮೂಲಭೂತವಾದದ್ದೆನ್ನುವುದಾದರೆ, ಅದು ಜನಕ್ಕೆ ಗೊತ್ತಾಗಬೇಕು. ಅವರನ್ನು ಕತ್ತಲಲ್ಲಿಡಬಾರದು. ನಮ್ಮಿಬ್ಬರ ಸಂಬಂಧ ಕೇವಲ ರಾಜಕೀಯಾತ್ಮಕವಾದುದಲ್ಲ. ಅದಕ್ಕಿಂತ ಆಳವಾದದ್ದು ಮತ್ತು ಶಾಶ್ವತವಾದದ್ದು. ಆದ್ದರಿಂದ ರಾಜಕೀಯ ಕ್ಷೇತ್ರಗಳಲ್ಲಿ ಸಹ ನಾವಿಬ್ಬರೂ ಪರಸ್ಪರವಾಗಿ ಅರ್ಥ ಮಾಡಿಕೊಳ್ಳಬೇಕು. ನಾವಿಬ್ಬರೂ ಭರತ ಖಂಡದ ಸ್ವಾತಂತ್ರ್ಯಕ್ಕಾಗಿ ಬದುಕಿದ್ದೇವೆ. ಅದಕ್ಕಾಗಿ ನಾವು ಸಾಯಲೂ ಸಿದ್ಧರಾಗಿದ್ದೇವೆ. ನನಗೀಗ ವಯಸ್ಸಾಗಿದೆ. ಆದ್ದರಿಂದ ನಾನು ನಿಮ್ಮನ್ನು ನನ್ನ ಉತ್ತರಾಧಿಕಾರಿಯೆಂದು ಹೆಸರಿಸಿದ್ದೇನೆ. ನೀವು ನನ್ನನ್ನು, ನಾನು ನಿಮ್ಮನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ಆಗ ಮಾತ್ರ ನಾನು ತೃಪ್ತನಾಗುತ್ತೇನೆ. ಇಂಡಿಯಾ ಮತ್ತು ಇಂಡಿಯಾದ ಮೂಲಕ ಜಗತ್ತು ಸ್ವಾತಂತ್ರ್ಯವನ್ನು ಗಳಿಸಬೇಕಾದರೆ ಭಾರತೀಯರು ನಗರಗಳಲ್ಲಿ ಅಲ್ಲ ಹಳ್ಳಿಗಳಲ್ಲಿ, ಅರಮನೆಗಳಲ್ಲಿ ಅಲ್ಲ ಕುಟೀರಗಳಲ್ಲಿ ಜೀವಿಸಬೇಕಾಗುತ್ತದೆ. ನಗರ ಹಾಗೂ ಅರಮನೆಗಳಲ್ಲಿ ಕಡೆಗಣಿಸಿದರೆ ವಾಸಿಸುವ ಜನ ಶಾಂತಿಯಿಂದ ಬದುಕಲಾರರು. ಸತ್ಯಾ ಹಿಂಸೆಗಳನ್ನು ಕಡೆಗಣಿಸಿದರೆ ಮನುಕುಲ ವಿನಾಶ ಹೊಂದುತ್ತದೆ. ಗ್ರಾಮೀಣ ಜೀವನದ ಹಾಗೂ ಚರಕದ ಸರಳತೆಯಲ್ಲಿ ಮಾತ್ರ ಸತ್ಯಾಹಿಂಸೆಗಳನ್ನು ಕಾಣಬಹುದಾಗಿದೆ. ಜಗತ್ತು ತಪ್ಪು ದಾರಿಯಲ್ಲಿ ಸಾಗುತ್ತಿದ್ದರೆ ನಾನು ಹೆದರಬೇಕಾಗಿಲ್ಲ. ಆದರೆ ಕೊನೆಯುಸಿರಿರುವ ತನಕ ಇಂಡಿಯಾವನ್ನು, ಇಂಡಿಯಾದ ಮೂಲಕ ಇಡೀ ಜಗತ್ತನ್ನೂ ಪ್ರಳಯದಿಂದ ಸಂರಕ್ಷಿಸಬೇಕಾದ್ದು ನನ್ನ ಕರ್ತವ್ಯವಾಗಿದೆ.

"ನನ್ನ ಆದರ್ಶ ಗ್ರಾಮದಲ್ಲಿ ಬುದ್ಧಿವಂತರಿರುತ್ತಾರೆ, ಅವರು ಪ್ರಾಣಿಗಳಂತೆ ಕೊಳಕು ಕತ್ತಲಲ್ಲಿ ವಾಸಿಸುವುದಿಲ್ಲ. ಅಲ್ಲಿ ರೋಗ ರುಜಿನಗಳಿರುವುದಿಲ್ಲ, ಸೋಂಕುಗಳಿರುವುದಿಲ್ಲ, ಭೋಗ ವಿಲಾಸವಿರುವುದಿಲ್ಲ. ಪ್ರತಿಯೊಬ್ಬರೂ ದುಡಿಯುತ್ತಾರೆ. ಗಾಂಧೀಜಿಯ ಈ ಪತ್ರಕ್ಕೆ ನೆಹರು ನೀಡಿದ ಉತ್ತರದ ಸಾರಾಂಶವಿದು. "ಹಳ್ಳಿಗಳು ಮಾತ್ರವೇ ಸತ್ಯಾಹಿಂಸೆಗಳ ಸಾಕಾರಗಳಾಗಿವೆಯೆಂಬ ಸಂಗತಿ ನನಗರ್ಥವಾಗದು. ಸಾಮಾನ್ಯವಾಗಿ ಹಳ್ಳಿಗಳು ಬೌದ್ಧಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹಿಂದುಳಿದಿವೆ. ಈ ಹಿಂದುಳಿಕೆಯ ವಾತಾವರಣದಲ್ಲಿ ಪ್ರಗತಿ ಸಾಧ್ಯವಾಗದು. ಸಂಕುಚಿತ ಮನೋಭಾವದ ಜನ ಅಸತ್ಯ ಮತ್ತು

ಹಿಂಸಾನುವರ್ತಿಗಳಾಗಿರುವುದೇ ಹೆಚ್ಚು. ಆತನ ವಸತಿ, ಶಿಕ್ಷಣ, ನಿರ್ಮಲೀಕರಣ ಇವು ನಮ್ಮ ದೇಶ ಪೂರೈಸಬಹುದಾದ ಕನಿಷ್ಠಾವಶ್ಯಕತೆಗಳು. ಈ ಅವಶ್ಯಕತೆಗಳನ್ನು ನಾವೀಗ ಬೇಗ ಪೂರೈಸಬೇಕಾಗಿದೆ. ಆಧುನಿಕ ಸೌಲಭ್ಯಗಳ ವಿಸ್ತರಣೆಯನ್ನು ಮುಂದುವರಿಸಬೇಕಾಗಿದೆ. ಅದಕ್ಕಾಗಿ ಬೃಹತ್ ಕೈಗರಿಕೆಗಳನ್ನು ರೂಢಿಸಬೇಕಾಗಿದೆ. ಅವು ಗ್ರಾಮೀಣ ಸಮಾಜಕ್ಕೆ ಹೊಂದಿಕೆಯಾಗುತ್ತವೆಯೇ? ಅದನ್ನು ವಿಕೇಂದ್ರೀಕರಿಸಬೇಕೆನ್ನುವುದು ನನ್ನ ಮತ. ದೇಶದಲ್ಲಿ ಎರಡು ವಿಧದ ಆರ್ಥಿಕ ನೀತಿ ಚಾಲ್ತಿಯಲ್ಲಿರುವುದಾದರೆ ಸಂಘರ್ಷ ಅನಿವಾರ್ಯವಾಗಿ, ಒಂದು ಮತ್ತೊಂದನ್ನು ಹಿಂದೆ ಹಾಕುವ ಸಂಭವವುಂಟು. ನೀವು ಸರಿಯಾಗಿಯೇ ಹೇಳಿರುವಂತೆ ಪ್ರಪಂಚದ ಬಹುಭಾಗ ಆತ್ಮಹತ್ಯೆಯಲ್ಲಿ ನಿರತವಾಗಿರುವುದಂತು ನಿಜ. ನಾಗರಿಕತೆಯಲ್ಲಿ ಅಂತರ್ಗತವಾಗಿರುವ ದುಷ್ಟ ಬೀಜದಿಂದಾಗಿ ಅಂಥ ಪರಿಸ್ಥಿತಿ ಅನಿವಾರ್ಯವಾಗಿದೆ. ಈ ಕೇಡನ್ನು ತೊಡೆದು, ಹಿಂದಿನಂತೆ ಇಂದೂ ಒಳಿತನ್ನು ರಕ್ಷಿಸುವ ಬಗೆ ಹೇಗೆಂಬುದೇ ನಮ್ಮ ಮುಂದಿರುವ ಸಮಸ್ಯೆ. ವರ್ತಮಾನದಲ್ಲಿಯೂ ಒಳಿತಿದೆಯೆಂಬುದನ್ನಂತು ಮರೆಯುವಂತಿಲ್ಲ."

ಗ್ರಾಮಾಧಾರಿತ ಅರ್ಥ ನೀತಿ ಗಾಂಧೀಜಿಯ ಮನೋಧರ್ಮವಾದರೆ, ಆಧುನಿಕ ಕೈಗಾರಿಕಾಧಾರಿತ ಅರ್ಥನೀತಿ ನೆಹರುರವರದೆನ್ನುವ ವಿಷಯ ಅವರ ಪತ್ರ ವ್ಯವಹಾರದಿಂದ ಸ್ಪಷ್ಟವಾಗುತ್ತದೆ. ಪ್ರಾಯೋಗಿಕ ವಿವೇಕದ ಗಟ್ಟಿ ತಳಹದಿ ಗಾಂಧೀಜಿಯ ಅರ್ಥ ನೀತಿಗೆ ಆಧಾರವಾದರೆ, ಆಧುನಿಕ ತಂತ್ರವಿಜ್ಞಾನದ ಶಿಥಿಲ ತಳಹದಿ ನೆಹ್ರೂರವರ ಅರ್ಥ ನೀತಿಯ ಆಧಾರವಾಗುತ್ತದೆ. ಅವರಿಬ್ಬರೊಳಗೆ ಭಿನ್ನಾಭಿಪ್ರಾಯವಿದ್ದರೂ, ನೆಹರುರವರ ಶ್ರದ್ಧೆ ಪ್ರಾಮಾಣಿಕತೆಗಳು ಪ್ರಶ್ನಾತೀತವಾದುವೆಂದೇ ಹೇಳಬೇಕಾಗುತ್ತದೆ. ಅನಂತರ ಗಾಂಧೀಜಿ ತಮ್ಮ ಸ್ವಭಾವಾಕ್ಕನುಗುಣವಾಗಿ, ಅನುನಯದ ಮಾರ್ಗ ಹಿಡಿದರೇ ಹೊರತು ಹಠಮಾರಿಯಾಗಲಿಲ್ಲ. ನೆಹ್ರೂರವರನ್ನು ತಮ್ಮ ಮಾರ್ಗಕ್ಕೆಳೆದುಕೊಳ್ಳುವ ಸಲುವಾಗಿ ಪತ್ರ ವ್ಯವಹಾರವನ್ನು ಮುಂದುವರಿಸುತ್ತಾರೆ. ಶೀಘ್ರ ರಾಜಕೀಯ ಪರಿವರ್ತನೆಗಳಿಂದಾಗಿ ಹಾಗೂ ಜಾತಿಭೂತದ ವಿಕಟ ನರ್ತನದಿಂದಾಗಿ ಸ್ವಾತಂತ್ರ್ಯಾನಂತರ ಅವರ ಮಾತುಕತೆ ಹಿಂದಿನಂತೆ ಸಾಗುವುದಿಲ್ಲ.

'ಆರ್ಥಿಕವಾಗಿ ಮತ್ತು ವೈಜ್ಞಾನಿಕವಾಗಿ ಅಭಿವೃದ್ಧಿ ಹೊಂದಿ ಪಾಶ್ಚಾತ್ಯ ರಾಷ್ಟ್ರಗಳ ಕೈಗಾರಿಕಾ ನೀತಿಯನ್ನು ಅನುಕರಿಸಲು ಭಾರತ ಮುಂದಾಗುತ್ತದೆ. ಆಂಗ್ಲರ ಆಡಳಿತದಲ್ಲಿ ತರಬೇತಿ ಪಡೆದ ಉನ್ನತಾಧಿಕಾರಿಗಳ ಮತ್ತು ನೀತಿ ಪ್ರತಿಪಾದಕರ ಮನೋಧರ್ಮ ಹೊಸ ಆರ್ಥಿಕ ವ್ಯವಸ್ಥೆಯಲ್ಲಿ ಪ್ರತಿಬಿಂಬಗೊಳ್ಳುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಅವರನ್ನು ಖಂಡಿಸುತ್ತಿದ್ದ ವ್ಯಕ್ತಿಗಳೇ ಸಾರ್ವಜನಿಕ ಟೀಕೆಗಳ ಅಪಾಯಕ್ಕವರು ಬಲಿಯಾಗದಂತೆ ರಕ್ಷಿಸುತ್ತಾರೆ. ಈ ಪರಿಸ್ಥಿತಿಯಲ್ಲಿ ಅಪಾರ ಹಾನಿಗೊಳಗಾದವರೆಂದರೆ ಹಳ್ಳಿಯ ಮುಗ್ಧ ಜನ. ಪ್ರತಿಕೂಲ

ಪರಿಸ್ಥಿತಿಗೆ ವಿರುದ್ಧವಾಗಿ ಹೋರಾಟ ನಡೆಸುತ್ತಿರುವಾಗಲೇ ಗ್ರಾಮೀಣ ಸಮಾಜ ದಾರಿ ತಪ್ಪಿ, ವಿಕೃತವಾಗಿ ಮಾಲಿನ್ಯಕ್ಕೆ ಬಲಿಯಾಗುತ್ತದೆ. ಅಪರೂಪವಾಗಿ ಹೊರತು, ಗ್ರಾಮೀಣರು ದಂಗೆ ಎದ್ದದ್ದಿಲ್ಲ. ಇದೆಲ್ಲದರ ಪರಿಣಾಮವಾಗಿ ನಮ್ಮ ಆರ್ಥಿಕ ವ್ಯವಸ್ಥೆ ಸಂಪೂರ್ಣವಾಗಿ ಮುರಿದು ಬಿದ್ದಿದೆ. ಸಮಾಜದ ವಿವಿಧ ವರ್ಗಗಳ ನಡುವೆ ಸಾಮಾಜಿಕ ಮತ್ತು ಆರ್ಥಿಕ ಸಮತೋಲನ ತಪ್ಪಿದೆ. ಒಂದು ಕಡೆ ಸಮೃದ್ಧಿ ಮೇರೆ ಮೀರಿದ್ದರೆ ಮತ್ತೊಂದು ಕಡೆ ಹಸಿವು ಜನರನ್ನು ಬಲಿ ತೆಗೆದುಕೊಳ್ಳುತ್ತಿದೆ. ಗಾಂಧೀಜಿಯವರ ಪ್ರವಾದಿವಾಣಿ ನಿಜವಾಗುತ್ತಿದೆ.

ಗ್ರಾಮ ಸ್ವರಾಜ್ಯ ಸ್ಥಾಪನೆ ಗಾಂಧೀಜಿಯ ಸುವರ್ಣ ಸ್ವಪ್ನ. ಕೃಷಿ ಮತ್ತು ಗೃಹ ಕೈಗಾರಿಕೆಗಳೇ ಗ್ರಾಮ ಸಮಾಜದ ಆರ್ಥಿಕ ವ್ಯವಸ್ಥೆಯ ಆಧಾರಗಳಾಗಬೇಕು. ಸರ್ವತೋಮುಖವಾದ ವಿಕಾಸಕ್ಕೆ ಅನುಕೂಲವಾಗುವಂತೆ ಅನಿವಾರ್ಯವಾದ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಬಹುದು. ಖಾಸಗಿ ಸ್ವತ್ತಿಗೆ ಅವಕಾಶವಿರಬಾರದು, ಇರುವುದಾದರೆ ಉಳ್ಳವರು ಧರ್ಮದರ್ಶಿಗಳಂತಿರಬೇಕು. ಮನೆಗಳಲ್ಲಿ ತಯಾರಿಸಿಕೊಳ್ಳಬಹುದಾದ ಜೀವನಾವಶ್ಯಕತೆಗಳನ್ನು ಕಾರ್ಖಾನೆಗಳಿಗೆ ಒಪ್ಪಿಸಬಾರದು. ಅದರಿಂದ ನೂರಾರು ಸಾವಿರಾರು ಕೈಗಳಿಗೆ ಕೆಲಸ ಇಲ್ಲವಾಗುತ್ತದೆ. ನಮ್ಮ ದೇಶದಲ್ಲಿ ಸಮೃದ್ಧಿಯಾಗಿ ದೊರಕುತ್ತಿರುವ ಮಾನವಶಕ್ತಿಯನ್ನು ಉಪಯುಕ್ತವಾಗಿ ಬಳಸಿಕೊಳ್ಳಬೇಕೆಂಬುದೇ ಅವರ ಸಿದ್ಧಾಂತದ ರಹಸ್ಯ. ಈ ವ್ಯವಸ್ಥೆಯಿಂದ ಪ್ರತಿಯೊಬ್ಬನೂ ಸ್ವಾವಲಂಭಿಯಾಗಿರಲು ಜೀವಿಕೆಯನ್ನು ಸಂಪಾದಿಸಲು ಸಾಧ್ಯವಾಗುತ್ತದೆ. ಗಾಂಧೀಜಿ ಪ್ರಕಾರ ಚರಕ ಭಾರತೀಯ ಸ್ವಾತಂತ್ರ್ಯದ ಸಂಕೇತ. ಅವರ ದೃಷ್ಟಿಯಲ್ಲಿ ಸ್ವಾತಂತ್ರ್ಯವೆಂದರೆ ಆರ್ಥಿಕ ಸ್ವಾತಂತ್ರ್ಯವೇ ಹೊರತು ರಾಜಕೀಯ ಸ್ವಾತಂತ್ರ್ಯವಲ್ಲ. ಬಟ್ಟೆಯ ತಯಾರಿಕೆ ಕೋಟ್ಯಾನುಕೋಟಿ ಜನರಿಗೆ ಉದ್ಯೋಗವನ್ನೊದಗಿಸುತ್ತದೆಂಬುದನ್ನವರು ಬಲ್ಲರು. ಆದ್ದರಿಂದಲೇ ಅವರು ಚರಕವನ್ನು ಖಾದಿ ಉದ್ಯೋಗವನ್ನು ಪುನರ್ಜೀವಗೊಳಿಸಿದ್ದು, ಅವರು ತೀರಿಕೊಂಡ ಅಲ್ಪಾವಧಿಯಲ್ಲಿಯೇ ಅವರ ಸಿದ್ಧಾಂತಕ್ಕೆ ಸಮಾಧಿ ಮಾಡಿದ್ದು ದೇಶದ ದುರ್ದೈವ.

ಒಬ್ಬ ವ್ಯಕ್ತಿ ತನಗಾಗಿ ಅಥವಾ ತನ್ನ ಕುಟುಂಬಕ್ಕಾಗಿ ಆಸ್ತಿಯನ್ನಾಗಲಿ ಐಶ್ವರ್ಯವನ್ನಾಗಲಿ ಬಳಸಿಕೊಳ್ಳಬಾರದು; ಅದನ್ನವನು ಧರ್ಮದರ್ಶಿಯಂತೆ ರಕ್ಷಿಸಬೇಕು; ಸಮಾಜದ ಒಳಿತಿಗಾಗಿ ವಿನಿಯೋಗಿಸಬೇಕು. ಇದರಿಂದ ಬಂಡವಾಳಗಾರಿಕೆ ತಾನಾಗಿಯೇ ಕರಗಿ ಹೋಗುತ್ತದಲ್ಲದೆ, ಮಾನವನ ಪರಿವರ್ತನೆಗೆ ಅವಕಾಶ ದೊರೆತಂತಾಗುತ್ತದೆ. ಖಾಸಗಿ ಸ್ವತ್ತಿನ ಮೇಲಣ ಹಕ್ಕು ನಿರ್ಮೂಲನವಾಗುತ್ತದೆ. ಸ್ವಾಮ್ಯ ಮತ್ತು ಐಶ್ವರ್ಯ ವಿನಿಯೋಗದ ಬಗ್ಗೆ ಕಾನೂನು ಅವಶ್ಯವಾಗುತ್ತದೆ. ಜೀವನಕ್ಕೆ ಅತ್ಯವಶ್ಯಕವಾದ ಕನಿಷ್ಟ ವೇತನದ ನಿಷ್ಕರ್ಷೆ ಎಷ್ಟು ಮುಖ್ಯವೋ ಗರಿಷ್ಟ ಆದಾಯದ ಗಡಿಯ ನಿಷ್ಕರ್ಷೆಯೂ ಅಷ್ಟೇ ಅವಶ್ಯಕ. ಕನಿಷ್ಠ ವೇತನ ಮತ್ತು ವರಿಷ್ಠಾದಾಯಗಳ ನಡುವಣ ವ್ಯತ್ಯಾಸ ಪ್ರಾರಂಭದಲ್ಲಿ ನ್ಯಾಯಬದ್ಧವಾಗಿರಬೇಕು. ಅಂತಿಮವಾಗಿ ಅದು ಮರೆಯಾಗಬೇಕು. ಉತ್ಪತ್ತಿಯ ಸ್ವರೂಪ ಪ್ರಮಾಣಗಳು ಒಬ್ಬ ವ್ಯಕ್ತಿಯ ಲೋಭವನ್ನಾಗಲಿ ಸ್ವೇಚ್ಛಾ ಪ್ರವೃತ್ತಿಯನ್ನಾಗಲಿ ಅವಲಂಬಿಸದೆ ಸಾಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿ ನಿರ್ಧರಿತವಾಗಬೇಕು.

# ಕೊಡುಗೈ ದಾನಿ

ಶಂಕರಗೌಡರು ತಮ್ಮ ತೆರೆದ ಮನಸ್ಸಿಗೆ ಎಷ್ಟು ಪ್ರಸಿದ್ಧಿಯಾಗಿದ್ದರೋ, ಅದೇ ರೀತಿ ಕೊಡುಗೈಗೂ ಕೂಡ ಹೆಸರುವಾಸಿಯಗಿದ್ದರು. ಕಲಾವಿದ, ಸಾಹಿತಿ, ಜನಸಾಮಾನ್ಯ ಯಾರೇ ಬರಲಿ ಶಂಕರಗೌಡರಿಗೆ ಅಂತಹವರನ್ನು ಕಂಡರೆ ಅಪಾರ ಪ್ರೀತಿ-ಅಭಿಮಾನ. ತಾಯಿ ಹೃದಯದಂತಹ ಅವರು ತಮ್ಮ ಬಳಿ ಹಣವಿರಲಿ-ಇಲ್ಲದಿರಲಿ ಸಾಲ ಮಾಡಿಯಾದರೂ ಸಹಾಯಕ್ಕೆ ಮುಂದಾಗುತ್ತಿದ್ದರು.

ತಮ್ಮ ಸುದೀರ್ಘ 50 ವರ್ಷಗಳ ಸಾರ್ವಜನಿಕ ಬದುಕಿನಲ್ಲಿ ಮನಸ್ಸು ಮಾಡಿದ್ದರೆ ಹೇರಳ ಹಣ-ಆಸ್ತಿ ಮಾಡಬಹುದಾಗಿತ್ತು. ಆದರೆ ಅವರು ತಮ್ಮ ವೈಯುಕ್ತಿಕ ಬದುಕಿನ ಹಿತಾಸಕ್ತಿಗಿಂತ, ಸಾರ್ವಜನಿಕ ಹಿತಾಸಕ್ತಿಯನ್ನು ಸದಾ ಧ್ಯಾನಿಸಿದರು ಮತ್ತು ಕನವರಿಸಿದರು.

ತಾವು ಎಲ್ಲೇ ಪ್ರಯಾಣ ಹೋಗಲಿ ಅಥವಾ ಎಂತಹದ್ದೇ ಊಟ ಮಾಡಲಿ ಸದಾ ಅವರೊಂದಿಗೆ ನಾಲ್ಕಾರು ಮಂದಿ ಇರಲೇಬೇಕು. ಕಷ್ಟವೇ ಇರಲಿ, ಸುಖವೇ ಇರಲಿ ಎಲ್ಲವನ್ನೂ ಸಮಾನವಾಗಿ ಹಂಚಿಕೊಳ್ಳಬೇಕೆಂಬುದು ಅವರ ಜೀವನದ ಗುರಿಯಾಗಿತ್ತು.

ವೈಯುಕ್ತಿಕವಾಗಿ ಎಂದೂ ಭ್ರಷ್ಟರಾಗದ ಶಂಕರಗೌಡರು ಪ್ರಾಮಾಣಿಕ ಬದುಕಿಗೆ ಮತ್ತು ನೈತಿಕತೆಗೆ ಉಸಿರಿನಷ್ಟೇ ಬೆಲೆ ಕೊಟ್ಟರು. ಮಂಡ್ಯ ನಗರದಲ್ಲಿ ಇಂದು ಪ್ರತಿಷ್ಠಿತ ಬಡಾವಣೆಯಾಗಿರುವ ಬಂದೀಗೌಡ ಬಡಾವಣೆಯನ್ನು ರೂಪಿಸುವಂತಹ ಸಂದರ್ಭದಲ್ಲಿ ಬಂದೀಗೌಡರಿಂದ ಜಮೀನು ಖರೀದಿಸಿ, ನಿವೇಶನಗಳನ್ನು ವಿಂಗಡಿಸುವಾಗ ಗೌಡರು ಕನಿಷ್ಟ ತಮ್ಮ ಆರು ಮಂದಿ ಮಕ್ಕಳಿಗಾದರೂ ನಿವೇಶನಗಳನ್ನು ಇಟ್ಟುಕೊಳ್ಳಬಹುದಾಗಿತ್ತು. ಆದರೆ, ಅವರು ಅಂತಿಮವಾಗಿ ಪಡೆದದ್ದು ಕೇವಲ ಒಂದೇ ಒಂದು ನಿವೇಶನ. ಅದೂ ಎಲ್ಲರ ಒತ್ತಾಯದ ಮೇರೆಗೆ.

ಮಂಡ್ಯ ನಗರಕ್ಕೆ ಯಾವುದೇ ನಾಟಕ ಮಂಡಳಿಗಳು ಬರಲಿ ಅವರು ನಷ್ಟ ಮಾಡಿಕೊಳ್ಳದೇ ಸಂತೃಪ್ತಿಯಿಂದ ಹಿಂದಿರುಗಬೇಕೆಂಬುದು ಗೌಡರ ಗುರಿಯಾಗಿತ್ತು. ಪ್ರತಿ ನಾಟಕಮಂಡಳಿಗಳ ಕ್ಷೇಮವನ್ನು ವಿಚಾರಿಸುತ್ತಿದ್ದ ಗೌಡರು ಪ್ರದರ್ಶನಕ್ಕೆ ಜನ ಬಾರದೆ ನಷ್ಟಕ್ಕೆ ಒಳಗಾಗುತ್ತಿದ್ದ ಸಂದರ್ಭದಲ್ಲಿ ಗೌಡರೇ ಟಿಕೆಟ್‌ಗಳನ್ನು ಖರೀದಿಸಿ ಹಳ್ಳಿಗಳಿಗೆ ಹಂಚಿ ಪ್ರದರ್ಶನಕ್ಕೆ ಜನ ಬರುವಂತೆ ಮಾಡುವುದರ ಮೂಲಕ ನೆರವಾಗುತ್ತಿದ್ದರು.

ಮಂಡ್ಯ ನಗರದಲ್ಲಿ ಪ್ರದರ್ಶನಗೊಂಡ ನಾಟಕಗಳಲ್ಲಿ ಅತ್ಯುತ್ತಮ ಕಲಾವಿದರು ತಮ್ಮ ಪ್ರತಿಭೆಯಿಂದ ಶಂಕರಗೌಡರ ಗಮನ ಸೆಳೆದರೆ ಸಾಕು, ಇಂತಹ ಕಲಾವಿದರು ಮಂಡ್ಯದಲ್ಲೇ ಇರಬೇಕೆಂದು ಬಯಸಿ ಅಂತಹವರಿಗೆ ನೆಲೆ ನಿಲ್ಲಲು ನೆರವಾಗುತ್ತಿದ್ದರು.

ಪುಟ್ಟಮ್ಮನಂತಹ ಕಲಾವಿದೆಗೆ ಮಂಡ್ಯ ನಗರದಲ್ಲಿ ನಿವೇಶನ ಕೊಡಿಸಿ ನೆಲೆ ನಿಲ್ಲಲು ಸಹಾಯ ಮಾಡಿದರು. ಪದ್ಮನಾಭರಾವ್, ಕೃಷ್ಣರಾವ್ ಮುಂತಾದ ಪ್ರಸಿದ್ಧ ನಟರು ಶಂಕರಗೌಡರ ವ್ಯಕ್ತಿತ್ವಕ್ಕೆ ಮಾರು ಹೋಗಿ ಮಂಡ್ಯದಲ್ಲೇ ಬಂದು ನೆಲೆಸಿದರು.

ತ್ಯಾಗರಾಜ್ ಎಂಬ ಒಬ್ಬ ಕಲಾವಿದ ತನಗೆ ತಂದೆ-ತಾಯಿ ಯಾರೂ ಇಲ್ಲ, ನಿಮ್ಮ ಹೆಸರಿನಲ್ಲಿ ಲಗ್ನ ಪತ್ರಿಕೆ ಅಚ್ಚು ಹಾಕುಸುವುದಕ್ಕೆ ಅನುಮತಿ ಕೊಡಿ ಎಂದು ಕೇಳಿದಾಗ ಮಾತೃ ಹೃದಯದ ಅಂತಃಕರಣ ಉಳ್ಳ ಗೌಡರು ಅನುಮತಿ ನೀಡಿದಷ್ಟೇ ಅಲ್ಲ ತಂದೆಯ ಸ್ಥಾನದಲ್ಲಿ ನಿಂತು ಮದುವೆ ಖರ್ಚನ್ನೆಲ್ಲಾ ತಾವೇ ಭರಿಸಿದರು.

ಕಲೆ ಮತ್ತು ಸಾಹಿತಿಗಳಿಗಾಗಿ ಶಂಕರಗೌಡರಂತೆ ಪ್ರೋತ್ಸಾಹ ನೀಡಿದ ರಾಜಕಾರಣಿಗಳು ಅಪರೂಪವೆಂದೇ ಹೇಳಬೇಕು. ವೀರೇಂದ್ರ ಪಾಟೀಲರ ಅಧಿಕಾರದ ಅವಧಿಯಲ್ಲಿ ಸಾಹಿತಿ, ಕಲಾವಿದರಿಗೆ ಮಾಶಾಸನ ನೀಡಲು ನಿರ್ಧರಿಸಿ, ಮಾಶಾಸನ ಬಯಸುವವರು ಜಿಲ್ಲಾಧಿಕಾರಿಗಳ ಮೂಲಕ ಅರ್ಜಿ ಹಾಕಿಕೊಳ್ಳಬೇಕೆಂದು ಸರ್ಕಾರ ಸೂಚಿಸಿತ್ತು. ಈ ನಿಯಮದಿಂದ ಎಷ್ಟೋ ಮಂದಿ ಸ್ವಾಭಿಮಾನವನ್ನು ಕಳೆದುಕೊಂಡು ಸರ್ಕಾರದ ಮುಂದೆ ಅರ್ಜಿ ಹಾಕಲು ತಯಾರಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಶಂಕರೇಗೌಡರೆ ಮುಂದೆ ನಿಂತು ಕಲಾವಿದರಾದ ಕಾಳಿಂಗರಾವ್, ಸಾಹಿತಿಗಳಾದ ಅನಕೃ, ತರಾಸು ಮುಂತಾದವರಿಗೆ ಮಾಶಾಸನ ಕೊಡಿಸಲು ಮುಂದಾದರು.

ಆದರೆ, ಸಮಿತಿಯ ಸಭೆಯಲ್ಲಿ ಕೆಲವು ಕಾನೂನು ತಜ್ಞರು ಸರ್ಕಾರಕ್ಕೆ ಅರ್ಜಿ ಹಾಕಿಲ್ಲ ಎಂಬ ತಾಂತ್ರಿಕ ನೆಪವೊಡ್ಡಿ ಪ್ರಸಿದ್ಧ ವ್ಯಕ್ತಿಗಳಿಗೆ ಮಾಶಾಸನ ನೀಡಲು ತಡೆಯುಂಟು ಮಾಡಿದಾಗ, ನಿಜವಾದ ಸಾಹಿತಿ ಅಥವಾ ಕಲಾವಿದ ಸರ್ಕಾರದ ಎಂಜಲಿಗೆ ತಾನಾಗಿ ಕೈಯೊಡ್ಡಲಾರ ಅಂತಹವರನ್ನು ಗುರುತಿಸಿ ಮಾಶಾಸನ ನೀಡಬೇಕಾದ್ದು ಸರ್ಕಾರದ ಕರ್ತವ್ಯವೆಂದು ಗೌಡರು ವಾದಿಸಿ ನೆರವು ನೀಡುವುದರಲ್ಲಿ ಮುಂದಾದರು.

ಹೀಗೆ ತಮ್ಮ ಬದುಕಿನುದ್ದಕ್ಕೂ ತಮ್ಮ ಬಳಿ ಹಲವು ಬಗೆಯ ನೆರವು ಕೇಳಿಕೊಂಡು ಬಂದವರಿಗೆ ಎಂದೂ ನಿರಾಸೆ ಮಾಡದೆ ಕೊಡುಗೈ ದಾನಿಯಾಗಿ ಎಲ್ಲರ ಪಾಲಿಗೆ ಕಾಮಧೇನುವಿನಂತೆ ಶಂಕರಗೌಡರು ಬದುಕಿದರು.

# ಜನಪರ ಚಳುವಳಿಗಳು ಮತ್ತು ಕೆ.ವಿ. ಶಂಕರಗೌಡರು

ತಮ್ಮ ವಯಸ್ಸು, ಅನಾರೋಗ್ಯ ಹಾಗೂ ತಾವೇ ಹಮ್ಮಿಕೊಂಡಿದ್ದ ಅನೇಕ ಸಾಮಾಜಿಕ ಕಾರ್ಯಗಳ ನಡುವೆ ಕೂಡ ಶಂಕರಗೌಡರು ನಾಡಿನ ಜನಪರ ಚಳುವಳಿಗಳಿಂದ ಎಂದೂ ವಿಮುಖರಾಗಲಿಲ್ಲ. 1978ರಲ್ಲಿ ವರುಣಾ ನಾಲೆ ಯೋಜನೆ ವಿರುದ್ಧ ನಡೆಸಿದ ಹೋರಾಟ ಹಾಗೂ ಚಡ್ಡಿ ಮೆರವಣಿಗೆ ಕರ್ನಾಟಕ ಇತಿಹಾಸದಲ್ಲಿ ದಾಖಲಾಗುವಂತಹುದು. ಅಂದಿನ ಮುಖ್ಯಮಂತ್ರಿ ಡಿ.ದೇವರಾಜ ಅರಸ್ ಮೈಸೂರು ತಾಲೂಕಿನ ನಾಲ್ಕು ತಾಲೂಕುಗಳಿಗೆ ಕುಡಿಯುವ ನೀರು ಹಾಗೂ ವ್ಯವಸಾಯಕ್ಕೆ ಕೆಆರ್‌ಎಸ್ ಜಲಾಶಯದಿಂದ ನೀರು ಒದಗಿಸಲು ವರುಣಾ ನಾಲೆ ಯೋಜನೆಯನ್ನು ಕೈಗೆತ್ತಿಕೊಂಡಾಗ ಮಂಡ್ಯ ಜಿಲ್ಲಾ ರೈತರು ಪ್ರತಿಭಟನೆಗೆ ಧುಮುಕಿದರು. ಚಳುವಳಿ ಉಗ್ರ ಸ್ವರೂಪ ತಾಳಿ, ಸರ್ಕಾರಿ ಕಛೇರಿಗಳು ಬಂದಾಗಿ ಚಳುವಳಿಯಿಂದ ಬೆಂಗಳೂರು-ಮೈಸೂರು ನಡುವಿನ ರಸ್ತೆ ಸಂಚಾರ ಸ್ಥಗಿತಗೊಂಡಿತು.

ಶತಮಾನಗಳಷ್ಟು ಹಳೆಯದಾದ ಕಾವೇರಿ ವಿವಾದದಲ್ಲಿ ಕರ್ನಾಟಕದ ನೀರಿಗೆ ತಮಿಳುನಾಡು ಸರ್ಕಾರ ಪ್ರತಿವರ್ಷ ತೆಗೆಯುತ್ತಿರುವ ತಗಾದೆ ಕೆಆರ್‌ಎಸ್ ಜಲಾಶಯದ ಮೇಲ್ಭಾಗದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ನಿರ್ಮಿಸಿದ ಹಾರಂಗಿ ಜಲಾಶಯ ಇವೆಲ್ಲವೂ ಸಹಜವಾಗಿ ಮಂಡ್ಯ ಜಿಲ್ಲೆ ರೈತರನ್ನು ಆತಂಕಕ್ಕೆ ಈಡು ಮಾಡಿದ್ದವು. ಗಾಯದ ಮೇಲೆ ಬರೆ ಎಳೆದಂತೆ, ವರುಣಾ ನಾಲೆ ಯೋಜನೆ ಮಂಡ್ಯ ಜಿಲ್ಲೆಯ ರೈತರಿಗೆ ಚಿಂತೆಯುಂಟು ಮಾಡಿತು.

ವರುಣಾ ನಾಲೆ ಯೋಜನೆ ಕೈಬಿಡುವಂತೆ ಮಂಡ್ಯ ಜಿಲ್ಲೆಯಲ್ಲಿ ಹೋರಾಟ ಪ್ರಾರಂಭವಾದ ವೇಳೆಗೆ ಶಂಕರಗೌಡರು ಚುನಾವಣೆಯ ಸೋಲಿಂದ ಬೇಸತ್ತು ಬಹುತೇಕ ರಾಜಕೀಯ ಚಟುವಟಿಕೆಗಳಿಗೆ ತಿಲಾಂಜಲಿ ನೀಡಿ, ಗಾಂಧಿ ಮಾರ್ಗದಲ್ಲಿ ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಹೋರಾಟಕ್ಕೆ ಧುಮುಕುವಂತೆ ಅನೇಕ ನಾಯಕರು ಗೌಡರಲ್ಲಿ ಮನವಿ ಮಾಡಿಕೊಂಡಾಗ ಸಹಜವಾಗಿ ಈ ಮನವಿ ಗೌಡರ ಅನುಯಾಯಿಗಳನ್ನು ಕೆರಳಿಸಿತು.

ಚುನಾವಣೆಯಲ್ಲಿ ಮತ ಹಾಕಲು ಗೌಡರು ಬೇಡ, ಹೋರಾಟಕ್ಕೆ ಶಂಕರೇಗೌಡರು ಬೇಕೇ? ಎಂದು ತಮ್ಮ ಆಕ್ರೋಶವನ್ನು ಕಾರಿದರು. ನಾಡು-ನುಡಿ-ನೆಲ-ಜಲ ರಕ್ಷಣೆಗೆ ಜಾತಿ, ಧರ್ಮ ಹಾಗೂ ಪಕ್ಷಗಳ ಬೇಧ ಮಾಡದ ಗೌಡರು, ಶಿಷ್ಯರನ್ನು ಶಾಂತಗೊಳಿಸಿ, ಚಳುವಳಿಗೆ ನೇರವಾಗಿ ದುಮುಕಿದರು. ಶಂಕರಗೌಡರ ಪಾಲ್ಗೊಳ್ಳುವಿಕೆಯಿಂದ ಚಳುವಳಿ ತೀವ್ರ ಸ್ವರೂಪ ಪಡೆಯಿತು. ಹಿಂಸಾಚಾರಕ್ಕೆ ಎಡೆ ಮಾಡಿಕೊಡದೆ, ಶಾಂತ ರೀತಿಯಲ್ಲಿ

ಗೌಡರು ಚಳುವಳಿ ನಡೆಸಿದ್ದರಲ್ಲದೆ ತಮ್ಮ ನೇತೃತ್ವದಲ್ಲಿ ದೇಶದಲ್ಲೇ ಪ್ರಪ್ರಥಮವಾಗಿ ಐತಿಹಾಸಿಕ ಚಡ್ಡಿ ಮೆರವಣಿಗೆ ನಡೆಸಿದರು.

ಮಂಡ್ಯ ಜಿಲ್ಲೆಯಾದ್ಯಂತ ವರುಣಾ ನಾಲೆಯ ವಿರುದ್ಧ ಚಳುವಳಿ ನಡೆಯುತ್ತಿದ್ದ ಸಮಯದಲ್ಲೇ ಮುಖ್ಯಮಂತ್ರಿ ದೇವರಾಜು ಅರಸ್ ಮೈಸೂರಿಗೆ ತೆರಳಲು ಮಂಡ್ಯ ಮಾರ್ಗವಾಗಿ ಪ್ರಯಾಣಿಸುತ್ತಿದ್ದಾಗ, ಚಳುವಳಿಗಾರರ ಕೈಗೆ ಸಿಲುಕಿಕೊಂಡರು.

ಪ್ರಯಾಣ ಮುಂದುವರಿಸಲಾಗದೆ, ಅಸಹಾಯಕತೆಯಿಂದ ಮಂಡ್ಯ ನಗರದಲ್ಲೇ ತಮ್ಮ ಶಿಷ್ಯರಾದ ಮುಸ್ಲಿಂ ಬಾಂಧವರೊಬ್ಬರ ಮನೆಯಲ್ಲಿ ಆಶ್ರಯ ಪಡೆದರು, ಚಳುವಳಿಗಾರರು ಅಲ್ಲಿಗೂ ಮುತ್ತಿಗೆ ಹಾಕಿ ಅರಸುರವರಿಗೆ ದಿಗ್ಬಂಧನ ಹೇರಿದರಲ್ಲದೆ, ಅವರ ವಿರುದ್ಧ ಕಟು ಮಾತುಗಳಲ್ಲಿ ದಿಕ್ಕಾರದ ಘೋಷಣೆಗಳನ್ನು ಕೂಗಿದರು.

ರಾಜ್ಯದ ಮುಖ್ಯಮಂತ್ರಿಯೊಬ್ಬರು ಚಳುವಳಿಗಾರರ ನಡುವೆ ಸಿಕ್ಕಿರುವ ಸುದ್ದಿ ತಿಳಿದೊಡನೆ ಸ್ಥಳಕ್ಕೆ ದಾವಿಸಿದ ಗೌಡರು, ಅಧಿಕಾರಯುತವಾಗಿ ಚಳುವಳಿಗಾರರನ್ನು ಸಮಾಧಾನ ಪಡಿಸಿ ನಾಡಿನ ಪ್ರಥಮ ಪ್ರಜೆಯೊಬ್ಬನಿಗೆ ಅಗೌರವ ಸೂಚಿಸುವುದು ಯಾರಿಗೂ ಶೋಭೆ ತರುವಂತಹದಲ್ಲ ಎಂದರಲ್ಲದೆ, ಮುಖ್ಯಮಂತ್ರಿ ದೇವರಾಜ ಅರಸುರವರನ್ನು ಭೇಟಿ ಮಾಡಿ, ಜಿಲ್ಲೆಯ ಜನತೆಯ ಅಹವಾಲನ್ನು, ನೋವುಗಳನ್ನೂ ತೋಡಿಕೊಂಡರು.

ಗೌಡರ ವ್ಯಕ್ತಿತ್ವಕ್ಕೆ ಮಾರುಹೋದ ಅರಸರು ಯಾವ ಕಾರಣಕ್ಕೂ ಮಂಡ್ಯ ಜಿಲ್ಲೆಗೆ ಕೆ.ಆರ್.ಎಸ್. ಜಲಾಶಯದಿಂದ ಹರಿಯುವ ನೀರಿನ ಪ್ರಮಾಣದಲ್ಲಿ ಕಡಿಮೆ ಮಾಡುವುದಿಲ್ಲ ಎಂದು ಆಶ್ವಾಸನೆ ನೀಡಿದರು ಅಲ್ಲದೆ ಶಂಕರೇಗೌಡರ ನೇತೃತ್ವದಲ್ಲಿ ಬಿಕ್ಕಟ್ಟಿಗೆ ಪರಿಹಾರ ಕಂಡು ಹಿಡಿಯಲು ಸೂಚಿಸಿ, ಬೆಂಗಳೂರಿಗೆ ಬರಲು ಆಹ್ವಾನ ನೀಡಿದರು.

ಮಂಡ್ಯ ಜಿಲ್ಲೆಗೆ ನೀರು ಹರಿದು ಬರುತ್ತಿದ್ದ ನಾಲೆಗಳ ದುರಸ್ತೀಕರಣಕ್ಕೆ ಆಶ್ವಾಸನೆ ನೀಡಿ ನೀರು ಪೋಲಾಗದಂತೆ ಕ್ರಮ ಕೈಗೊಳ್ಳುವುದಾಗಿ ಅರಸು ವಚನ ನೀಡಿದ ನಂತರ, ಮಂಡ್ಯ ಜಿಲ್ಲೆಗೆ ಹರಿಯುವ ನೀರಿನ ಪ್ರಮಾಣ ಯಾವ ಕಾರಣಕ್ಕೂ ಕಡಿಮೆಯಾಗುವುದಿಲ್ಲ ಎಂಬ ಭರವಸೆ ದೊರೆತ ನಂತರವೇ ಶಂಕರಗೌಡರು ಚಳುವಳಿಯನ್ನು ಹಿಂತೆಗೆದುಕೊಂಡು, ಮೈಸೂರು ಜಿಲ್ಲೆಯ ರೈತ ಬಾಂಧವರಿಗೆ ನೀರು ಹರಿಸಲು ಮುಂದಾಗಿ ತಮ್ಮ ಹೃದಯ ಶ್ರೀಮಂತಿಕೆ ಮೆರೆದರು.

# ಗೋಕಾಕ್ ಚಳುವಳಿ

ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಅನುಷ್ಠಾನಕ್ಕೆ ತರಬೇಕೆಂದು ಸರ್ಕಾರವೇ ನೇಮಿಸಿದ್ದ ಗೋಕಾಕ್ ಸಮಿತಿ ವರದಿ ನೀಡಿದಾಗ, ಈ ವರದಿಯನ್ನು ಜಾರಿಗೆ ತರಲು ಸರ್ಕಾರ ಹಿಂದೆ ಮುಂದೆ ನೋಡಿದ್ದರ ಫಲವಾಗಿ ರಾಜ್ಯಾದ್ಯಂತ ಗೋಕಾಕ್ ಚಳುವಳಿ ಭುಗಿಲೆದ್ದಿತು.

1982ರಲ್ಲಿ ನಡೆದ ಗೋಕಾಕ್ ಚಳುವಳಿಗೆ ಸಂಬಂಧಿಸಿದಂತೆ ನಾಡಿನ ಶಿಕ್ಷಣ ತಜ್ಞರು, ಲೇಖಕರಲ್ಲಿ ಭಿನ್ನಾಭಿಪ್ರಾಯ ಮೂಡಿತು, ಕನ್ನಡ ಭಾಷೆಯನ್ನು ಕಡ್ಡಾಯ ಮಾಡಿದರೆ, ಅಲ್ಪಸಂಖ್ಯಾತರ ಹಿತಾಸಕ್ತಿಗೆ ಧಕ್ಕೆ ಉಂಟಾಗಬಹುದೆಂಬ ಅಪಸ್ವರ ಕೇಳಿಬಂದ ಹಿನ್ನೆಲೆಯಲ್ಲಿ ಸರ್ಕಾರ, ಗೋಕಾಕ್ ವರದಿಯನ್ನು ಜಾರಿಗೆ ತರಲು ಮೀನ ಮೇಷ ಎಣಿಸಿತು.

ಸಂದರ್ಭದಲ್ಲಿ ಧಾರವಾಡ ವಿಧ್ಯಾವರ್ಧಕ ಕೇಂದ್ರದಲ್ಲಿ ಡಾ||ಪಾಟೀಲಪುಟ್ಟಪ್ಪನವರ ನೇತೃತ್ವದಲ್ಲಿ ಚಳುವಳಿ ಭುಗಿಲೆದ್ದಾಗ, ವರನಟ ಡಾ||ರಾಜಕುಮಾರ್ ಕೂಡ ಚಳುವಳಿಗೆ ಧುಮಿಕಿದ್ದು ವಿಶೇಷವಾಗಿತ್ತು.

ಇಂತಹ ಸಂದರ್ಭದಲ್ಲಿ ಗೌಡರು ಕಣ್ಣಿನ ಶಸ್ತ್ರ ಚಿಕಿತ್ಸೆಯಿಂದ ಚೇತರಿಸಿಕೊಳ್ಳುತ್ತಿದ್ದರು, ಅವರು ಓದುವ ಬರೆಯುವ ಸ್ಥಿತಿಯಲ್ಲಿರಲಿಲ್ಲ. ಆದರೆ ನಾಡು ನುಡಿಗೆ ಧಕ್ಕೆಯಾದಾಗ ಸುಮ್ಮನೆ ಕುಳಿತುಕೊಳ್ಳುವ ಜಾಯಮಾನ ಶಂಕರಗೌಡರದಲ್ಲ.

ಅನಾರೋಗ್ಯದ ನಡುವೆಯೂ ಚಳುವಳಿಗೆ ಧುಮುಕಿದ ಗೌಡರು, ಧಾರವಾಡದ ಗೆಳೆಯರಿಗೆ ವೈಯುಕ್ತಿಕ ಬೆಂಬಲವನ್ನು ಸೂಚಿಸಿದ್ದರು, ಕನ್ನಡ ಭಾಷೆಯನ್ನು ಕಡ್ಡಾಯಗೊಳಿಸುವ ಬಗ್ಗೆ ಪತ್ರಿಕೆಗಳಲ್ಲಿ ಬರುತ್ತಿದ್ದ ಅಪಸ್ವರದ ಧ್ವನಿಗಳಿಗೆ ತಮ್ಮ ಅನುಭವ ಚಿಂತನೆ, ವಿದ್ವತ್ತುಗಳ ಮೂಲಕ ಉತ್ತರ ನೀಡಿ, ಗೋಕಾಕ್ ವರದಿಯನ್ನು ಅವರು ಸಮರ್ಥಿಸಿದರು.

ಬಹುರಾಜ್ಯಗಳ ಒಕ್ಕೂಟವಾಗಿರುವ ಈ ನಮ್ಮ ದೇಶದಲ್ಲಿ ದೃಷ್ಟಿಯಿಂದ ಮಾತ್ರವಲ್ಲ ಪರಸ್ಪರ ವಿಚಾರ ವಿನಿಮಯಕ್ಕೂ ಬೇರೆ ಬೇರೆ ರಾಜ್ಯಗಳಲ್ಲಿ ಜೀವನಾಧರಕ್ಕೆ ಸರ್ವೆ ಸಾಮಾನ್ಯವಾಗಿ ಬಳಕೆಯಲ್ಲಿರುವ ಒಂದು ಭಾಷೆ ಇರಬೇಕಾದುದು ಅವಶ್ಯಕ. ಸಾಮಾನ್ಯ ಭಾಷೆಯ ಮಟ್ಟವನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡಬೇಕಾಗಿಲ್ಲ. ಶುದ್ಧವಾಗಿರಲಿ, ಅಶುದ್ಧವಾಗಿರಲಿ, ಪರಸ್ಪರರನ್ನು ಅರಿತುಕೊಳ್ಳಲು ಸಹಾಯ ಮಾಡುವಷ್ಟು ಮಾತ್ರಕ್ಕೆ ಅದು ಸೀಮಿತವಾಗಿರಬೇಕು. ಇತ್ತೀಚೆಗೆ ನನ್ನ ಮನೆಗೆ ಭೇಟಿ ನೀಡಿದ ರಷ್ಯಾದ ನಿಯೋಗದ ನಾಯಕರು ರಷ್ಯನ್ ಭಾಷೆಯಲ್ಲಿ ಮಾತನಾಡಿ, ಅದನ್ನು ಅನುವಾದಕರ ಮೂಲಕ ಆಂಗ್ಲಭಾಷೆಗೆ ಮಾಡಿಸಿದರು, ಇದು ನಮ್ಮೆಲ್ಲರಿಗೂ ಅನುಕರಣೀಯವಾಗಬೇಕು.

ಇಂದು ಕನ್ನಡ ಭಾಷೆ ಆಡಳಿತ ಭಾಷೆಯಾಗಿ ಘೋಷಣೆಯ ಮಟ್ಟವನ್ನು ದಾಟಿ ಮುಂದೆ ಹೋಗದಿದ್ದರೂ, ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಅಡ್ಡಿಪಡಿಸುತ್ತಿದ್ದರೂ, ಇಂದಲ್ಲ ನಾಳೆ ಹಳ್ಳಿಯಿಂದ ದಿಲ್ಲಿಯವರೆಗೆ ಅದು ಬಳಸುವ ಭಾಷೆಯಾಗಿರಬೇಕಾದದ್ದು ಅದೊಂದೆ. ಅದನ್ನು ಈ ಮೊದಲೇ ಜಾರಿಗೆ ತರಲಾರದೆ ಹೋದ ನಾವು ನಮ್ಮ ಮಕ್ಕಳು, ಮೊಮ್ಮಕ್ಕಳನ್ನು ವಿನಾಶಕಾರಿ ಸ್ಥಿತಿಗೆ ನೂಕಿ, ಸಮಾಜದ ಅವನತಿಗೆ ಕಾರಣವಾಗಿದ್ದೇವೆ, ಅದರಲ್ಲಿಯೂ ನಾಡಿನ ಬಹುಸಂಖ್ಯಾತ ಜನರಾದ ಹಳ್ಳಿಯ ಮಕ್ಕಳನ್ನು ಅನಾಥರನ್ನಾಗಿ ಮಾಡಿದ ಪಾತಕಿಗಳಾಗಿದ್ದೇವೆ, ಆ ಮಕ್ಕಳಿಗೆ ಏಕಮೇವ ಮಾತೃಭಾಷೆಯಾದ ಕನ್ನಡ ಮಾಧ್ಯಮದಲ್ಲೇ ಈ ಮೊದಲು ಶಿಕ್ಷಣವನ್ನು ಒದಗಿಸಿದ್ದರೆ ಅವರು ಈಗಿರುವಂತೆ ತೇಜೋಹೀನರಾಗದೆ, ಹತಾಶರಾಗದೆ, ಆಗತಾನೆ ಅರಳಿದ ಕುಸುಮಗಳೋಪಾದಿಯಲ್ಲಿ ಪರಿಮಳ ಬೀರುತ್ತಾ ಪ್ರತಿಭಾನ್ವಿತ ವ್ಯಕ್ತಿಗಳಾಗಿ ಯಾರ ಮುಂದೆಯೂ ತಲೆ ಬಾಗಿಸದೆ, ನೆಟ್ಟಗೆ ನಿಲ್ಲುತ್ತಿದ್ದರು.

ಪ್ರತಿಷ್ಠಿತ ವರ್ಗಗಳಿಗೆ ಮಾತ್ರ ಮೀಸಲಾಗಿರುವ ಪ್ರಮುಖ ಹುದ್ದೆಗಳಿಂದ ಅವರು ವಂಚಿತರಾಗುತ್ತಿರಲಿಲ್ಲ, ಪರ ರಾಜ್ಯದವರಿಗೆ ಬಹುಪಾಲು ಹುದ್ದೆಗಳು ದಕ್ಕಿ, ತಮ್ಮ ನಾಡಿನಲ್ಲಿ ತಾವೇ ಪರದೇಶಿಗಳಾಗುತ್ತಿರಲಿಲ್ಲ. ಅವರನ್ನು ಈ ದುಸ್ಥಿತಿಗೆ ಈಡು ಮಾಡಿದ ನಾವು ಈಗಲಾದರೂ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ, ಮುಂದಿನ ಪೀಳಿಗೆ ನಮ್ಮನ್ನೆಂದೂ ಕ್ಷಮಿಸಲಾರದು. ಅವರ ಶಾಪಕ್ಕೆ ನಾವು ತುತ್ತಾಗಬೇಕಾದೀತು. ಇದು ಕಠೋರ ಸತ್ಯ. ಅದರ ವಿಮೋಚನೆಗಾಗಿ ನಮಗಿಂದು ಗೋಕಾಕ್ ವರದಿ ಸಂಪ್ರಾಪ್ತವಾಗಿದೆ. ಅದನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲಿಸಬೇಕಾಗಿದೆ.

ಗೋಕಾಕ್ ವರದಿಯಿಂದ ಅಲ್ಪಸಂಖ್ಯಾತರಿಗೆ ಅನ್ಯಾಯವಾಗಿದೆ ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ತುಂಬ ಎಚ್ಚರಿಕೆಯಿಂದ, ಅನುಭವದಿಂದ ವಿಶ್ಲೇಷಿರುವುದು ಗೌಡರಿಗೆ ಭಾಷೆಯ ಬಗ್ಗೆ, ಭಾಷಾ ನೀತಿಯ ಬಗ್ಗೆ ಇದ್ದ ಆಳವಾದ ಚಿಂತನೆ ನಮಗೆ ಅರಿವಾಗುತ್ತದೆ.

8ನೇ ತರಗತಿಯವರೆಗೆ ಮುಸ್ಲಿಂ ಬಾಲಕನಿಗೆ ಅವನ ಮಾತೃಭಾಷೆ ಉರ್ದುವಿನಲ್ಲಿ ಶಿಕ್ಷಣ ದೊರೆಯುವಾಗ, ಅವನಿಗೆ ಯಾವುದೇ ಅನ್ಯಾಯವಾಗುವುದಿಲ್ಲ. ಅವನು ಜನವಾಹಿನಿಯಲ್ಲಿ ಒಂದಾಗುವ ದೃಷ್ಟಿಯಿಂದ 3ನೇ ತರಗತಿಯಿಂದ ಕನ್ನಡ ಕಲಿಯಬೇಕಾಗುತ್ತದೆ. 8ನೇ ತರಗತಿಯಿಂದ ಅವನಿಗೆ ಕನ್ನಡ ಶಿಕ್ಷಣ ಮಾಧ್ಯಮವಾಗಲಿ ಎಂದು ವಾದಿಸುವವರಿಗೆ ಗೌಡರು ಪರಿಣಾಮಕಾರಿಯಾದ ಉತ್ತರವನ್ನೇ ನೀಡಿದ್ದಾರೆ.

ಕನ್ನಡ ನಾಡಿನ ನಿಸರ್ಗ ಒದಗಿಸುತ್ತಿರುವ ಎಲ್ಲಾ ಸೌಲಭ್ಯ ಬಳಸಿಕೊಳ್ಳುತ್ತಿರುವ ಮುಸ್ಲಿಂ ಹುಡುಗ ಕನ್ನಡವನ್ನು ಕಲಿತು ಕನ್ನಡದ ಮಕ್ಕಳೊಂದಿಗೆ ಸೋದರ ಭಾವ ಬೆಳೆಸಿಕೊಳ್ಳಬಾರದೆ ಎಂದು ಪ್ರಶ್ನಿಸುವ ಗೌಡರು, ಕನ್ನಡ ಅಕ್ಷರವನ್ನೇ ಕಲಿಯದೆ ಶಾಲಾ

ಕಾಲೇಜುಗಳಿಂದ ಉತ್ತೀರ್ಣನಾಗಿ ಅವನು ಹೊರಬರುವುದು ಸರಿಯೇ? ಎಂದು ವಾದಿಸುತ್ತಾರೆ.

ಇಂಗ್ಲಿಷ್ ಭಾಷೆಯ ಅಧ್ಯಯನದಿಂದ ದೇಶಕ್ಕಾಗಿರುವ ನಷ್ಟವನ್ನು ಸ್ಪಷ್ಟ ನಿರ್ದೇಶನಗಳಿಂದ ನೀಡಿದ ಶಂಕರಗೌಡರು ಗೋಕಾಕ್ ವರದಿ ಭಾಷಾ ಅಧ್ಯಯನದ ವಿಷಯವಾಗಿ ಅಲ್ಲ, ಭಾಷಾ ವಿಜ್ಞಾನದ ಬಗ್ಗೆ ಅದು ವೈಜ್ಞಾನಿಕವಾಗಿದೆ ಎಂದು ಸ್ಪಷ್ಟ ನಿಲುವು ತಾಳುತ್ತಾರೆ. ಯಾವ ವಿದ್ಯಾರ್ಥಿಯಾಗಲಿ ಪ್ರೌಢಶಾಲಾ ಹಂತದಲ್ಲಿ ರಾಜ್ಯ ಭಾಷೆಯನ್ನು ಏಕಮೇವ ಕಡ್ಡಾಯದ ಪ್ರಥಮ ಭಾಷೆಯನ್ನಾಗಿ, ಉಳಿದ ಬಹುಭಾಷೆಗಳ ಪೈಕಿ ಎರಡನ್ನು ದ್ವಿತೀಯ-ತೃತೀಯ ಭಾಷೆಯನ್ನಾಗಿ ಕಲಿಯಬಹುದು ಎಂಬುದು ಗೌಡರ ಸ್ಪಷ್ಟ ಅಭಿಪ್ರಾಯವಾಗಿತ್ತು.

ಕನ್ನಡ ನಾಡಿನ ಎಲ್ಲಾ ಪ್ರಜ್ಞಾವಂತರು ಗೋಕಾಕ್ ವರದಿಯನ್ನು ಒಪ್ಪಿಕೊಳ್ಳುವವರೆಗೂ ಗೋಕಾಕ್ ಚಳುವಳಿಯನ್ನು ಮುಂದುವರಿಸಬೇಕೆಂದು ಅವರು ಪತ್ರಿಕೆಗಳಲ್ಲಿ ಹೇಳಿಕೆ ನೀಡಿ, ಗೋಕಾಕ್ ವರದಿ ಅನುಷ್ಠಾನಗೊಳ್ಳುವವರೆಗೂ ಸಕ್ರಿಯವಾಗಿ ಚಳುವಳಿಯಲ್ಲಿ ಪಾಲ್ಗೊಂಡರು.

ಹೀಗೆ ಗ್ರಾಮ ಸ್ವರಾಜ್ಯದ ಕನಸು ಕಂಡ ಗೌಡರು, ಗಾಂಧೀಜಿಯವರ ಅನೇಕ ತತ್ವಗಳನ್ನು ಆಚರಣೆಗೆ ತರಲು 1980ರ ಅಕ್ಟೋಬರ್ 2ರಂದು ಗಾಂಧಿ ಜಯಂತಿಯ ಆಚರಣೆ ಸಂದರ್ಭದಲ್ಲಿ ಲೋಕಸೇವಾ ಸಂಘ ಎಂಬ ಸಂಘವನ್ನು ಅಸ್ತಿತ್ವಕ್ಕೆ ತಂದರು. ಈ ಸಂಘಕ್ಕೆ ಮೂಲ ಬಂಡವಾಳ ಒದಗಿಸಲು ತಮ್ಮ ವಾಸದ ಮನೆಯನ್ನು ಬ್ಯಾಂಕಿಗೆ ಒತ್ತೆ ಇಟ್ಟು, 2 ಲಕ್ಷ ರೂಪಾಯಿ ನಿಧಿ ನೀಡಿದರು. ಇದಲ್ಲದೆ ತಮ್ಮ ಹುಟ್ಟೂರಾದ ಕೀಲಾರದಲ್ಲಿ ಖಾದಿ ಗ್ರಾಮೋದ್ಯೋಗ ಸಂಘವನ್ನು ತೆರೆದು ಚರಕದ ನೂಲು ನೇಯುವ ಘಟಕ ತೆರೆದು ನೂರಾರು ದುಡಿಯುವ ಕೈಗಳಿಗೆ ಉದ್ಯೋಗ ನೀಡುವುದರ ಮೂಲಕ ಗಾಂಧೀಜಿಯ ಕಲ್ಪನೆಗಳನ್ನು ವಾಸ್ತವಗೊಳಿಸಿದರು. ಶಂಕರಗೌಡರ ವ್ಯಕ್ತಿತ್ವವೇ ಅಂತಹದ್ದು. ಒಮ್ಮೆ ಅವರ ಮನಸ್ಸಿಗೆ ಹಿಡಿಸಿತೆಂದರೆ ಅದನ್ನು ಸಾಕಾರಗೊಳಿಸುವ ತನಕ ಬಿಡದ ವ್ಯಕ್ತಿತ್ವ ಅವರದು. ಇಡೀ ಬದುಕನ್ನೇ ಪ್ರಯೋಗಕ್ಕೆ ಒಡ್ಡಿಕೊಂಡು ಹಲವು ಸಾಹಸಗಳನ್ನು ಮಾಡಿ ಜಯ, ಅಪಜಯ ಎಲ್ಲವನ್ನೂ ಅನುಭವಿಸಿದರು. ಅವರ ಕ್ರಿಯಾಶೀಲ ಬದುಕು ಇಂದಿಗೂ ಮಂಡ್ಯ ಜಿಲ್ಲೆಗೆ ಮಾತ್ರವಲ್ಲ, ಕರ್ನಾಟಕದ ರಾಜಕಾರಣಿಗಳಿಗೆ ಮಾದರಿಯಾಗುವಂತಹುದು.

ಮಂಡ್ಯ ನಗರದಲ್ಲಿ ಇಂದು ಪ್ರತಿಷ್ಠಿತ ಬಡಾವಣೆಯಾಗಿರುವ ಬಂದಿಗೌಡ ಬಡಾವಣೆ, ವ್ಯವಸಾಯದ ಭೂಮಿಯಾಗಿದ್ದಾಗ ಅದನ್ನು ಮಾಲೀಕರಿಂದ ಗುತ್ತಿಗೆ ಪಡೆದು ಅಲ್ಲಿ ಸಹಕಾರ ತತ್ವದಡಿ ತರಕಾರಿ ಬೆಳೆದರು. ಬೆಳೆದ ತಾಜಾ ತರಕಾರಿಗಳನ್ನು ನಗರದ ಜನತೆಗೆ ಕಡಿಮೆ ದರದಲ್ಲಿ ದಲ್ಲಾಳಿ ಕಾಟವಿಲ್ಲದೆ ತಲುಪಿಸಲು ಮುಂದಾದರು. ಇದಲ್ಲದೆ ಗ್ರಾಮಾಂತರ

ಪ್ರದೇಶಗಳಿಂದ ಕೋರ್ಟು, ಕಛೇರಿ ಕೆಲಸಗಳ ಮೇಲೆ ರೈತರು ಮಂಡ್ಯ ನಗರಕ್ಕೆ ಬರುವುದನ್ನು ಗಮನಿಸಿದ್ದ ಗೌಡರು ಅವರಿಗಾಗಿ ಸಹಕಾರ ಕ್ಯಾಂಟಿನ್ ತೆರೆದು, ಅತಿ ಕಡಿಮೆ ವೆಚ್ಚದಲ್ಲಿ ಹೊಟ್ಟೆ ತುಂಬಾ ಊಟ ಹಾಕಿದರು.

ಗಾಂಧೀಜಿಯವರಿಗೆ ದೇಶದಿಂದ ಬ್ರಿಟೀಷರನ್ನು ಹೊರದಬ್ಬಲು ಸ್ವದೇಶಿ ಚಳುವಳಿ ಚರಕ ಅಸ್ತ್ರವಾದರೆ, ಶಂಕರಗೌಡರ ಪಾಲಿಗೆ ಅದು ಉಸಿರಾಗಿತ್ತು. ತಮ್ಮ ಕಡೆಯ ಉಸಿರು ಇರುವ ತನಕ ಚರಕದ ತಿರುಗುವಿಕೆ ಸ್ಥಗಿತಗೊಳ್ಳದಂತೆ ನೋಡಿಕೊಂಡ ಅವರು, ಮಂಡ್ಯ ನಗರದಲ್ಲಿ ಖಾದಿ ಉತ್ಪನ್ನಗಳ ಮಾರಾಟಕ್ಕಾಗಿ ಮಳಿಗೆಯೊಂದನ್ನು ಸಹ ತೆರೆದರು.

ಹೀಗೆ ತಮ್ಮ ಬದುಕಿನುದಕ್ಕೂ ತಾವು ನಂಬಿದ ತತ್ವಗಳಿಗೆ ಅಂಟಿಕೊಂಡು ಬದುಕಿದ ಶಂಕರಗೌಡರು 4-3-1990ರಂದು ಮಂಡ್ಯ ನಗರದಲ್ಲಿ ಕೊನೆಯುಸಿರೆಳೆದರು. ಅವರ ಪಾರ್ಥಿವ ಶರೀರವನ್ನು ಹುಟ್ಟೂರಾದ ಕೀಲಾರಕ್ಕೆ ಕೊಂಡೊಯ್ದು ಅಂತ್ಯ ಸಂಸ್ಕಾರ ನಡೆಸಲಾಯಿತು.

ಗೌಡರ ಎಲ್ಲಾ ಸಾಹಸಗಳು ಪ್ರಯೋಗಗಳು, ಕನಸುಗಳು ಅವರ ನಿರ್ಗಮನದೊಂದಿಗೆ ಸ್ಥಗಿತಗೊಂಡಿದ್ದು ವರ್ತಮಾನದ ದುರಂತಗಳಲ್ಲಿ ಒಂದು. ಇಂದು ಅವೆಲ್ಲವೂ ಗೌಡರ ಸಾಹಸಕ್ಕೆ ಮೂಕ ಸಾಕ್ಷಿಯಾಗಿವೆ, ಅಷ್ಟೇ.

# ಹೆಚ್.ಸಿದ್ದಯ್ಯ-ಅಸೆಂಬ್ಲಿ ಸ್ಪೀಕರ್ ಆಗಿ ಅಧಿಕಾರ ಸ್ವೀಕರಿಸಿದ ಸಂದರ್ಭ

**18-6-1952**

ಅಧ್ಯಕ್ಷರೆ,

ಮಾನವನು ನಿಜವಾಗಿಯೂ ಉನ್ನತ ಪದವಿಯನ್ನು ಪಡೆಯುವಂತಹ ಆತ್ಮವನ್ನು ಹೊಂದಬೇಕಾದರೆ, ನೀತಿ ಮತ್ತು ತ್ಯಾಗ ಎಂಬ ಗುಣಗಳು ಅವನಲ್ಲಿ ಇರಬೇಕಾದ್ದು ಅವಶ್ಯಕ, ಆದರೂ ಮಾನವ ಜನಾಂಗದ ಸೇವೆಗಾಗಿ ಆತನು ತೋರಿಸಿರತಕ್ಕ ತ್ಯಾಗಕ್ಕಾಗಿ ಪ್ರಾಪಂಚಿಕ ಸ್ಥಾನಮಾನಗಳೇ ಆತನಿಗೆ ಸರಿಯಾದ ಗೌರವವಲ್ಲವೆಂದು ನನ್ನ ನಂಬಿಕೆ. ಈಗ ನಾವು ತಮ್ಮನ್ನು ಈಸ್ಥಾನಕ್ಕೆ ಚುನಾಯಿಸಿರತಕ್ಕಂಥಾದ್ದು ತಾವು ದೇಶಕ್ಕಾಗಿ ದೇಶದ ಜನತೆಗಾಗಿ ಅಪಾರ ತ್ಯಾಗ ಮಾಡಿರುವುದಕ್ಕೆ ಪ್ರತಿಫಲವೆಂದಲ್ಲ. ಆ ದೃಷ್ಟಿಯಿಂದ ನಾವುಗಳು ನಿಮ್ಮನ್ನು ಆರಿಸಿಲ್ಲವೆಂದು ನಾನು ಭಾವಿಸಿದ್ದೇನೆ. ಏಕೆಂದರೇ ಯಾವ ವ್ಯಕ್ತಿ ಮಾನವ ಜನಾಂಗಕ್ಕೆ ನಿಷ್ಕಲ್ಮಷ ಮನಸ್ಸಿನಿಂದ ತ್ಯಾಗ ಮಾಡುತ್ತಾನೊ ಅವನಿಗೆ ಇಂತಹ ಪ್ರಾಪಂಚಿಕ ಸ್ಥಾನಮಾನಗಳ ಅಪೇಕ್ಷೆಯೇ ಇರುವುದಿಲ್ಲ ಆದ್ದರಿಂದ ನಾವಿಂದು ನಿಮ್ಮನ್ನು ಆ ಸ್ಥಾನದಲ್ಲಿ ಕೂರಿಸಿರುವುದು. ನಮ್ಮಲ್ಲಿರುವ ತ್ಯಾಗ ಮತ್ತು ಸೇವೆಯ ಮನೋಭಾವದ ಸ್ಫೂರ್ತಿ ನಮ್ಮಲ್ಲಿ ಅವಿರ್ಭವಿಸಲಿ ಎಂದು ನಾನು ತಿಳಿದುಕೊಂಡಿದ್ದೇನೆ, ಹಾಗಿಲ್ಲದೆ ಒಂದು ಪಕ್ಷ ಸುಮ್ಮನೆ ಹೀಗೆ ಸ್ಥಾನಗಳನ್ನು ಕೊಟ್ಟು ನಿಮ್ಮ ತ್ಯಾಗಕ್ಕೆ, ನಿಮ್ಮ ದೇಶ ಸೇವೆಗಾಗಿ ಇದನ್ನು ಸಲ್ಲಿಸುವುದು ಎಂದು ಭಾವಿಸಿದರೆ ಅನೇಕ ಅನರ್ಥಗಳು ಸಂಕಟದ ಸನ್ನಿವೇಶಗಳು ಉಂಟಾಗುತ್ತದೆ ಎಂದು ಹೇಳುತ್ತೇನೆ, ಆದ್ದರಿಂದ ತಾವು ಆ ಸ್ಥಾನದ ವ್ಯಾಮೋಹಕ್ಕೆ ಅಂಟಿಕೊಳ್ಳದೆ ತಮ್ಮಲ್ಲಿರತಕ್ಕ ತ್ಯಾಗ ಬುದ್ಧಿಯ ಸ್ಫೂರ್ತಿಯನ್ನು ನಮ್ಮಲ್ಲಿ ಉಂಟಾಗುವಂತೆ ಮಾಡಬೇಕೆಂದು ಹೇಳುತ್ತೇನೆ.

ನಾನು ನಿಮ್ಮ ವ್ಯಕ್ತಿತ್ವದಲ್ಲಿ ಒಂದು ವಿಶೇಷವಾದ ಅಂಶವನ್ನು ಕಾಣುತ್ತೇನೆ, ತಾವು ಸೇವಾನಾಮ ಪ್ರತೀಕವೆಂದರೆ ಅತಿಶೋಕ್ತಿಯಲ್ಲ, ಒಂದು ಹೋಲಿಕೆಯನ್ನು ಕೊಡುವುದಾದರೆ ಮಗುವಿನ ಮೇಲೆ ತಾಯಿಯ ಪ್ರೇಮ ಕರುಣೆಗಳು ಅನೇಕ ವೇಳೆ ಬಹಳ ಹೆಚ್ಚಾಗಿ ಅಜೀರ್ಣವಾಗುವ ಸಂಭವವುಂಟು ಹಾಗೇ ತಮ್ಮ ಕರುಣೆಗೂ ವಿಶ್ವಾಸಕ್ಕೂ ಪಾತ್ರರಾದ ನಾವು ನಿಮ್ಮ ಕರುಣೆಯಿಂದ ಅಜೀರ್ಣ ಹೊಂದದ ಹಾಗೆ ನೋಡಿಕೊಳ್ಳುವುದು ನಿಮ್ಮ ಕರ್ತವ್ಯವೆಂದು ನಾನು ಭಾವಿಸಿದ್ದೇನೆ. ಅದನ್ನು ತಾವು ಮನಸ್ಸಿನಲ್ಲಿಟ್ಟು ನಿಮಗೆ ವಹಿಸಿದ ಈ ಜವಾಬ್ದಾರಿ ಕಾಯಕವನ್ನು ಭಗವಂತನು ಮೆಚ್ಚುವಂತೆ ಯಶಸ್ವಿಯಾಗಿ ನಿರ್ವಹಿಸಲು ಸರ್ವ ಶಕ್ತಿಯನ್ನು ಆ ಭಗವಂತನು ತಮಗೆ ಕೊಡಲೆಂದು ಹಾರೈಸುತ್ತಾ ಮತ್ತೊಮ್ಮೆ ತಾವು ಈ ಸ್ಥಾನ ಅಲಂಕರಿಸಿದ್ದಕ್ಕಾಗಿ ಮನಪೂರ್ವಕವಾದ ಅಭಿನಂದನೆ ಸಲ್ಲಿಸುತ್ತೇನೆ.

ಇನ್ನು ಈ ಸ್ಥಾನ ಬಿಟ್ಟು ಕೊಟ್ಟು ಹೋಗುವವರಾದ ಶ್ರೀಮಾನ್ ವೆಂಕಟಪ್ಪನವರ ವಿಷಯವನ್ನು ಹೇಳುವಾಗ ನನಗೆ ಗಂಟಲು ಹಿಡಿಯುತ್ತದೆ. ಏಕೆಂದರೆ ನಾನು

ವಿದ್ಯಾರ್ಥಿದೆಸೆಯಲ್ಲಿದ್ದಾಗ ನನಗೆ ಅಧ್ಯಕ್ಷರಾದ ಶ್ರೀಮಾನ್ ವೆಂಕಟಪ್ಪನವರ ದರ್ಶನ ಲಾಭ ಸಿಕ್ಕಿತ್ತು.

ಹಾಸ್ಟೆಲ್‌ನಲ್ಲಿದ್ದಾಗ ಅವರು ಬಂದು ವಿದ್ಯಾರ್ಥಿಗಳಿಗೆ ನೀಡುತ್ತಿದ್ದ ಪ್ರೋತ್ಸಾಹ ದೇಶ ಪ್ರೇಮವನ್ನುಂಟುಮಾಡುವ ವಿಷಯದಲ್ಲಿ ಅವರು ವಹಿಸುತ್ತಿದ್ದ ಆಸಕ್ತಿ ಇವು ಈಗಲೂ ನನಗೆ ಜ್ಞಾಪಕದಲ್ಲಿವೆ, ಅವರು ಆ ಕಾಲದಿಂದಲೂ ಅಷ್ಟು ದೇಶ ಪ್ರೇಮಿಗಳಾಗಿದ್ದರು. ಮುಂದೆಯೂ ಅದೇ ರೀತಿ ನಡೆದುಕೊಂಡು ಬಂದು ತಾವು ಹೊತ್ತ ಜವಾಬ್ದಾರಿಯನ್ನು ದೇಶ ಮೆಚ್ಚುವಂತೆ ಅದಕ್ಕಿಂತಲೂ ಹೆಚ್ಚಾಗಿ ದೇವರು ಮೆಚ್ಚುವಂತೆ ನಡೆದುಕೊಂಡು ಬಂದಿದ್ದಾರೆ, ಅವರಿಗೆ ವಂದನೆ ಸಲ್ಲಿಸುವುದು ನಮ್ಮ ಕರ್ತವ್ಯ. ಆದ್ದರಿಂದ ಅವರಿಗೆ ನನ್ನ ವಂದನೆಗಳನ್ನು ಅರ್ಪಿಸಿ ಇಂದು ಮಾತನಾಡಲು ಅವಕಾಶ ಕಲ್ಪಿಸಿಕೊಟ್ಟ ತಮಗೂ ವಂದನೆಗಳನ್ನು ತಿಳಿಸುತ್ತೇನೆ.

# ಬಜೆಟ್ ಭಾಷಣ ಕುರಿತು ಮಾಡಿದ ಭಾಷಣ

18-6-1952

ಮಾನ್ಯ ಅಧ್ಯಕ್ಷರೆ,

ಸ್ವಾಮಿ ಮಾನ್ಯ ಸದಸ್ಯರು ಈ ಸಭೆಯ ಮುಂದೆ ತಂದಿರತಕ್ಕ ವಂದನಾರ್ಪಣೆ ಸೂಚನೆಯನ್ನು ನಾನು ತುಂಬಾ ಸಂತೋಷದಿಂದ ಅನುಮೋದಿಸುತ್ತೇನೆ. ಶ್ರೀಮಾನ್ ಮಹಾರಾಜರ ಭಾಷಣ ತೀರ ಪುಟ್ಟ ಭಾಷಣವಾದರೂ ಸಮಯೋಚಿತವಾಗಿದೆ, ಅರ್ಥಗರ್ಭಿತವಾಗಿದೆ, ಅಲ್ಲದೆ ಅನೇಕ ಉತ್ತಮವಾದ ವಿಷಯಗಳನ್ನೊಳಗೊಂಡಿದೆ. ಈಗ ತಾನೆ ಈ ಸೂಚನೆಯನ್ನು ಸಭೆಯ ಮುಂದಿಟ್ಟ ಮಾನ್ಯ ಸದಸ್ಯರು ಭಾಷಣದ ಪ್ರತಿಯೊಂದು ಅಂಶವನ್ನು ಕೂಲಂಕುಷವಾಗಿ ವಿಷಧೀಕರಿಸುವುದರಿಂದ ನಾನು ಉದ್ದವಾದ ಭಾಷಣ ಮಾಡುವುದರಲ್ಲಿ ಔಚಿತ್ಯವಿರಲಾರದೆಂದು ಭಾವಿಸಿ, ಕೇವಲ ಒಂದೆರಡು ವಿಷಯಗಳನ್ನು ಹೇಳಿ ಮುಗಿಸುತ್ತೇನೆ. ಮೊದಲನೆಯದಾಗಿ ಶ್ರೀಮನ್‌ಮಹಾರಾಜರು ದಯಪಾಲಿಸಿರುವ ಭಾಷಣದಲ್ಲಿ ಹೊಸದಾಗಿ ಚುನಾಯಿತರಾಗಿ ಬಂದಿರತಕ್ಕ ನಮಗೆ ಬುದ್ಧಿವಾದ ಅಥವಾ ಹಿತವಚನಗಳನ್ನು ಹೇಳಿದ್ದಾರೆ. ಇದಕ್ಕೆ ಶ್ರೀಮನ್‌ಮಹಾರಾಜರು ಅಭಿನಂದನೀಯರು. ನಾವು ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಅವರಿಗೆ ಅರ್ಪಿಸಬೇಕಾಗಿದೆ. ಇದಲ್ಲದೆ ಇಂದಿನ ಶಾಸನ ಸಭೆಗಳಲ್ಲಿ ಪಕ್ಷಗಳು-ಪ್ರತಿ ಪಕ್ಷಗಳು ಇರುವುದು ಸ್ವಾಭಾವಿಕ. ಹೀಗೆ ಅನೇಕ ಸದಸ್ಯರಿಂದ ಕೂಡಿರತಕ್ಕ ಸಭೆಯಲ್ಲಿ ಸದಸ್ಯರಲ್ಲಿ ಪರಸ್ಪರ ಸಹವರ್ತನೆ, ಸೌಹಾರ್ದ ಮತ್ತು ಸೋದರಭಾವ ಇರಬೇಕಾದುದು ಅತ್ಯಗತ್ಯ. ಶ್ರೀಮನ್‌ಮಹಾರಾಜರು ಪಕ್ಷ-ಪತ್ರಿಪಕ್ಷಗಳಲ್ಲಿ ಸಾಮರಸ್ಯವಿರಬೇಕೆಂದು ಅಪ್ಪಣೆ ಕೊಡಿಸಿದ್ದಾರೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಉನ್ನತ ಮಟ್ಟದಲ್ಲಿ ನಮ್ಮ ಕೆಲಸ ಕಾರ್ಯಗಳನ್ನು ನಡೆಸಿ ನಾವು ದೇಶಕ್ಕೆ ಕೀರ್ತಿಯನ್ನು ತರುವಂತೆ ಮಾಡಬೇಕು. ಇದಕ್ಕಾಗಿ ನಮ್ಮ ಹೃತ್ಪೂರ್ವಕ ವಂದನೆಗಳನ್ನು ಶ್ರೀ ಮನ್‌ಮಹಾರಾಜರಿಗೆ ಸಮರ್ಪಿಸುತ್ತೇನೆ.

ಇನ್ನು ಶ್ರೀ ಮನ್‌ಮಹಾರಾಜರು ದಯಪಾಲಿಸಿರುವ ಭಾಷಣದಲ್ಲಿರುವ ಎಲ್ಲಾ ವಿಷಯಗಳನ್ನು ಹೇಳುವುದಕ್ಕೆ ನಾನು ಹೋಗುವುದಿಲ್ಲ. ಆದರೆ ಬಹಳ ಮುಖ್ಯವಾದ ವಿಷಯ ಎರಡು-ಮೂರಿವೆ, ಆ ವಿಷಯಗಳಲ್ಲಿ ಕೆಲವು ಮಾತುಗಳನ್ನು ಹೇಳಿ ನನ್ನ ಭಾಷಣವನ್ನು ನಿಲ್ಲಿಸುತ್ತೇನೆ. ಮೊದಲನೆಯ ವಿಷಯ ಆಹಾರಕ್ಕೆ ಸಂಬಂಧಪಟ್ಟ ವಿಷಯ. ಆಹಾರ ನೀತಿಯ ವಿಷಯವಾಗಿ ಮಾತನಾಡಬೇಕೆಂದು ನಿಂತರೆ ಗಂಟೆಗಟ್ಟಲೆ ಮಾತನಾಡುವುದಕ್ಕೆ ಅವಕಾಶವಿದೆ. ನನ್ನ ಅಭಿಪ್ರಾಯದಲ್ಲಿ ಇಂತಹ ಕಠಿಣವಾದ ವಿಷಯದಲ್ಲಿ ನಿರ್ದಿಷ್ಟವಾಗಿ ಹೀಗೆಯೇ ಮಾತನಾಡಬೇಕೆಂದು ಹೇಳುವುದು ಕಷ್ಟ. ಏಕೆಂದರೆ ದೇಶದಲ್ಲಿ ಈ ಆಹಾರದ ಮೇಲಿನ

ಹತೋಟಿ ಪ್ರಾರಂಭವಾದ ಮೇಲೆ ಸಮಾಜದಲ್ಲಿ ಏನೇನು ಏರುಪೇರುಗಳಾಗಿವೆ. ಹಳ್ಳಿಯಲ್ಲಿರುವ ರೈತರ ಬುದ್ಧಿ ಯಾವ ರೀತಿ ಕೆಡುವುದಕ್ಕೆ ಪ್ರಾರಂಭವಾಯಿತು. ಇವುಗಳೆಲ್ಲವನ್ನು ಕೂಲಂಕುಷವಾಗಿ ವಿಮರ್ಶೆ ಮಾಡಿ ದೇಶದಲ್ಲಿ ಬಂದಿರತಕ್ಕ ವಿಶೇಷ ಕಷ್ಟಗಳನ್ನು, ಆ ನೀತಿಯನ್ನು ಯಾವ ರೀತಿ ತಡೆಗಟ್ಟಬೇಕು. ಇದನ್ನು ನಿಲ್ಲಿಸುವುದಕ್ಕೆ ಸಂಪೂರ್ಣವಾಗಿ ಹತೋಟಿಯನ್ನು ವಜಾ ಮಾಡುವುದು ಸರಿಯೇ? ಅಥವಾ ಈಗಿರುವ ನೀತಿಯನ್ನು ಯಾವುದಾದರೂ ರೀತಿ ಬದಲಾವಣೆ ಮಾಡಿ ಈ ವಿಶೇಷ ಕಷ್ಟಗಳನ್ನು ನಿವಾರಿಸಲು ಸಾಧ್ಯವೇ? ಎಂಬುದನ್ನೆಲ್ಲಾ ದೀರ್ಘವಾಗಿ ಆಲೋಚನೆ ಮಾಡಿದ್ದೇನೆ. ಆದರೆ ನನಗಿರುವ ಬುದ್ಧಿಗೆ ಹೀಗೆಯೇ ಮಾಡಬೇಕೆಂದು ಒಂದು ನಿರ್ಧಿಷ್ಟ ಮಾರ್ಗ ಹೊಳೆಯಲಿಲ್ಲ. ಈ ಪ್ರಶ್ನೆ ಅಷ್ಟು ಕಷ್ಟವಾಗಿದೆ, ಜಟಿಲವಾಗಿದೆ, ಹತೋಟಿ ಏತಕ್ಕಿರಬೇಕೆಂದರೆ ನಮ್ಮ ಅವಶ್ಯಕತೆಗಳಿಗೆ ಸಾಕಷ್ಟು ಆಹಾರ ಸಾಮಾಗ್ರಿ ನಮ್ಮಲ್ಲಿ ಇಲ್ಲದೆ ಇರುವುದರಿಂದ ಈಗಿನ ನಮ್ಮ ದೇಶದ ಪರಿಸ್ಥಿತಿಯನ್ನು ನೋಡಿದರೆ ದೇಶಕ್ಕೆ ಬೇಕಾಗಿರುವಷ್ಟು ಸಾಮಗ್ರಿ ನಮ್ಮಲ್ಲಿಲ್ಲ. ಆದುದುರಿಂದ ಯಾವುದಾದರೂ ರೀತಿಯಲ್ಲಿ ಹತೋಟಿ ಬೇಕು. ಈ ಹತೋಟಿಯಿಂದ ನಮ್ಮ ದೇಶದ ಜನರ ನೀತಿಯ ಮಟ್ಟ ಏನಾಗಿದೆ ಎಂಬುದನ್ನು ನೋಡಿದರೆ ಬೇರೆಯ ಅಭಿಪ್ರಾಯವುಂಟಾಗುತ್ತದೆ. ನೀತಿಗೆ ತಿಲಾಂಜಲಿಯಾಗುವುದಾದರೆ, ಜನ ಸತ್ತರೂ ಚಿಂತೆಯಿಲ್ಲ, ನೀತಿಯ ಅರ್ಧಪತನವಾಗಿ ಜನರು ಬದುಕುವುದಾದರೆ, ಅಂತಹ ಪದ್ಧತಿ ನಮಗೆ ಬೇಡ ಎಂದು ಪೂಜ್ಯ ಬಾಪು ಅಪ್ಪಣೆ ಕೊಡಿಸಿದ್ದರು. ಹಿಂದೆ ಹಳ್ಳಿಗಳಲ್ಲಿ ಎಷ್ಟೋ ಧಾರ್ಮಿಕ ಬುದ್ಧಿ, ನೀತಿ ಇತ್ತು. ಈ ದಿನ ಈ ಹತೋಟಿಯ ದೆಸೆಯಿಂದ ಬೆಳಿಗ್ಗೆ ಎದ್ದರೆ ಸುಳ್ಳು ಹೇಳಬೇಕು, ಸುಳ್ಳು ಲೆಕ್ಕ ಬರೆಯಬೇಕು, ಉಳಿತಾಯ ಮಾಡಬೇಕು, ಎನ್ನುವ ಬುದ್ಧಿ ಬಂದಿದೆ. ಏಕೆಂದರೆ, ಸರ್ಕಾರದವರು ಬಿಡುವ ಧಾನ್ಯ ಖಂಡಿತವಾಗಿಯೂ ರೈತರಿಗೆ ಸಾಕಾಗುವುದಿಲ್ಲ. ಒಂದು ಪಾವು ಅಕ್ಕಿ ಅನ್ನ ತಿಂದು, ಅವರು ಕೆಲಸ ಮಾಡಬೇಕೆಂದು ಹೇಳಿದರೆ ಖಂಡಿತವಾಗಿಯೂ ಅವರಿಗೆ ಸಾಕಾಗುವುದಿಲ್ಲ. ನಮ್ಮಲ್ಲೇ ಎಷ್ಟೋ ಜನ ಒಂದು ಪಾವುಗಿಂತ ಹೆಚ್ಚಾಗಿ ಊಟ ಮಾಡುವವರಿದ್ದಾರೆ. ಹೀಗಿರುವಾಗ ಬೆಳಗ್ಗಿನಿಂದ ಸಂಜೆಯವರೆಗೆ ಶ್ರಮಪಡುವ ರೈತ ಒಂದೇ ಪಾವಕ್ಕಿ ಅನ್ನದಲ್ಲಿ ತೃಪ್ತನಾಗಬೇಕೆಂದರೆ ಹೇಗೆ ಸಾಧ್ಯ? ಹೀಗೆ ಯಾವಾಗ ಅವನಿಗೆ ಸಾಲುವುದಿಲ್ಲವೋ ಆಗ ಅವನು ತನ್ನ ಸಂಸಾರಕ್ಕೆ ಬೇಕಾಗುವಷ್ಟು ಆಹಾರಧಾನ್ಯವನ್ನು ಇಟ್ಟುಕೊಳ್ಳುವುದಕ್ಕಾಗಿ ಸುಳ್ಳು ಹೇಳಬೇಕಾಗುತ್ತದೆ. ಕೆಲವು ವೇಳೆ ಉಳಿದರೆ ಅದನ್ನು ರಾಜಾರೋಷವಾಗಿ ಮಾರುವುದಕ್ಕೆ ಸಾಧ್ಯವಾಗುವುದಿಲ್ಲ; ಕದ್ದು ಮಾರಿದರೆ ಲಾಭ ಬರುತ್ತದೆಂಬ ಆಸೆ ಹುಟ್ಟುತ್ತದೆ. ಆದ್ದರಿಂದ ಬೇರೆ ಕಡೆ ಮಾರಿಕೊಳ್ಳುತ್ತಾನೆ. ಅನೇಕ ಕಡೆ ಜಳ್ಳು, ಮಣ್ಣು, ಕಸ ಇವುಗಳನ್ನು ಸೇರಿಸಿ ಮಾರುವುದನ್ನು ನಾನೇ ನೋಡಿದ್ದೇನೆ. ಯಾವ ರೈತ ತನ್ನಲ್ಲಿಗೆ ಯಾರೇ ಬಂದರೂ ಉದಾರವಾಗಿ ಒಂದು ಪಡಿ ಧಾನ್ಯವನ್ನು ಹಾಕುವುದಕ್ಕೆ ಹಿಂತೆಗೆಯುತ್ತಿರಲಿಲ್ಲವೋ? ಅಂಥವನೇ ಈಗ

ಒಂದು ಪಡಿಗೆ ಒಂದು ಹಿಡಿ ಮಣ್ಣನ್ನು ಸೇರಿಸಿ ಮಾರುವಂತಹ ಅನೀತಿ ಬಂದಿದೆ. ಹೀಗೆ ಜನರನ್ನು ಅನೀತಿಗೆ ನೂಕಿ ಕಾಪಾಡಬೇಕೇ ಅಥವಾ ಆನೀತಿ ಇಲ್ಲದಂತೆ ಕಾಪಾಡಬೇಕೆ? ಎನ್ನುವುದು ಬಹಳ ಕಠಿಣವಾದ ವಿಷಯ ಇನ್ನೊಂದು ವಿಷಯ, ಹಿಂದೆ ಅನುಸರಿಸುತ್ತಿದ್ದ ಆಹಾರ ನೀತಿ ಏನಾಗಿತ್ತು ಎಂದು ನೋಡಿದರೆ, ಸಂಸ್ಥಾನದ ಎಲ್ಲಾ ಜನರಿಗೂ ಸಮಾನವಾದ ಒಂದೇ ರೀತಿಯ ಏರ್ಪಾಡನ್ನು ಮಾಡಿರಲಿಲ್ಲ. ಸ್ಟ್ಯಾಟುಟೆರಿ ರೇಷನಿಂಗ ಜಾರಿಯಲ್ಲಿದ್ದ ಪ್ರದೇಶದಲ್ಲಿ ವರ್ಷದ ಮುನ್ನೂರಅರವತ್ತೈದು ದಿನವೂ ಜನರಿಗೆ ಆಹಾರಧಾನ್ಯವನ್ನು ಕೊಡುತ್ತಿದ್ದರು. ರೇಷನ್ ಕಾರ್ಡುಗಳ ಮೇಲೆ. ಆದರೆ ಹಳ್ಳಿಗಳಲ್ಲಿ ಇದೇ ರೀತಿ ದೊರೆಯುತ್ತಿರಲಿಲ್ಲ. ಈ ವಿಷಯದಲ್ಲಿ ನಾನೇ ಅನೇಕ ಸಾರಿ ಪ್ರಶ್ನೆ ಹಾಕಿದ್ದೇನೆ. ಆದರೆ ಇದರಲ್ಲಿ ಸರ್ಕಾರಕ್ಕೆ ಕಷ್ಟವಿದೆ. ಎಲ್ಲರಿಗೂ ಒಂದು ಪ್ರಮಾಣದಲ್ಲಿ ಕೊಡುವುದಕ್ಕಾಗುವುದಿಲ್ಲ. ಯಾರಿಗೆ ಶಕ್ತಿಯಿಲ್ಲವೋ ಅವರಿಗೆ ಸಹಾಯ ಮಾಡುತ್ತೇವೆ; ಹಳ್ಳಿಯಲ್ಲಿರುವವರು ಬೆಳೆಯುವವರು ಅಲ್ಲಿರುವುದರಿಂದ ಅಲ್ಲಿಯೇ ತೆಗೆದುಕೊಳ್ಳಬಹುದು ಎಂದು ಹೇಳುತ್ತಿದ್ದರು. ಕೆಲವರಿಗೆ ಒದಗಿಸಿ ಕೆಲವರಿಗೆ ಇಲ್ಲವೆನ್ನುವುದು ಸರಿಯಾದ ನೀತಿಯಲ್ಲ. ಸರ್ಕಾರ ಆಹಾರವನ್ನು ಒದಗಿಸಿದ ಮೇಲೆ ದೇಶದಲ್ಲಿ ಎಲ್ಲರಿಗೂ ಒದಗಿಸಬೇಕು. ಹಿಂದಿದ್ದ ಏರ್ಪಾಡಿನ ಮೇರೆಗೆ ಸ್ಟ್ಯಾಟುಟೆರಿ ರೇಷನಿಂಗ್ ಇರುವ ಪ್ರದೇಶದಲ್ಲಿ ಧಾನ್ಯ ಸಿಕ್ಕುತ್ತಿತ್ತು, ಹಳ್ಳಿಗಳಲ್ಲಿ ಸಿಕ್ಕುತ್ತಿರಲಿಲ್ಲ, ಈ ದೃಷ್ಟಿಯಿಂದ ಅದು ಪರಿಪೂರ್ಣವಾದ ನಿಯಂತ್ರಣವಾಗಿರಲಿಲ್ಲ. ಎಲ್ಲಾ ದೃಷ್ಟಿಯಿಂದಲೂ ನೋಡಿದರೆ ಕಂಟ್ರೋಲು ಇರುವುದಕ್ಕಿಂತ ಇದನ್ನು ತೆಗೆದರೇ ಜನರಿಗೆ ಸುಖವಾಗಬಹುದೆಂದು ಸರ್ಕಾರದವರು ಯೋಚಿಸಿ ತಮ್ಮ ಈ ಹತೋಟಿ ನೀತಿಯನ್ನು ಮೊನ್ನೆ ಮಾರ್ಪಾಟು ಮಾಡಿದರು. ಹೀಗೆ ಮಾಡಿದಾಗ ನಮ್ಮಲ್ಲಿ ಅನೇಕರಿಗೆ ಗೊತ್ತಿರುವ ಹಾಗೆ ಹಾಹಾಕಾರ, ಹರತಾಳ, ಬಹಿರಂಗ ಸಭೆಗಳಾಗಿ ಪ್ರತಿಭಟನೆ ನಡೆಯಿತು. ಸ್ವಲ್ಪ ಕಾಲದಲ್ಲೇ ನಮಗಿಂತ ಹೆಚ್ಚು ಖೋತಾ ಇರುವ ಮದರಾಸಿನಲ್ಲಿ ಪೂರ್ತಿಯಾಗಿ ರೇಷನ್ ರದ್ದುಮಾಡಿ ಅಲ್ಲಿ ಒಳ್ಳೆಯ ಪರಿಸ್ಥಿತಿ ಏರ್ಪಾಡಾಗಿದೆ. ನಾವು ಕೂಡ ಪೂರ್ಣವಾಗಿ ರೇಷನ್ ವಜಾ ಮಾಡಬಾರದೆಂಬ ಅಭಿಪ್ರಾಯ ಅನೇಕ ಸದಸ್ಯರಿಗೆ ಮೂಡಿದೆ. ಇದನ್ನು ಗಮನಿಸಿ ಶ್ರೀಮನ್ ಮಹಾರಾಜರು ತಮ್ಮ ಭಾಷಣದಲ್ಲಿ ಹೇಳಿದ್ದಾರೆ. ನಿಜ, ಪೂರ್ತಿಯಾಗಿ ತೆಗೆದು ಹಾಕಬಾರದು. ಇಂತಹ ಸಮಯ ಸಿಕ್ಕಿದರೆ ಅದನ್ನು ದುರುಪಯೋಗಪಡಿಸಿಕೊಂಡು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕೆಂಬ ಜನರು ನಮ್ಮಲ್ಲಿದ್ದಾರೆ. ಪೂರ್ತಿಯಾಗಿ ಹತೋಟಿ ತೆಗೆದು ಹಾಕಿದರೆ, ರೈತ ಬೆಳೆಯತಕ್ಕವನ್ನು ಹಣದ ತೊಂದರೆಯಿಂದ ಆಹಾರ ಧಾನ್ಯವನ್ನು ಮಾರಾಟ ಮಾಡುವುದಕ್ಕೆ ಪ್ರಯತ್ನ ಮಾಡುತ್ತಾರೆ. ಆ ಸಮಯದಲ್ಲಿ ಹೆಚ್ಚು ಹಣವಿರುವವರು ಹೆಚ್ಚು ಪ್ರಮಾಣದಲ್ಲಿ ಕೊಂಡು ದಾಸ್ತಾನು ಮಾಡಿ ಪುನಃ ಮಾರಾಟಕ್ಕೆ ದವಸ ಸಿಕ್ಕದೆ ಇರುವ ಪರಿಸ್ಥಿತಿಯನ್ನು ತಂದೊಡ್ಡಬಹುದು. ಹೀಗಾದರೆ ಇನ್ನೂ ಹೆಚ್ಚು ಕಷ್ಟದ ಪರಿಸ್ಥಿತಿ ಬರಬಹುದು. ಆದುದರಿಂದ ಖಚಿತವಾಗಿ ಹೀಗೆಯೇ ಮಾಡಬೇಕೆಂದು ನಿರ್ಧರಿಸಿ, ನಿರ್ದಿಷ್ಟವಾಗಿ ಕಾರ್ಯಕ್ರಮವನ್ನು

ಕೈಗೊಳ್ಳುವುದಕ್ಕೆ ಮುನ್ನ ಪೂರ್ವಭಾವಿಯಾಗಿ ದೀರ್ಘವಾಗಿ ಈ ವಿಷಯವನ್ನು ಯೋಚನೆ ಮಾಡಿ ಸರ್ಕಾರದವರು ಸೂಕ್ತ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಶ್ರೀಮನ್‌ಮಹಾರಾಜರು ಅಪ್ಪಣೆ ಕೊಟ್ಟಿರುತ್ತಾರೆ. ಇದು ಸಮಯೋಚಿತವೂ, ಸಾಧುವೂ ಎಂದು ನನ್ನ ಅಭಿಪ್ರಾಯ. ಏಕೆಂದರೆ ನಾನು ಮೊದಲೇ ಹೇಳಿದಂತೆ ನಿರ್ಧಿಷ್ಟವಾಗಿ ಇಂತಹ ಪರಿಸ್ಥಿತಿಯೇ ಉಂಟಾಗಬಹುದೆಂದು ನಿರ್ಧಾರ ಮಾಡವುದು ಒಂದು ಕಠಿಣವಾದ ಪ್ರಶ್ನೆ. ಆದುದರಿಂದ ಸ್ವಲ್ಪಕಾಲ ಇನ್ನೂ ಈ ವಿಷಯವನ್ನು ಚೆನ್ನಾಗಿ ಪರಿಶೀಲಿಸಿ, ನೆರೆ ಪ್ರಾಂತ್ಯಗಳಲ್ಲಿ ಹೇಗೆ ನಡೆಯುತ್ತಿವೆ ಮತ್ತು ಅವುಗಳ ಪರಿಣಾಮ ಏನಾಗುತ್ತದೆಂಬುದನ್ನು ಮನಗಂಡ ನಂತರ ಇಲ್ಲಿಯೂ ಅದೇ ರೀತಿ ಮಾಡತಕ್ಕದ್ದು ಸೂಕ್ತವಾಗಿ ಕಾಣುತ್ತದೆಂದು ನನ್ನ ಅಭಿಪ್ರಾಯ.

ಇನ್ನೂ ಶ್ರೀ ಮನ್‌ಮಹಾರಾಜರು ಅಪ್ಪಣೆ ಕೊಡಿಸುವುದರಲ್ಲಿ ಬಹಳ ಮುಖ್ಯವಾದ ಒಂದು ವಿಷಯವೇನೆಂದರೆ, ಈಗಿರತಕ್ಕ ವಿದ್ಯಭ್ಯಾಸ ಕ್ರಮದಲ್ಲಿ ಸೂಕ್ತ ಬದಲಾವಣೆಗಳನ್ನು ಸರ್ಕಾರದವರು ಕೂಡಲೇ ಕೈಗೊಳ್ಳಬೇಕೆಂದು ಹೇಳಿರತಕ್ಕದ್ದು. ಈ ವಿಷಯದಲ್ಲಿ ನನಗಿಂತಲೂ ಹೆಚ್ಚಾಗಿ ತಿಳಿದಿರತಕ್ಕ ಮಾನ್ಯ ಮಿತ್ರರನೇಕರು ಇಲ್ಲಿದ್ದಾರೆ. ಆದರೆ ನನಗೆ ಈ ಬಗ್ಗೆ ಅಷ್ಟೊಂದು ಹೆಚ್ಚಾಗಿ ಮಾತನಾಡಲು ಇಷ್ಟವಿಲ್ಲ. ಆದರೆ ಒಂದೆರಡು ವಿಷಯಗಳನ್ನು ಮಾತ್ರ ಸೂಚಿಸಲು ಇಚ್ಛಿಸುತ್ತೇನೆ.

ಈ ದಿವಸ ವಿದ್ಯಾಭ್ಯಾಸ ನಡೆದುಕೊಂಡು ಬರುತ್ತಿರುವ ಒಂದು ರೀತಿ, ನೀತಿಯನ್ನು ನೋಡಿದರೆ ಇಂದು ವಿದ್ಯಾವಂತರಾಗಿ ಹೊರಗೆ ಬರುವ ತರುಣ ಜನಾಂಗ ಸರ್ಕಾರದಲ್ಲಿ ಯಾವುದಾದರೂ ಒಂದು ಚಾಕರಿ ದೊರೆತರೆ ಮಾತ್ರ ಅವರು ನಮ್ಮ ಜೀವನೋಪಾಯವನ್ನು ಕಲ್ಪಿಸಿಕೊಳ್ಳಬಲ್ಲರೆ ವಿನಃ ಅವರಿಗೆ ಸ್ವತಂತ್ರವಾಗಿ ಜೀವನೋಪಾಯವನ್ನು ನಡೆಸಿಕೊಂಡು ಹೋಗತಕ್ಕ ಸ್ವಸಾಮರ್ಥ್ಯವಿರುವುದಿಲ್ಲ. ಹೀಗಾದರೆ ನಾವು ಮುಂದಕ್ಕೆ ಇನ್ನೂ ಅನೇಕ ಕಷ್ಟ-ನಷ್ಟಗಳಿಗೆ ಗುರಿಯಾಗಬೇಕಾಗುತ್ತದೆ. ಇಂದು ನೀವು ದೇಶದ ತರುಣರಿಗೆ ನೀಡುತ್ತಿರುವ ವಿದ್ಯಾಭ್ಯಾಸದ ಕ್ರಮ ತರುಣ ಜನಾಂಗಕ್ಕೆ ಒಂದು ಸ್ಫೂರ್ತಿಯನ್ನು ಅಥವಾ ಹರುಷವನ್ನು ಹುಟ್ಟಿಸುವಂತಹದ್ದಾಗಿಲ್ಲ. ನಮ್ಮಲ್ಲಿರತಕ್ಕ ವಿದ್ವಾಂಸರಿಗೆ ಸ್ವಸಾಮರ್ಥ್ಯವಿಲ್ಲ. ಸ್ವಾವಲಂಬನೆ ಉಂಟು ಮಾಡುವಂತಹ ವಿದ್ಯೆಯನ್ನು ತಾವು ಅವರಿಗೆ ಕೊಡುತ್ತಿಲ್ಲ. ಇಂದಿನ ವಿದ್ಯಾಭ್ಯಾಸದ ಪರಿಣಾಮವೇನಾಗಿದೆ ಎಂದರೆ, ಯುವಕ ಜನಾಂಗಕ್ಕೆ ಗುಮಾಸ್ತಗಿರಿಗೆ ಎಷ್ಟು ಅಗತ್ಯವಿದೆಯೋ ಅಷ್ಟರಮಟ್ಟಿಗೆ ಅನುಕೂಲ ದೊರಕಿಸುವಂತಾಗಿದೆ.

ಈ ರೀತಿಯಾಗಿ ಇದರಲ್ಲಿ ಅನೇಕ ಲೋಪ ದೋಷಗಳಿರುವುದರಿಂದಲೇ ನಮ್ಮ ವಿದ್ಯಾಭ್ಯಾಸ ಕ್ರಮವನ್ನು ಬದಲಾಯಿಸಬೇಕು ಎಂಬುದಾಗಿ ಬಹಳ ಜನರು ಒತ್ತಾಯಪಡಿಸುತ್ತಿರುವುದು. ಆದರೆ ಅದು ಯಾವ ರೀತಿ ಬದಲಾವಣೆಯಾಗಬೇಕು, ಆ ಬದಲಾವಣೆಯ ರೂಪರೇಖೆಗಳು ಹೇಗಿರಬೇಕು ಎಂಬ ಅಂಶಗಳ ಬಗ್ಗೆ ಯಾರೂ ಖಚಿತವಾಗಿ

ಏನನ್ನೂ ತಿಳಿಸಿರುವುದಿಲ್ಲ. ನನ್ನ ಅಭಿಪ್ರಾಯದಲ್ಲಿ ಈಗಿರತಕ್ಕ ವಿದ್ಯಾಭ್ಯಾಸ ಕ್ರಮವನ್ನು ಆದಷ್ಟು ಬೇಗ ಬದಲಾಯಿಸಬೇಕಾದದ್ದು ದೇಶದ ಮುಂದಿರತಕ್ಕ ಅತಿ ಮುಖ್ಯ ಪ್ರಶ್ನೆಗಳ ಪೈಕಿ ಒಂದಾಗಿದೆ. ಇದನ್ನೆಲ್ಲಾ ಸರ್ಕಾರದವರು ಮನಗಂಡು ಆದಷ್ಟು ಜಾಗ್ರತೆ ದೇಶದಲ್ಲಿ ಈಗಿರತಕ್ಕ ವಿದ್ಯಾಭ್ಯಾಸ ಕ್ರಮವನ್ನು ಬದಲಾಯಿಸಿ, ದೇಶಾಭಿವೃದ್ಧಿಗೆ ಸರ್ವತೋಮುಖವಾಗಿ ಸಹಾಯಕವಾಗುವಂಥಹ ಪದ್ಧತಿಯನ್ನು ಜಾರಿಗೆ ತರಬೇಕೆಂದು ನಾನು ಒತ್ತಾಯಪೂರ್ವಕವಾಗಿ ಹೇಳುತ್ತೇನೆ. ಈ ಅಂಶವನ್ನೇ ಶ್ರೀಮನ್‌ಮಹಾರಾಜರವರೂ ತಮ್ಮ ಭಾಷಣದಲ್ಲಿ ಹೇಳಿದ್ದಾರೆ.

ನಮ್ಮ ದೇಶದಲ್ಲಿ ಇಂದು ಸ್ಥಾಪಿತವಾಗಿರತಕ್ಕ ಪ್ರಜಾಪ್ರಭುತ್ವವು ಯಶಸ್ವಿಯಾಗಿ ಮುಂದುವರಿಯಬೇಕಾಗಿದ್ದರೆ ವಯಸ್ಕರ ಪದ್ದತಿಯ ಮೇಲೆ ಮತದಾನಮಾಡತಕ್ಕ ಜನ ಸಾಮಾನ್ಯರಿಗೆಲ್ಲಾ ತಕ್ಕಷ್ಟು ಜ್ಞಾನವಿರಬೇಕು. ಒಬ್ಬ ಮನುಷ್ಯನು ತನ್ನ ಮತವನ್ನು ಚಲಾಯಿಸತಕ್ಕ ಕಾಲದಲ್ಲಿ ಆತನು ಚಲಾಯಿಸತಕ್ಕ ಓಟಿನ ಹಕ್ಕು ಎಷ್ಟು ಬೆಲೆಯುಳ್ಳದ್ದು ಎಂಬುದನ್ನು ಆತ ಮನಗಾಣಬೇಕು ಮತ್ತು ಅಂಥ ಹಕ್ಕನ್ನು ಆತನು ದಾನ ಮಾಡುವಾಗ, ಆತನು ಓಟನ್ನು ಕೊಟ್ಟ ಬೇರೊಬ್ಬ ಮನುಷ್ಯನನ್ನು ಇಂಥ ಸಭೆಗಳ ಸದಸ್ಯನನ್ನಾಗಿ ಮಾಡಬೇಕಾದ ಸಂದರ್ಭದಲ್ಲಿ ಹಾಗೆ ಸದಸ್ಯನಾಗತಕ್ಕ ಮನುಷ್ಯನು ಯೋಗ್ಯನೇ ಅಥವಾ ಅಯೋಗ್ಯನೇ ಎಂಬುದನ್ನು ಆ ಮತದಾನ ಮಾಡತಕ್ಕ ಮನುಷ್ಯನು ತಿಳಿದುಕೊಂಡು ತನ್ನ ಮತದಾನ ಮಾಡುವಂಥ ಒಂದು ಅವಕಾಶವನ್ನು ಆತನಿಗೆ ಉಂಟುಮಾಡಬೇಕಾದ್ದು ಅತಿ ಮುಖ್ಯವಾದ ವಿಷಯ. ಈ ವಿಷಯಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ತಮ್ಮ ಓಟನ್ನು ತಿಳುವಳಿಕೆಯುಳ್ಳಂಥ ಮನುಷ್ಯನಿಗೇ ಕೊಡುವಷ್ಟು ಮಟ್ಟಿಗಾದರೂ ವಿದ್ಯೆ ಎಲ್ಲರಿಗೂ ಬೇಕಾಗಿದೆ. ಈ ಅನುಕೂಲ ದೇಶದಲ್ಲಿರತಕ್ಕ ಎಲ್ಲಾ ಪ್ರಜಾಸಮುದಾಯಕ್ಕೂ ಅತ್ಯಗತ್ಯ. ಹೀಗೆ ಮಾಡಿದರೆ ದೇಶವೂ ಜನಾಂಗವೂ ಮುಂದುವರಿಯಲು ಸಾಧ್ಯವಾದೀತು. ಆದರೆ ದೇಶದಲ್ಲಿ ಇಂದು ಕೇವಲ ನೂರಕ್ಕೆ ಹನ್ನೆರಡು ಮಂದಿ ಮಾತ್ರ ವಿದ್ಯಾವಂತರಿದ್ದಾರೆ. ಆದರೆ ನಮ್ಮ ಸರ್ಕಾರ ಇಂದು ಈ ವಿದ್ಯಾಪ್ರಗತಿಗಾಗಿ ಖರ್ಚು ಮಾಡುತ್ತಿರುವುದು ಸುಮಾರು ಮೂರುವರೆ ಕೋಟಿಯಷ್ಟು ರೂಪಾಯಿಗಳು. ಹೀಗೆ ಮೂರೂವರೆ ಕೋಟಿ ರೂಪಾಯಿಗಳನ್ನು ಖರ್ಚು ಮಾಡುತ್ತಾ ಹನ್ನೆರಡು ಲಕ್ಷ ಜನರನ್ನು ಮಾತ್ರ ವಿದ್ಯಾವಂತರನ್ನಾಗಿ ಮಾಡಲು ಇನ್ನೆಷ್ಟು ಕೋಟಿ ಹಣವನ್ನು ಖರ್ಚು ಮಾಡಬೇಕಾಗುತ್ತದೆಂಬುದನ್ನು ಎಲ್ಲರೂ ಆಲೋಚನೆ ಮಾಡಬೇಕಾಗಿದೆ. ಅದಕ್ಕಾಗಿ ನಾನು ಹೇಳಬೇಕೆಂದಿರುವುದು, ಇಂದು ನಾವು ವಿದ್ಯಾಪ್ರಗತಿಗಾಗಿ ಮಾಡುತ್ತಿರುವ ಖರ್ಚನ್ನು ಕಡಿಮೆ ಮಾಡಬೇಕು ಎಂದು. ಹೀಗೆ ಹೇಳುವುದರಲ್ಲಿ ನನ್ನ ಅಭಿಪ್ರಾಯವೇನಿರುತ್ತದೆಯೆಂದರೆ, ಪ್ರತಿಯೊಂದು ವಿದ್ಯಾಸಂಸ್ಥೆಯು ತನಗೆ ಆಗತಕ್ಕ ಖರ್ಚುವೆಚ್ಚಗಳನ್ನು ತಮ್ಮ ತಮ್ಮ ಸ್ವಯಂ ಪ್ರಯತ್ನಗಳಿಂದ ಅವುಗಳೇ ದುಡಿದುಕೊಂಡು, ದೇಶದಲ್ಲಿ ವಿದ್ಯಾಪ್ರಗತಿಯುಂಟಾಗುವಂತೆ ಆಗಬೇಕೆಂಬುದೇ ಆ ನನ್ನ ಅಭಿಪ್ರಾಯದ ಗುರಿ. ಆದರೆ ಈ ವಿದ್ಯಾಪ್ರಗತಿಯ ಬಗ್ಗೆ

ಅನ್ಯದೇಶಗಳು ಹೇಗೆ ನಡೆಸುತ್ತಿವೆಯೆಂಬ ವಿಷಯ ನನಗೆ ಅಷ್ಟಾಗಿ ಗೊತ್ತಿಲ್ಲ. ನನಗೆ ಪರರಾಷ್ಟ್ರಗಳ ಪರಿಶ್ರಮ ಕಡಿಮೆ. ಕೇವಲ ಅವರಿವರು ಹೇಳಿದ್ದರಲ್ಲಿ ಅನೇಕ ದೇಶಗಳಲ್ಲಿ ವಿದ್ಯಾಭ್ಯಾಸದ ಖರ್ಚು ವೆಚ್ಚಗಳೇನಿದ್ದರೂ, ಆಯಾಯ ವಿದ್ಯಾಸಂಸ್ಥೆಗಳೇ ಅದನ್ನು ದುಡಿದುಕೊಂಡು, ಸರ್ಕಾರದ ಮೇಲೆ ಯಾವ ಭಾರವನ್ನು ಹಾಕದಂತೆ, ನಡೆಸಿಕೊಂಡು ಬರುತ್ತಿರುವುದಾಗಿ ಗೊತ್ತಾಗಿದೆ. ಪರದೇಶಗಳ ಪರಿಶ್ರಮವುಳ್ಳವರಿಗೆ ಇದರ ಬಗ್ಗೆ ಹೆಚ್ಚು ಅನುಭವವಿರಬಹುದು. ಆದರೆ ಒಂದು ದೇಶದಲ್ಲಿರತಕ್ಕ ಇಡೀ ಜನಾಂಗವನ್ನೆಲ್ಲಾ ದೇಶದ ಸರಕಾರವೇ ವಿದ್ಯಾವಂತರನ್ನಾಗಿ ಮಾಡಬೇಕೆಂದರೆ ಅದು ಸಾಧ್ಯವಿಲ್ಲದ ಮಾತು. ಆದುದರಿಂದ ಈ ಎಲ್ಲಾ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡು ನನ್ನ ಸರ್ಕಾರದವರು ಇಂದಿನ ವಿದ್ಯಾಭ್ಯಾಸದ ಕ್ರಮವನ್ನು ಯಾವ ರೀತಿ ಬದಲಾವಣೆ ಮಾಡಬೇಕು, ಮುಂದಕ್ಕೆ ಯಾವ ಕ್ರಮವನ್ನು ಅಳವಡಿಸಬೇಕು, ಎಂತಹ ವಿದ್ಯಾಭ್ಯಾಸ ಪದ್ಧತಿಯನ್ನು ಜಾರಿಗೆ ತರಬೇಕು ಎಂಬ ಮುಖ್ಯ ವಿಷಯಗಳನ್ನು ಮೊದಲು ಗಮನಿಸಬೇಕಾಗಿದೆ. ಕೆಲವು ಜಿಲ್ಲೆಗಳಲ್ಲಿ ಇಂದು ಹತ್ತು, ಹನ್ನೆರಡು ಪ್ರೌಢಶಾಲೆಗಳನ್ನು ತೆರೆದಿದ್ದಾರೆ. ಅವುಗಳಿಗೆ ಅಲ್ಲಿ ಅಷ್ಟೊಂದು ಅವಶ್ಯಕತೆ ಇದೆಯೆ, ಇಲ್ಲವೇ ಎಂಬುದು ಯಾರಿಗೂ ಸರಿಯಾಗಿ ಗೊತ್ತಿರುವುದಿಲ್ಲ. ಅವಶ್ಯಕತೆ ಇರುವ ಕಡೆ ಪಾಠಶಾಲೆಗಳಿರುವುದಿಲ್ಲ. ಹೀಗೆ ಇದು ಅವ್ಯವಸ್ಥೆಯಲ್ಲಿರತಕ್ಕದನ್ನೆಲ್ಲಾ ವ್ಯವಸ್ಥೆಗೆ ತಂದು ಸರಿಪಡಿಸಬೇಕಾಗಿದೆ. ಸರ್ಕಾರದವರು ಈ ಬಗ್ಗೆ ಖರ್ಚು ಮಾಡಿರುವ ಮೊಬಲಗನ್ನು ಕಡಿಮೆ ಮಾಡಲೇಬೇಕು. ಇದು ಬಹಳ ಮುಖ್ಯವಾದ ವಿಷಯ. ಸರ್ಕಾರದವರು ಇದನ್ನು ಮುಖ್ಯವಾಗಿ ಗಮನಿಸಬೇಕೆಂದು ಶ್ರೀಮನ್ಮಹಾರಾಜರು ಅಪ್ಪಣೆ ಕೊಡಿಸಿದ್ದಾರೆ. ಕೊನೆಯದಾಗಿ ಇನ್ನು ಸರ್ಕಾರಿ ಕೈಗಾರಿಕೆಗಳ ವಿಚಾರವಾಗಿ ಒಂದು ಮಾತನ್ನು ಶ್ರೀಮನ್ಮಹಾರಾಜರು ಅಪ್ಪಣೆ ಕೊಡಿಸಿದ್ದಾರೆ. ನಾನು ಸಹ ಈ ಪೈಕಿ ಒಂದೆರಡು ಕಾರ್ಖಾನೆಗಳನ್ನು ನೋಡಿದ್ದೇನೆ. ಇತರೆ ಕಾರ್ಖಾನೆಗಳು ಕೂಡ ಬೇರೆ ಕಡೆ ಕೆಲಸ ಮಾಡುತ್ತಿವೆ. ಈ ಕಾರ್ಖಾನೆಗಳಲ್ಲಿ ಅವುಗಳಲ್ಲಿ ಉತ್ಪನ್ನವಾಗತಕ್ಕ ಮೊಬಲಗಿಗಿಂತ ಅವುಗಳಿಗೆ ಆಗತಕ್ಕ ಖರ್ಚೆ ಹೆಚ್ಚಾಗಿದೆ. ಸರ್ಕಾರದವರು ಈ ಬಗ್ಗೆ ಅಷ್ಟು ತೀವ್ರ ಆಸಕ್ತಿ ವಹಿಸಿದಂತೆ ಕಾಣುತ್ತಿಲ್ಲ. ಇನ್ನಾದರೂ ಅವುಗಳ ಬಗ್ಗೆ ಆಸಕ್ತಿವಹಿಸಿ, ಉತ್ಪತ್ತಿ ಹೆಚ್ಚುವಂತೆ ಮಾಡಿ, ಆಗುತ್ತಿರುವ ಖರ್ಚನ್ನು ತಗ್ಗಿಸಬೇಕೆಂದು ಒತ್ತಿ ಹೇಳುತ್ತೇನೆ. ಇದೇ ವಿಚಾರವಾಗಿ ಶ್ರೀಮನ್ಮಹಾರಾಜರು ಕೂಡ ಇಂದಿನ ಸರ್ಕಾರ ಈ ಎಲ್ಲಾ ವಿಷಯಗಳ ಬಗ್ಗೆ ಕೂಡಲೇ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಅಪ್ಪಣೆ ಕೊಡಿಸಿದ್ದಾರೆ.

ಇನ್ನು ಅಖೈರಾಗಿ ಈ ಶಾಸನ ಸಭೆಯ ಮುಂದೆ ಬರತಕ್ಕ ಶಾಸನಗಳು ಮತ್ತು ಕಾರ್ಯಕಲಾಪಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಒಟ್ಟಿನಲ್ಲಿ ಅವರು ಅಪ್ಪಣೆ ಕೊಡಿಸಿರತಕ್ಕ ಭಾಷಣ ಬಹಳ ಸ್ವಾರಸ್ಯವುಳ್ಳದಾಗಿದೆ. ಇಂತಹ ಭಾಷಣವನ್ನು ದಯಪಾಲಿಸುದುದಕ್ಕಾಗಿ ನಾವೆಲ್ಲರೂ ಅವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸಬೇಕಾದ್ದು ನಮ್ಮಗಳ ಮುಖ್ಯ ಕರ್ತವ್ಯ. ಆದ್ದರಿಂದ ಸರ್ವರೂ ಏಕಕಂಠದಿಂದ ಈ ಸೂಚನೆಯನ್ನು ಅನುಮೋದಿಸಬೇಕೆಂದು ತಿಳಿಸಿ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ.

# ಸರ್ಕಾರಿ ನೌಕರರ ಅವ್ಯವಸ್ಥೆ ಕುರಿತು

5-7-1952

ಶ್ರೀ ಕೆ.ವಿ. ಶಂಕರಗೌಡರು(ಮಂಡ್ಯ)- ಸ್ವಾಮಿ ನನಗೆ ನಂಜನಗೂಡು ಸಬ್‌ಡಿವಿಜನ್ನಿನಲ್ಲಿ ಕಾಲೇಜು ಬೇಡವೆಂಬ ಅಭಿಪ್ರಾಯವಿಲ್ಲ. ಈಗ ತಂದಿರುವ ಖೋತಾ ನಿರ್ಣಯಕ್ಕೆ ಸಂಪೂರ್ಣ ಸಹಾನೂಭೂತಿಯಿದ್ದರೂ ಈಗಾಗಲೇ ಪ್ರಾರಂಭವಾಗಿರುವ ಕಾಲೇಜುಗಳು ಯಾವ ಸ್ಥಿತಿಯಲ್ಲಿ ಕೆಲಸ ಮಾಡುತ್ತಿವೆ, ಅಲ್ಲಿಗೆ ಏನು ಅನುಕೂಲ ಕಲ್ಪಿಸಿಕೊಟ್ಟಿದ್ದಾರೆ ಎಂಬ ದೃಷ್ಟಿಯಿಂದ ಇದನ್ನು ವಿರೋಧಿಸಬೇಕಾಗಿದೆ ದೇಶದಲ್ಲಿ ಎಲ್ಲಾ ಕಡೆಗಳಲ್ಲೂ ಅದರಲ್ಲೂ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಭ್ಯಾಸದ ಸೌಕರ್ಯ ಹೆಚ್ಚಾಗಿರಬೇಕೆಂದು ಹೇಳುವುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಈ ದೃಷ್ಟಿಯಿಂದ ಸರ್ಕಾರದವರು ನಾಲ್ಕೈದು ವರ್ಷಗಳಿಂದ ಜಿಲ್ಲಾ ಹೆಡ್‌ಕ್ವಾರ್ಟರ್ಸ್‌ಗಳಲ್ಲೂ ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಆದರೆ ಈ ದಿವಸ ಕಾಲೇಜುಗಳಲ್ಲಿರುವ ವ್ಯವಸ್ಥೆ ಮತ್ತು ಅವುಗಳ ಸ್ಥಿತಿ ತೀರಾ ಶೋಚನಿಯವಾಗಿವೆ. ಕಾಲೇಜು ನಡೆಸುವುದಕ್ಕೆ ಕಟ್ಟಡವಿಲ್ಲ. ಲ್ಯಾಬೊರೇಟರಿಯಿಲ್ಲ, ಎಕ್ವಿಪ್‌ಮೆಂಟ್ ಇಲ್ಲ, ಕಾಲೇಜುಗಳನ್ನೇನೋ ಸ್ಥಾಪನೆ ಮಾಡುತ್ತಿದ್ದಾರೆ ವಿದ್ಯಾರ್ಥಿಗಳನ್ನು ತರಬೇತು ಮಾಡುವುದಕ್ಕೆ ಸರಿಯಾದ ಅನುಕೂಲಗಳಿಲ್ಲ. ಸರ್ಕಾರದವರು ಅನುಸರಿಸುತ್ತಿರುವ ನೀತಿಯೂ ಕೂಡ ಸಮರ್ಪಕವಾಗಿಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ. ಏಕೆಂದರೆ ಬೆಂಗಳೂರು ಮೈಸೂರುಗಳಲ್ಲಿ ಎಷ್ಟು ಕಾಲೇಜುಗಳನ್ನು ಪ್ರಾರಂಭಿಸಬೇಕಾದರೂ ಸರ್ಕಾರದವರೇ ಮಾಡಬೇಕೆ ಹೊರತು ಸಾರ್ವಜನಿಕರು ಮಾಡಬೇಕಾದ ಸಂಪ್ರದಾಯವಿಲ್ಲ. ಸಾರ್ವಜನಿಕರು ಅಲ್ಲಿ ಬಂದು ಸ್ಥಾಪನೆ ಮಾಡುವುದಿಲ್ಲ. ಸರ್ಕಾರದವರು ಪಟ್ಟಣಗಳಲ್ಲಿ ಕಾಲೇಜುಗಳನ್ನು ಪ್ರಾರಂಭಿಸಲು ಸಿದ್ದರಾಗಿರುತ್ತಾರೆ. ಅದೇ ಗ್ರಾಮಾಂತರಗಳಲ್ಲಿ ಅಥವಾ ಜಿಲ್ಲಾ ಹೆಡ್‌ಕ್ವಾರ್ಟಗಳಲ್ಲಿ ಪ್ರಾರಂಭಿಸುವುದಕ್ಕೆ ಇಷ್ಟು ಸಹಾಯಸಾರ್ವಜನಿಕರು ಕೊಟ್ಟೇಕೊಡಬೇಕೆಂದು ಒತ್ತಾಯ ಮಾಡುವ ನೀತಿ ಸರಿಯಿಲ್ಲ. ತಮಗೆ ಗೊತ್ತಿರುವ ಹಾಗೆ ಬೆಂಗಳೂರು ಮೈಸೂರುಗಳಲ್ಲಿ ಎಷ್ಟೋ ಕಾಲೇಜುಗಳಿವೆ. ಯಾವ ಕಾಲೇಜು ಕಟ್ಟಡಕ್ಕೂ ಅಲ್ಲಿಯ ಪ್ರದೇಶದ ಜನರನ್ನು ಹಣ ಒದಗಿಸಿ ಎಂದು ಒತ್ತಾಯ ಮಾಡಿಲ್ಲ. ಆದರೆ ಇತರ ಕಡೆ ಜಿಲ್ಲೆಗೆ ಇಷ್ಟು ಹಣ ಕೊಡಬೇಕು, ಇಲ್ಲದಿದ್ದರೆ ಕಟ್ಟಡ ಆಗುವುದಿಲ್ಲ ಎಂದು ವಿಧಿಸಿ ಈ ದಿವಸ ಜಿಲ್ಲೆಗಳಲ್ಲಿ ಕಟ್ಟಡ ಕಟ್ಟಲು ಕಾರ್ಯಕ್ರಮ ತೆಗೆದುಕೊಂಡಿಲ್ಲ. ಹೀಗಾಗಿ ಕಾಲೇಜು ಪ್ರಾರಂಭಿಸಿದ್ದರೂ ಅಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳ ಸ್ಥಿತಿಯನ್ನು ನೋಡಿದರೆ ತುಂಬಾ ತಲೆ ತಗ್ಗಿಸುವ ಪ್ರಸಂಗವಿದೆ. ವಿದ್ಯಾರ್ಥಿಗಳಿಗೆ ಅಲ್ಲಿ ಹಲವು ಪಾಠ ಪ್ರವಚನಗಳು ಸಹ ಸರಿಯಾಗಿ ನಡೆಯದೆ ಅವರ ದರ್ಜೆ ಹೀನಸ್ಥಿತಿಯಲ್ಲಿದೆ.

ಶ್ರೀ ಎಂ. ಲಿಂಗಣ್ಣನವರು– ಆ ದೃಷ್ಟಿಯಿಂದ ವಿರೋಧಿಸುತ್ತಿದ್ದಾರೋ ಅಥವಾ ಕೊಡಲೇಬೇಡಿ ಎಂದು ಹೇಳುತ್ತಾರೋ.

ಶ್ರೀ ಕೆ.ವಿ. ಶಂಕರಗೌಡರು– ಹೇಳುವುದನ್ನು ಸಾವಧಾನದಿಂದ ಕೇಳಿದರೆ ಗೊತ್ತಾಗುತ್ತದೆ. ಈ ಪರಿಸ್ಥಿತಿ ಎಲ್ಲಿಯವರೆಗೆ ಇರುತ್ತದೋ ಅಲ್ಲಿಯವರಗೂ ಹೊಸ ಕಾಲೇಜುಗಳನ್ನು ಪ್ರಾರಂಭಿಸುವುದು ಬೇಡ. ಪ್ರಾರಂಭಿಸಿದ ಮೇಲೆ ದಕ್ಷತೆಯಿಂದ ನಡೆಸಿ ಸರಿಯಾಗಿ ಪರಿವರ್ತನೆ ಮಾಡುವುದಕ್ಕೆ ತಕ್ಕ ಅನುಕೂಲ ಮತ್ತು ಸೌಲಭ್ಯಗಳೇನು ಬೇಕೋ ಅವನ್ನು ಕಲ್ಪಿಸಿ ಕೊಡುವುದಕ್ಕೆ ಅವಕಾಶ ಮಾಡಬೇಕು. ಹಾಗೆ ಮಾಡಲು ಶಕ್ತಿಯಿಲ್ಲದಿದ್ದರೆ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಗಿದೆ ಎಂದು ಕಾಲೇಜು ತೆರೆಯುವ ನೀತಿ ಸರಿಯಲ್ಲ, ಹಾಗೆ ತೆರೆಯುವುದು ಬೇಡ ಎಂಬುದೇ ನನ್ನ ವಾದ. ನಂಜನಗೂಡು ಸಬ್ ಡಿವಿಜನ್‌ಗೆ ಕಾಲೇಜು ಬೇಡವೆಂದು ನಾನು ಹೇಳುವುದಿಲ್ಲ. ಕಾಲೇಜನ್ನು ಕೊಡಬಹುದು. ಆದರೆ ನಾನು ಸೂಚಿಸಿರುವ ನ್ಯೂನಾತಿರಿಕ್ತಗಳನ್ನು ಮೊದಲು ಸರಿಪಡಿಸಿ ಆಮೇಲೆ ಸರ್ಕಾರ ಏನನ್ನು ಬೇಕಾದರೂ ಅನುಕೂಲಪಡಿಸಿಕೊಡಲಿ. ಈಗ ಪ್ರಾರಂಭಿಸಿರುವ ಕಾಲೇಜುಗಳಿಗೆ ಅನುಕೂಲವಿಲ್ಲದಿರುವಾಗ ಹೊಸದಾಗಿ ಕಾಲೇಜು ಪ್ರಾರಂಭಿಸಿ ವಿದ್ಯಾರ್ಥಿಗಳ ಮಟ್ಟವನ್ನು ಕೆಳಕ್ಕೆ ಹೋಗುವ ಹಾಗೆ ಮಾಡಬಾರದು. ಈ ಉದ್ದೇಶದಿಂದ ಈ ಖೋತಾ ನಿರ್ಣಯವನ್ನು ವಿರೋಧಿಸುತ್ತೇನೆ.

(Sri P.R. Ramaiya rose)

**Mr. Deputy Speaker** - Considering that this is purely a local subject and that there are many other subjects on which the Hon'ble Member Sri Ramaiya may give his valuable suggestions later, I would request the Hon'ble Education Minister to reply.

ಶ್ರೀ ಎ.ಜಿ. ರಾಮಚಂದ್ರರಾಯರು (ನ್ಯಾಯಾಂಗ ಮತ್ತು ವಿದ್ಯಾಶಾಖೆಗಳ ಮಂತ್ರಿಗಳು)– ನಮ್ಮ ಮುಂದಿರುವ ಪ್ರಶ್ನೆ ನಂಜನಗೂಡಿಗೆ ಇಂಟರ್‌ಮೀಡಿಯಟ್ ಕಾಲೇಜು ಕೊಡುವ ವಿಷಯಕ್ಕೆ ಸಂಬಂಧಪಟ್ಟಿದೆ. ಈ ಸಂದರ್ಭದಲ್ಲಿ ಮಾತನಾಡುತ್ತಾ ಅಕ್ಷರಸ್ಥರ ಸಂಖ್ಯೆ ಮೈಸೂರು ಜಿಲ್ಲೆಯಲ್ಲಿ ಬಹಳ ಕಡಿಮೆಯಾಗಿದೆಯೆಂಬ ಕಾರಣವನ್ನು ಹೇಳಿದ್ದಾರೆ. ಸಾಮಾನ್ಯವಾಗಿ ಅಕ್ಷರಸ್ಥರ ಸಂಖ್ಯೆ ಕಡಿಮೆಯಿರುವುದಕ್ಕೂ ಇಂಟರ್‌ಮೀಡಿಯಟ್ ಕಾಲೇಜಿಗೂ ನೇರವಾದ ಸಂಬಂಧವಿರುವುದಿಲ್ಲ.

ಎರಡನೆಯದಾಗಿ, ಮೈಸೂರು ಜಿಲ್ಲೆಯ ಡಿಸ್ಟ್ರಿಕ್ಟ್ ಬೋರ್ಡಿನವರು ಬಹಳ ಮುತುವರ್ಜಿ ವಹಿಸಿ ಅನೇಕ ಹೈಸ್ಕೂಲುಗಳನ್ನು ಸ್ಥಾಪಿಸಿದ್ದಾರೆ. ಮತ್ತು ಖಾಸಗೀ ಜನರೂ

ಕೂಡ ಬಹಳ ಪ್ರೋತ್ಸಾಹ ಕೊಟ್ಟಿದ್ದಾರೆ. ಅದಕ್ಕಾಗಿ ಸರ್ಕಾರದವರು ಅಭಿನಂದನೆ ಸಲ್ಲಿಸಬೇಕಾಗಿದೆ. ಆದರೆ ಈ ಪ್ರಶ್ನೆಯನ್ನು ನಾವು ಇತ್ಯರ್ಥ ಮಾಡಬೇಕಾದರೆ ಈಗಾಗಲೇ ಸರ್ಕಾರದ ಮೇಲೆ ಮತ್ತು ಮಹಾಜನರ ಮೇಲೆ ಹೆಚ್ಚಾಗಿ ಈ ಸಭೆಯ ಮೇಲಿರುವ ಜವಾಬ್ದಾರಿ ಯಾವುದೆಂದರೆ, ಅದು ಪ್ರೈಮರಿ ವಿದ್ಯಾಭ್ಯಾಸ ಅದನ್ನು ಸರ್ವರಿಗೂ ಒದಗಿಸತಕ್ಕದ್ದು ಮೊದಲನೆಯ ಕರ್ತವ್ಯವಾಗಿದೆ. ಅದನ್ನು ನಿರ್ವಹಿಸುತ್ತಿದ್ದೇವೆ, ಮಿಕ್ಕವುಗಳ ನಿರ್ವಾಹಕ್ಕೆ ಬೇಕಾದ ಹಣ ಮತ್ತು ಅನುಕೂಲಗಳನ್ನು ಏರ್ಪಡಿಸುವುದೇ ಸೂಕ್ತವೇ ಎಂದು ಯೋಚನೆ ಮಾಡಿದಲ್ಲಿ ಮೊದಲು ಉಚಿತವಾಗಿ ಒತ್ತಾಯಪೂರ್ವಕವಾದ ಪ್ರೈಮರಿ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ಕೊಟ್ಟ ನಂತರ ಇತರ ಕಡೆಗೆ ಗಮನಕೊಡುವುದು ಸೂಕ್ತ ಎಂಬುದು ಸರ್ಕಾರದ ಮನೋಭಾವ ಮತ್ತು ಈ ಸಭೆಯ ಮನೋಭಾವ ಎಂದು ಕಾಣುತ್ತದೆ. ಡಿಸ್ಟ್ರಿಕ್ಟ್ ಬೋರ್ಡಿನವರು ಯಾವಾಗ ಹೈಸ್ಕೂಲುಗಳನ್ನು ಪ್ರಾರಂಭಿಸಿದರೋ ಆಗ ಖಾಸಗಿ ಜನರ ಸಹಾಯ ಪಡೆದು ಅವುಗಳನ್ನು ಸುವ್ಯವಸ್ಥಿತವಾದ ರೀತಿಯಲ್ಲಿ ನಡೆಸಿಕೊಂಡು ಬರುವುದು ಅವರ ಕರ್ತವ್ಯ. ಅದೇ ರೀತಿ ಅವರು ಸ್ಥಾಪಿಸಿದ ಕಾಲೇಜುಗಳನ್ನು ಕೂಡ ಸರಿಯಾಗಿ ನಡೆಸಿಕೊಂಡು ಬರಲು ಸರಿಯಾದ ಗಮನ ಕೊಡಬೇಕಾದ್ದು ತಮ್ಮ ಜವಾಬ್ದಾರಿ ಎಂಬುದನ್ನು ಮರೆತು ಸರ್ಕಾರದ ಮೇಲೆ ಹೊರೆ ಹೊರಿಸುವುದು ಸೂಕ್ತವಲ್ಲ ಎಂದು ಈ ಸಂದರ್ಭದಲ್ಲಿ ಹೇಳದೆ ವಿಧಿಯಿಲ್ಲ. ಮಾನ್ಯ ಸದಸ್ಯರಾದ ಶ್ರೀ ಶಂಕರೇಗೌಡರು ಹೇಳುವ ಹಾಗೆ, ಈಗಿರುವ ಕಾಲೇಜುಗಳಿಗೆ ಸರಿಯಾದ ಸಲಕರಣೆಗಳಿಲ್ಲದೆ ಬಹಳ ತೊಂದರೆಯಾಗಿರುವುದು ನಿಜ. ಅದನ್ನು ಅವಶ್ಯಕವಾಗಿ ಸರ್ಕಾರದವರೂ, ಮಹಾಜನರೂ ಗಮನಿಸಬೇಕು.

## ಆಹಾರ ನೀತಿ ಕುರಿತು

ಶ್ರೀ ಕೆ.ವಿ. ಶಂಕರಗೌಡರು (ಮಂಡ್ಯ)– ಅಧ್ಯಕ್ಷರೇ ಸ್ವಾಮಿ, ಈ ಆಹಾರಾಭಾವವನ್ನು ದೀರ್ಘಾವಧಿಯಲ್ಲಿ ನಾವು ಯಾವ ರೀತಿಯಲ್ಲಿ ನೀಗಬಹುದೆಂಬ ಬಗ್ಗೆ ಪೀಠಿಕಾರೂಪವಾಗಿ ಒಂದೆರಡು ಅಂಶಗಳನ್ನು ತಿಳಿಸಿ ಅನಂತರ ನಾನು ಪ್ರಸ್ತುತ ಆಹಾರ ಪಾಲಿಸಿ ವಿಷಯದಲ್ಲಿ ಕೆಲವು ಸಲಹೆಗಳನ್ನೀಯ ಬಯಸುತ್ತೇನೆ.

ಇಂದು ನಮ್ಮ ದೇಶದಲ್ಲಿ ಉಂಟಾಗಿರತಕ್ಕ ಆಹಾರಾಭಾವ ಪರಿಸ್ಥಿತಿಗೆ ಮುಖ್ಯವಾದ ಕಾರಣಗಳು ಎರಡು. ಮೊದಲನೆಯ ಕಾರಣ ಪ್ರಜಾ ಸಂಖ್ಯೆ ದಿನದಿನಕ್ಕೂ ಹೆಚ್ಚುತ್ತಿರುವುದು. ಎರಡನೆಯದು ಹೀಗೆ ಹೆಚ್ಚುತ್ತಿರುವ ಪ್ರಜಾಸಂಖ್ಯೆಗೆ ಅನುಗುಣವಾಗಿ ಆಹಾರೋತ್ಪತ್ತಿ ಆಗದೆ ಇರುವುದು. ಆಹಾರ ಉತ್ಪತ್ತಿ ಹೆಚ್ಚಾಗದಿರುವುದಕ್ಕೆ ನಾನಾ ಕಾರಣಗಳಿವೆ. ಅದರಲ್ಲಿ ಮುಖ್ಯ ಕಾರಣಗಳೆಂದರೆ (1) ರೈತನಿಗೆ ಇದುವರೆಗೆ ಜಾರಿಯಲ್ಲಿದ್ದ ಆಹಾರ ನಿಯಂತ್ರಣ ಪದ್ಧತಿಯಿಂದುಂಟಾದ ಕಿರುಕುಳ, (2) ಆತನ ಜೀವನದ ಬಗ್ಗೆ ನಾಗರಿಕರು ಎಂದು ಹೇಳಿಕೊಳ್ಳುವ ಜನರಿಗೆ ಇರುವ ತಿರಸ್ಕಾರ ಮನೋಭಾವ, (3) ಶರೀರ ಶ್ರಮದ ವಿಚಾರವಾಗಿ ಮುಂದುವರಿದ

ಜನರಲ್ಲಿರುವ ಒಂದು ತಾತ್ಸಾರ ಮನೋಭಾವ, ಮತ್ತು (4) ರೈತನಿಗೆ ಆತನ ಕಷ್ಟಕ್ಕೆ ತಕ್ಕ ಪ್ರತಿಫಲ ಎಂದರೆ ಆತನ ಉತ್ಪತ್ತಿಗೆ ಒಂದು ನಿಖರವಾದ ಬೆಲೆ ಸಿಕ್ಕದೆ ಇರುವುದು. ಈ ನಾಲ್ಕೂ ಬಹು ಮುಖ್ಯ ಕಾರಣಗಳಾಗಿದೆ.

ಈ ನಾಲ್ಕು ವಿಷಯಗಳಲ್ಲಿ ಮೂಲಭೂತ ಬದಲಾವಣೆಯಾಗದಿದ್ದರೆ ಆಹಾರದ ಉತ್ಪತ್ತಿ ಹೆಚ್ಚುವುದಕ್ಕೆ ಸಾಧ್ಯವಿಲ್ಲ ಎಂಬುದು ನನ್ನ ಖಚಿತವಾದ ಅಭಿಪ್ರಾಯ. ಆದ್ದರಿಂದ ರೈತನ ಜೀವನದ ಬಗ್ಗೆ ಗೌರವ ಮತ್ತು ಪುರಸ್ಕಾರ ಮನೋಭಾವ ಬೆಳೆಯಬೇಕು. ಅವನು ಬೆಳೆಯುವ ಬೆಳೆಗಳಿಗೆ ಹೆಚ್ಚು ಬೆಲೆ ದೊರಕಬೇಕು, ಈ ಸಭೆಗೆ ಗೊತ್ತಿರುವ ಹಾಗೆ ನಮ್ಮ ದೇಶದಲ್ಲಿ ನೂರಕ್ಕೆ ಸುಮಾರು 80 ಜನರು ವ್ಯವಸಾಯದ ಉದ್ಯೋಗವನ್ನವಲಂಬಿಸಿದ್ದಾರೆ. ಬಾಕಿ ಇರುವ 20 ಜನರ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕೆ ಅನೇಕ ಸಂಸ್ಥೆಗಳಿವೆ ಮತ್ತು ಸರ್ಕಾರದವರೂ ಅನೇಕ ಕಾನೂನುಗಳನ್ನು ಮಾಡಿದ್ದಾರೆ. ಆದರೆ ಈ 80 ಜನರಿಗೆ ಯಾವ ಸಂಸ್ಥೆಯೂ ಅಲ್ಲ, ಕಾನೂನುಗಳೂ ಇಲ್ಲ. ಆದ್ದರಿಂದ ಅವರ ಸ್ಥಿತಿ ಅಷ್ಟು ಸಮರ್ಪಕವಾಗಿಲ್ಲ. ಅವರು ವ್ಯವಸಾಯದಿಂದ ಏನು ಉತ್ಪತ್ತಿಮಾಡುತ್ತಾರೋ ಅದರಿಂದ ತಮ್ಮ ಜೀವಮಾನವನ್ನು ಕಳೆಯಬೇಕಾಗಿದೆ. ಅಲ್ಲದೆ ಅವರ ಮಕ್ಕಳು ಮರಿಗಳ ಪೋಷಣೆ, ಅವರ ವಿದ್ಯಾಭ್ಯಾಸ ಮುಂತಾದ್ದನ್ನೆಲ್ಲವನ್ನೂ ಅವರ ವ್ಯವಸಾಯದ ಉತ್ಪತ್ತಿಯಲ್ಲೇ ನೋಡಿಕೊಳ್ಳಬೇಕು. ಸಂಸ್ಥಾನದಲ್ಲಿ ಅವರಿಗೆ ಸಾಕಷ್ಟು ಪ್ರೋತ್ಸಾಹವಿಲ್ಲದೆ ಉತ್ಪತ್ತಿ ಹೆಚ್ಚಿಸಬೇಕೆಂಬ ಆಕಾಂಕ್ಷೆ, ಶ್ರದ್ಧೆ ಅವರಲ್ಲಿ ಕಡಿಮೆಯಾಗುತ್ತಿದೆ. ಇಂದು ಹಳ್ಳಿಗಳಲ್ಲಿ ಸಾಕಷ್ಟು ಅನುಕೂಲತೆಗಳು ಇಲ್ಲದೆ ಇರುವುದರಿಂದ ಜನರು ಪಟ್ಟಣಕ್ಕೆ ವಲಸೆ ಬರುವುದಕ್ಕೆ ಮುಖ್ಯ ಕಾರಣವಾಗಿದೆ. ಆದ್ದರಿಂದ ಸರ್ಕಾರದವರು ಈ ವಿಚಾರವನ್ನು ತೀವ್ರವಾಗಿ ಪರಿಶೀಲಿಸಬೇಕು. ರೈತನ ಜೀವನೋದ್ಧಾರ ವ್ಯವಸಾಯವೇ ಆಗಿರುವುದರಿಂದ ಸಾಕಾದಷ್ಟು ಉತ್ಪತ್ತಿ ಬರುವಂತೆ ಅವನಿಗೆ ಬೆಲೆ ಗ್ಯಾರಂಟಿ ಮಾಡಿಕೊಡಬೇಕು. ಅಲ್ಲದೆ ಬೆಲೆ ದೊರಕುವ ಹಾಗೆ ಮಾಡಲೇಬೇಕು.

ಎರಡನೆಯದಾಗಿ, ಆಹಾರದ ಅಭಾವಕ್ಕೆ ಸೂಕ್ಷ್ಮ ಕಾರಣ ಒಂದಿದೆ. ಅದನ್ನು ದೀರ್ಘವಾಗಿ ನಾವು ಯೋಚನೆ ಮಾಡಬೇಕಾಗಿದೆ. ಅದೇನೆಂದರೆ ಪರದಾಸ್ಯದ ಅಡಿಯಲ್ಲಿ ಸಿಕ್ಕಿ ನರಳಿದ ಜನತೆಗೆ ಇಂದು ದಾಸ್ಯಮನೋಭಾವ ಅಂಟಿಕೊಂಡಿದೆ. ಯಾವುದಾದರೂ ಕೊರತೆ, ಅಭಾವ ಬಂದಾಗ ಅದನ್ನು ನೀಗುವುದಕ್ಕೆ ತನ್ನ ಸ್ವಪ್ರಯತ್ನ ಏನಿದೆ, ತನ್ನ ಸ್ವಸಾಮರ್ಥ್ಯದಿಂದ ಎಷ್ಟರಮಟ್ಟಿಗೆ ಆ ಅಭಾವ ನೀಗಬಹುದು ಎಂಬುದನ್ನು ಯೋಚಿಸಲಾರದಷ್ಟು ಜಡತೆಯಿಂದ ಕೂಡಿದೆ ಜನತೆ. ದೇಶದಲ್ಲಿ ಆಹಾರದ ಅಭಾವವಿರುವುದನ್ನು ಯಾವ ರೀತಿಯಲ್ಲಿ ನಿವಾರಿಸಬಹುದು, ಅದಕ್ಕೆ ಯಾವ ರೀತಿಯಾಗಿ ನಾವು ತೆಗೆದುಕೊಳ್ಳುವ ಆಹಾರವನ್ನು ಬದಲಾಯಿಸಬೇಕಾದದ್ದು ಸೂಕ್ತ, ಆಹಾರವನ್ನು ಹೆಚ್ಚಾಗಿ

ಉತ್ಪತ್ತಿ ಮಾಡಿ, ಕೊರತೆಯನ್ನು ಹೇಗೆ ನೀಗಬಹುದು ಸ್ವಪ್ರಯತ್ನ ನಡೆಸುವ ಮನೋಭಾವ ಜನರಲ್ಲಿ ಬೆಳೆದುಬಂದಿಲ್ಲ. ದೇಶದಲ್ಲಿ ಆಹಾರದ ಅಭಾವವಿದೆ, ನಿಜ. ಸರ್ಕಾರ ಸಾಧ್ಯವಾದಷ್ಟು ಪ್ರಯತ್ನಮಾಡಿ ಆಹಾರತಂದು ಕೊಡಬೇಕು. ಅದರ ಜೊತೆಗೆ ತಮ್ಮ ಸ್ವಸಾಮರ್ಥ್ಯ ಮತ್ತು ಸ್ವಪ್ರಯತ್ನವನ್ನು ತೋರುವ ಮನೋಭಾವ ಜನತೆಗೆ ಬರುವಂತೆ ಅವಕಾಶ ತೆಗೆದುಕೊಳ್ಳಬೇಕು. ಜನತೆ ಇಂದು ಮಂತ್ರಿಗಳು ಮನೆಯ ಬಾಗಿಲಿಗೆ ಆಹಾರ ತಂದು ಹಾಕಬೇಕು. ಎಂಬ ಧೋರಣೆ, ಈ ಮನೋಭಾವ ಜನತೆಯ ಮನಸ್ಸಿನಿಂದ ದೂರವಾಗಿ ಕಾರ್ಯಶೀಲತ್ವ ಬರುವಂತೆ ಮಾಡಬೇಕಾದ ತೀವ್ರ ಅಗತ್ಯವಿದೆ. ನಾನು ಮಂತ್ರಿಗಳ ಮನೆಯ ಉದ್ಯಾನವನಗಳನ್ನು ನೋಡಿದ್ದೇನೆ. ಈ ವಿಚಾರಗಳಲ್ಲಿ ವೈಯುಕ್ತಿಕವಾದ ಮತ್ತು ವಿನಯಪೂರ್ವಕವಾದ ಅಭಿಪ್ರಾಯವನ್ನು ಸೂಚಿಸುವುದಾದರೆ-ಸೌಂದರ್ಯೋಪಾಸನೆ ಬೇಕೇ ಬೇಕು, ಸೌಂದರ್ಯ ಪರಮಾತ್ಮನ ಸ್ವರೂಪ, ನಿಜ ಹೇಳಬೇಕಾದರೆ ಉದರೋಪಾಸನೆ ಸುಗಮವಾಗಿ ಸಾಗದೆ ಸೌಂದರ್ಯೋಪಾಸನೆ ಸಾಮಾನ್ಯವಾಗಿ ಸಾಗಲಾರದು. ಆದ್ದರಿಂದ ನಾನು ಮಂತ್ರಿಗಳನ್ನು ಪ್ರಾರ್ಥಿಸುವುದು- ತಮ್ಮ ತೋಟದಲ್ಲಿ, ಸೌಂದರ್ಯಕ್ಕೆ ಚ್ಯುತಿಬಾರದ ರೀತಿಯಲ್ಲಿ, ಯಾವುದಾದರೂ ಒಂದು ಮೂಲೆಯಲ್ಲಿ ಸ್ವಲ್ಪ ಜಾಗವನ್ನಾದರೂ ಮುಡಿಪಾಗಿಟ್ಟು ತರಕಾರಿಯನ್ನು ಮತ್ತು ಒಂದು ಎಮ್ಮೆ ಅಥವಾ ಹಸುವನ್ನು ಸಾಕಿ ಹಾಲು, ಬೆಣ್ಣೆ ಉತ್ಪತ್ತಿಮಾಡಿ ಉಪಯೋಗಿಸಿದರೆ ಬಾಕಿ ಜನರೂ ಅದನ್ನು ನೋಡಿ ಅನುಸರಿಸುವುದಕ್ಕೆ ಸಹಕಾರಿಯಾಗುತ್ತದೆ ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡುತ್ತೇನೆ.

ಶ್ರೀ ಎಚ್. ಸಿದ್ದವೀರಪ್ಪನವರು- ತಮ್ಮ ಸಲಹೆ ಬರುವುದಕ್ಕೆ ಮುಂಚೆಯೇ ತರಕಾರಿ ಬೆಳೆಯುತ್ತಿದೆ. ತಮಗೂ ಒಂದು ದಿವಸ ರುಚಿ ತೋರಿಸೋಣ.

ಶ್ರೀ ಕೆ.ವಿ. ಶಂಕರಗೌಡರು (ಮಂಡ್ಯ)- ಬಹಳ ಸಂತೋಷ, ಅದು ಹೆಮ್ಮೆ ಪಡುವ ವಿಚಾರ. ಆದರೆ ಜವಾನರಿಂದ ಬೆಳೆಸಬಾರದು, ತಮ್ಮ ಖುದ್ದು ದೇಹ ಶ್ರಮದಿಂದ ಬೆಳೆಸಬೇಕು. ಈ ಮನೋಭಾವ ಜನರಿಗೂ ಬರಬೇಕು. ಜನರಿಗೆ ಇರುವ ಮನೋಭಾವ, ಮನೆ ಬಾಗಿಲಿಗೆ ದವಸ ಧಾನ್ಯ ತಂದುಕೊಡಬೇಕೆಂಬ ಮನೋಭಾವ ಖಂಡಿತ ಹೋಗಬೇಕು, ಮತ್ತು ಸರ್ಕಾರವೂ ಕೂಡ ಅದಕ್ಕೆ ತಕ್ಕ ಕಾರ್ಯಕ್ರಮ ಹಾಕಿ ಅನುಕೂಲತೆ ಕಲ್ಪಿಸಿಕೊಡಬೇಕು. ತರಕಾರಿ ಬೆಳೆಯಲು ಜಾಗ ಎಲ್ಲ ಜನರಿಗೂ ಎಲ್ಲಿ ಸಿಕ್ಕುತ್ತದೆ ಎಂದು ಕೇಳಬಹುದು. ಎಲ್ಲ ಕಡೆ ಇಲ್ಲದೇ ಹೋದರೆ ಅನೇಕ ಕಡೆ ಜಾಗ ಇದೆ. ಉದಾಹರಣೆ ಕೊಡುವುದಾದರೆ, ಕೈಗಾರಿಕಾ ಕ್ಷೇತ್ರಗಳಾದ ಭದ್ರಾವತಿ ಕಬ್ಬಿಣದ ಕಾರ್ಖಾನೆಯ ಬಳಿ, ಮಂಡ್ಯದ ಸಕ್ಕರೆ ಕಾರ್ಖಾನೆಯ ಬಳಿ ಜಮೀನಿಗೆ ಅಭಾವವಿಲ್ಲ. ಅಂಥ ಕಡೆ ಸಾಮೂಹಿಕ ವ್ಯವಸಾಯ ಪದ್ಧತಿಯ ರೀತಿ ಕಾರ್ಮಿಕರೂ ಅಧಿಕಾರಿಗಳೂ ಸಹಕರಿಸಿ ತರಕಾರಿ, ಪುಷ್ಟಿಕರವಾದ ಹಣ್ಣು ಬೆಳೆಯುವುದಕ್ಕೆ ಅವಕಾಶವಿದೆ. ಹಾಗೆ ಪ್ರಾರಂಭಿಸಿದರೆ ಜನರೂ ಅದನ್ನು ನೋಡಿ

ಅನುಸರಿಸಲು ಅವಕಾಶವಾಗುತ್ತದೆ. ಎಷ್ಟೋ ಆಹಾರದ ಅವಕಾಶವಾಗುತ್ತದೆ. ಎಷ್ಟೋ ಆಹಾರದ ಅಭಾವವನ್ನು ನೀಗುವುದಕ್ಕೆ ಇದರಿಂದ ಅವಕಾಶವಾಗುತ್ತದೆ ಎಂದು ಈ ಸಭೆಯಲ್ಲಿ ಸೂಚಿಸಲಿಚ್ಛಿಸುತ್ತೇನೆ.

ಈಗ ಪ್ರಸ್ತುತ ಆಹಾರ ನೀತಿಯ ವಿಚಾರದಲ್ಲಿ ಒಂದೆರಡು ವಿಷಯಗಳನ್ನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಪಕ್ಕದ ಮದ್ರಾಸಿನಲ್ಲಿ ಆಹಾರದ ಹತೋಟಿಯನ್ನು ಪೂರ್ಣವಾಗಿ ರದ್ದುಮಾಡಿರುವುದರಿಂದ ನಮ್ಮ ಸಂಸ್ಥಾನದಲ್ಲೂ ಪೂರ್ತಿಯಾಗಿ ಯಾಕೆ ರದ್ದುಮಾಡಬಾರದು ಎನ್ನುವ ಮನೋಭಾವನೆ ಅನೇಕರಲ್ಲಿರಬಹುದು. ಆ ವಿಚಾರದಲ್ಲಿ ಅನೇಕ ಮಾನ್ಯ ಸ್ನೇಹಿತರು ಒಂದು ಎಚ್ಚರಿಕೆಯನ್ನು ಕೊಟ್ಟಿದ್ದಾರೆ. ಸಮಾಜದಲ್ಲಿ ಈ ಒಂದು ಅವಕಾಶವನ್ನು ದುರುಪಯೋಗಪಡಿಸಿಕೊಂಡು ಜನರಿಗೆ ತೊಂದರೆಯನ್ನುಂಟುಮಾಡುವ ಸಮಾಜ ಘಾತುಕರಿದ್ದಾರೆ. ಪೂರ್ತಿಯಾಗಿ ಹತೋಟಿ ಸಡಿಲವಾದಾಗ ಈ ಸಮಾಜ ಘಾತುಕರು ತಮ್ಮ ಚತುರೋಪಾಯದಿಂದ ಧಾನ್ಯಗಳ ಕೃತಕ ಅಭಾವ ಉಂಟುಮಾಡುವುದುದಕ್ಕೆ ಅವಕಾಶವಿದೆ. ಈ ದೃಷ್ಟಿಯಿಂದಲೂ ಮತ್ತು ಮಳೆ ಬೆಳೆ ಸಕಾಲದಲ್ಲಿ ಆಗಿಲ್ಲವಾದುದರಿಂದಲೂ ತೀವ್ರ ಎಚ್ಚರಿಕೆಯಿಂದ ಕಾದು ನೋಡುವುದು ಒಳ್ಳೆಯದು ಮತ್ತು ಮುಂದೆ ಹೇಗಾಗುವುದು ಎಂಬುದನ್ನು ಗಮನಿಸಿ ಸ್ವಲ್ಪ ನಿಧಾನವಾಗಿ ಹೆಜ್ಜೆಯಿಡುವುದು ಸೂಕ್ತವೆಂದು ಸರ್ಕಾರಕ್ಕೆ ಸೂಚಿಸುತ್ತೇನೆ.

ಇನ್ನು ಆಹಾರ ಪದಾರ್ಥಗಳನ್ನು ಮಾರುವುದಕ್ಕೆ ಲೈಸೆನ್ಸ್ ಕೊಡುವ ವಿಚಾರ. ಇದು ಬಹಳ ಮುಖ್ಯವಾದುದು. ಕಾಳಸಂತೆ ಪ್ರಾರಂಭವಾಗುವುದು ಇಲ್ಲಿಯೇ. ಇದಕ್ಕೆ ಅವಕಾಶವಿಲ್ಲದಂತೆ ದೀರ್ಘವಾಗಿ ಯೋಚನೆಮಾಡಿ, ಹೇಗೆ ಲೈಸನ್ಸ್ ಕೊಡಬೇಕು, ಯಾರಿಗೆ ಕೊಡಬೇಕು, ಏನು ದರವಿರಬೇಕು, ಒಬ್ಬ ಲೈಸೆನ್ಸ್ ಪಡೆದ ವ್ಯಾಪಾರಿ ಎಷ್ಟು ಪರಿಮಾಣದಲ್ಲಿ ಧನ್ಯ ಶೇಖರಣೆಮಾಡಬಹುದು, ಆ ನಿಗದಿಯಾದ ಪರಿಮಾಣಕ್ಕಿಂತ ಹೆಚ್ಚಿಗೆ ಶೇಖರಿಸಬಹುದಾದ ತಪ್ಪಿತಸ್ಥರಿಗೆ ಏನು ಉಗ್ರ ಶಿಕ್ಷೆ ವಿಧಿಸಬಹುದು-ಇತ್ಯಾದಿ ಇತ್ಯಾದಿ ವಿಷಯಗಳನ್ನು ದೀರ್ಘವಾಗಿ ಆಲೋಚಿಸಿ ಲೈಸನ್ಸ್ ಕೊಡುವ ಪದ್ಧತಿಯನ್ನು ಜಾರಿಗೆ ತರಬೇಕೆಂದೂ ಈಗಿರುವ ಪದ್ಧತಿಯನ್ನು ಇನ್ನೂ ಸ್ವಲ್ಪಕಾಲ ಮುಂದುವರಿಸಿಕೊಂಡು ಬರುವುದು ಒಳ್ಳೆಯದೆಂದೂ ಮನವಿ ಮಾಡಿ ನಾನು ಮಾತನಾಡುವುದಕ್ಕೆ ಅವಕಾಶ ಕೊಟ್ಟ ತಮಗೆ ವಂದಿಸುತ್ತೇನೆ.

# ಗ್ರಾಮೀಣಾಭಿವೃದ್ಧಿ: ಕೆ.ವಿ.ಎಸ್. ಮಾಡಿದ ಭಾಷಣ

## 9-7-1952

" ಶ್ರೀ ಕೆ.ವಿ. ಶಂಕರಗೌಡರು – ಗ್ರಾಮೀಣಾಭಿವೃದ್ಧಿ ವಿಚಾರ ಮಾತನಾಡುವಾಗ ಅನೇಕ ವಿಧವಾದ ಭಾವನೆಗಳು ಇರುವುದು ಸಹಜ. ಏಕೆಂದರೆ ಈ ದಿವಸ ನಮ್ಮ ಹಳ್ಳಿಗಳಲ್ಲಿರತಕ್ಕ ಶೋಚನೀಯ ಪರಿಸ್ಥಿತಿ, ಅಲ್ಲಿರತಕ್ಕ ಜೀವನದ ಮಟ್ಟ ಇವುಗಳನ್ನೆಲ್ಲಾ ನೆನೆದು ಯಾವ ರೀತಿ ಅಭಿವೃದ್ಧಿಪಡಿಸಬೇಕು ಎನ್ನುವುದಕ್ಕೆ ವಿಧ ವಿಧವಾದ ಅಭಿಪ್ರಾಯಗಳು ಮತ್ತು ವಿಧವಿಧವಾದ ಭಾವೋದ್ರೇಕ ಮನಸ್ಸಿನಲ್ಲಿ ಬರುವುದು ಸಹಜ. ಇದನ್ನು ಅರಿತು ಹಳ್ಳಿ ಜೀವನ ಸುಖಮಯವಾಗವೇಕು, ಹಳ್ಳಿ ಜೀವನಕ್ಕೆ ನವಚೈತನ್ಯವೊದಗುವಂತೆ ಮಾಡಬೇಕು ಎಂದರೆ ಪ್ರತಿಯೊಂದು ಹಳ್ಳಿಯೂ ಸ್ವಪರಿಪೂರ್ಣತೆಯಿಂದ ಕೂಡಿದಂಥ ಒಂದು ಪ್ರಜಾಪ್ರಭುತ್ವ ಸಂಸ್ಥೆ ಆಗಬೇಕೆಂದು ಮಹಾತ್ಮಾ ಗಾಂಧೀಜಿಯವರು ಹೇಳಿದರು. ಹಳ್ಳಿ ಪ್ರತಿಯೊಂದು ವಿಚಾರದಲ್ಲೂ ಸ್ವಪರಿಪೂರ್ಣವಾಗಿರಬೇಕು. ಹಳ್ಳಿಗೆ ಬೇಕಾದ ಆಹಾರ, ಹಳ್ಳಿಗೆ ಬೇಕಾದ ಬಟ್ಟೆ, ಹಳ್ಳಿಯ ನಿತ್ಯಾಜೀವನಕ್ಕೆ ಉಪಯುಕ್ತವಾದ ಎಲ್ಲಾ ವಿಚಾರಗಳಲ್ಲೂ ಕೂಡ ಸ್ವಪರಿಪೂರ್ಣವಾದ ಪ್ರಜಾಪ್ರಭುತ್ವವನ್ನೊಳಗೊಂಡ ಸಂಸ್ಥೆ ಹಳ್ಳಿಯಾಗಿರಬೇಕೆಂದು ಮಹಾತ್ಮಾಗ್ರಾಂಧೀಜಿಯವರು ಒಂದು ಗುರಿಯನ್ನಿಟ್ಟರು. ಆ ಗುರಿಯನ್ನು ಸಾಧಿಸಬೇಕಾದರೆ ಈಗ ಹಳ್ಳಿಗಳಲ್ಲಿರತಕ್ಕ ವಾತಾವರಣವೇನಿದೆ, ಸಹಜ ಪರಿಸ್ಥಿತಿಯೇನಿದೆ ಎಂಬ ದೃಷ್ಟಿಯಿಂದ ಹೇಳುವುದಾದರೆ, ಇದು ಎಂಥ ಮಹತ್ಕಾರ್ಯ, ಇದನ್ನು ಸಾಧಿಸುವುದಕ್ಕೆ ಎಷ್ಟು ವರ್ಷಗಳು ಬೇಕಾಬಹುದು ಎಂಬುದನ್ನು ನಾವು ಊಹಿಸುವುದಕ್ಕೆ ಸಾಧ್ಯವಿದೆ. ಅದು ಹಳ್ಳಿಗಳಲ್ಲಿರತಕ್ಕವರಿಗೆ ಗೊತ್ತಾಗುತ್ತದೆ. ಇದು ಅಷ್ಟು ಸುಲಭ ಸಾಧ್ಯದ ಕಾರ್ಯವಲ್ಲ. ಏಕೆಂದರೆ, ಹಳ್ಳಿ ಜನರ ತಿಳಿವಳಿಕೆಯ ಮಟ್ಟ ಬಹಳ ಕಡಿಮೆಯಾಗಿದೆ. ಅವರನ್ನು ಒಂದು ಪ್ರಗತಿದಾಯಕ ಮಾರ್ಗದಲ್ಲಿ ತೆಗೆದುಕೊಂಡು ಹೋಗಬೇಕೆಂದರೆ, ರಾಮಾಶ್ವಮೇಧಯಾಗ ಮಾಡಿದ ಹಾಗಾಗುತ್ತದೆ. ಹಿಂದೆ ಯಾವ ಒಂದು ವಾತಾವರಣ, ಯಾವ ಒಂದು ಧಾರ್ಮಿಕ ಬುದ್ಧಿ ಜನರಲ್ಲಿ ಇತ್ತೋ ಅದು ಈಗ ಬಹುಮಟ್ಟಿಗೆ ನಶಿಸಿಹೋಗಿದೆ. ಅದರಲ್ಲೂ ಕೂಡ, ದ್ವೇಷ, ಈರ್ಷೆ, ಅಸೂಯೆಗಳು ಹೆಚ್ಚಿ ಹಳ್ಳಿಯ ಜೀವನವೇ ಕಲಕಿಹೋಗಿದೆ. ಅದನ್ನು ಒಂದು ಗೂಡಿಸಿ ಒಂದು ಪ್ರಗತಿದಾಯಕ ಮಾರ್ಗದಲ್ಲಿ ತೆಗೆದುಕೊಂಡು ಹೋಗಬೇಕಾದರೆ ಕಷ್ಟವಾಗುತ್ತದೆ. ಇದನ್ನು ಯೋಚನೆಮಾಡಬೇಕು. ಹಳ್ಳಿಗಳನ್ನು, ಮಹಾತ್ಮಾಗಾಂಧೀಜಿಯವರು ಅಪ್ಪಣೆಕೊಡಿಸಿದ ಹಾಗೆ, ಒಂದು ಮಾರ್ಗದಲ್ಲಿ ತೆಗೆದುಕೊಂಡು ಹೋಗಬೇಕು ಎಂಬ ಒಂದು ದೊಡ್ಡ ಪ್ರಶ್ನೆ, ವಿಶಾಲವಾದ ಪ್ರಶ್ನೆ ಈ ದಿವಸ ಸಭೆಯ ಮುಂದೆ ಬಂದಿದೆ. ಹಳ್ಳಿಗಳಲ್ಲಿ ಪ್ರತಿ ಸಂಸಾರದ ಸಾಧಾರಣ ಉಪಯೋಗಕ್ಕೆ ದಿನೇ ದಿನೇ ಬೇಕಾಗತಕ್ಕಂಥ ಯಾವ ಯಾವ ಕೆಲಸಕಾರ್ಯಗಳನ್ನು ಮಾಡಬೇಕಾಗಿದೆ ಎಂಬ ಸಂಬಂಧದಲ್ಲಿ ಕೆಲವು ವಿಷಯಗಳನ್ನೊಳಗೊಂಡ ಪ್ರಶ್ನೆ ನಮ್ಮ

ಸಭೆಯ ಮುಂದಿದೆ. ಹಳ್ಳಿ ಜೀವನ ಮತ್ತು ಹಳ್ಳಿಯ ಪ್ರಗತಿಯನ್ನು ಎಷ್ಟರಮಟ್ಟಿಗೆ ಪುನರ್‌ವ್ಯವಸ್ಥೆಗೊಳಿಸಬೇಕೆಂಬ ವಿಷಯ ಈವೊತ್ತಿನ ವಿಷಯವಲ್ಲ. ಹಳ್ಳಿಗಳಲ್ಲಿ ಸಾಧಾರಣವಾಗಿ ನೀರು ಸಿಕ್ಕುವ ವ್ಯವಸ್ಥೆ, ಹಳ್ಳಿಗಳಿಗೆ ಬೇಕಾದ ರಸ್ತೆಗಳ ವ್ಯವಸ್ಥೆ, ಹಳ್ಳಿಯ ಗ್ರಾಮ ಪ್ಯಾಕೇಜು ವ್ಯವಸ್ಥೆ, ಈ ಮೂರು ವಿಷಯಗಳಲ್ಲಿ ಸರ್ಕಾರ ಏನು ಕೆಲಸಕಾರ್ಯಗಳನ್ನು ಮಾಡಬೇಕು. ಅಥವಾ ಮಾಡದೆ ಮುಂದೆ ಯಾವುದಾದರೂ ಏಜೆನ್ಸಿ ಕ್ರಿಯೇಟ್ ಮಾಡಿದರೆ ಅದು ಎಷ್ಟರ ಮಟ್ಟಿಗೆ ಕಾರ್ಯ ಮಾಡಬೇಕು. ಅದಕ್ಕೆ ಎಷ್ಟು ದುಡ್ಡು ಬೇಕು ಮತ್ತು ಈಗಾಗಲೇ ಸ್ಥಾಪಿಸಿರತಕ್ಕ ಏಜೆನ್ಸಿ ಎಷ್ಟರ ಮಟ್ಟಿಗೆ ಕೆಲಸ ಮಾಡಿದೆ, ಎಂಬುದು ಈಹೊತ್ತು ಸಭೆಯ ಮುಂದೆ ಚರ್ಚಿಗಿರತಕ್ಕ ವಿಷಯ. ಮೂಲಭೂತವಾಗಿ ಯಾವ ರೀತಿ ಬದಲಾವಣೆ ಯಾಗಬೇಕು, ಹಳ್ಳಿಗಳಲ್ಲಿ ಆರ್ಥಿಕ ಸ್ಥಿತಿಯನ್ನು ಯಾವ ರೀತಿ ಕ್ರಾಂತಿಕಾರಕವಾದ ಬದಲಾವಣೆಯ ಮೂಲಕ ಪುನರ್ವ್ಯವಸ್ಥೆಗೊಳಿಸಬೇಕು ಎಂದರೆ, ಬಹುಶಃ ಅದನ್ನು ಅಷ್ಟು ಸುಲಭವಾದ ರೀತಿಯಲ್ಲಿ ಚರ್ಚೆಮಾಡಿ ಒಂದು ತೀರ್ಮಾನಕ್ಕೆ ಬರುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ಮೂರು ವಿಚಾರಗಳಲ್ಲಿ ಸರ್ಕಾರದವರು ಕೊಟ್ಟಿರತಕ್ಕ ಖರ್ಚು ಎಷ್ಟು, ಸರ್ಕಾರ ಏಜೆನ್ಸಿ ಕ್ರಿಯೇಟ್ ಮಡಿದರೆ ಈ ಏಜೆನ್ಸಿ ಎಷ್ಟು ಮಟ್ಟಿಗೆ ಮೂರು ನಾಲ್ಕು ವರ್ಷಗಳಿಂದ ಕೆಲಸ ಮಾಡಿದೆ. ಸರಿಯಾಗಿ ಕೆಲಸ ಮಾಡಿದೆಯೇ ಇಲ್ಲವೇ, ಎಂಬುದು ನಮ್ಮ ಮುಂದೆ ಬಂದಿರತಕ್ಕ ಪ್ರಶ್ನೆ. ಅದನ್ನು ಚರ್ಚೆಮಾಡಬೇಕಾಗಿದೆ. ಮಾನ್ಯ ಸದಸ್ಯರನೇಕರು ವಿಧ ವಿಧವಾದ ಅಭಿಪ್ರಾಯಗಳನ್ನು ಕೊಟ್ಟರು. ಕಾಲಾವಕಾಶ ಸ್ವಲ್ಪವೇ ಇರುವುದರಿಂದ ದೀರ್ಘವಾಗಿ ಚರ್ಚೆ ಮಾಡುವುದಿಲ್ಲ. ಗ್ರಾಮೀಣಾಭಿವೃದ್ಧಿ ಸಂಸ್ಥೆಗಳ ವಿಚಾರ ಮಾತನಾಡುವುದಕ್ಕಿಂತ ಮುಂಚೆ ಅದನ್ನು ಯಾವ ಸನ್ನಿವೇಶದಲ್ಲಿ ಸರ್ಕಾರದವರು ಪ್ರಾರಂಭ ಮಾಡಿದರು ಎಂಬುದನ್ನು ಗಮನಿಸಬೇಕು, ಮಾನ್ಯ ಸದಸ್ಯರಿಗೆ ಗೊತ್ತಿರಬಹುದು, ಮಾಡಲ್ ವಿಲೇಜ್ ಎಂದು ಮಾಡಿದರು. ಕೆಲವು ಕಾಲದನಂತರ ಅದು ಪ್ರಯೋನವಿಲ್ಲವೆಂದು ಸರ್ಕಾರದವರು ಕೈಬಿಟ್ಟರು. ಅದಾದ ಮೇಲೆ ಗುಂಡಪ್ಪಗೌಡರು ಮಂತ್ರಿಗಳಾಗಿದ್ದಾಗ ಹೋಬಳಿವರ್ಕ್ಸ್ ಎಂಬುದಾಗಿ ಒಂದು ಸ್ಕೀಮು ತಂದರು. ಹೋಬಳಿ ವರ್ಕರ್ಸ್ ಪೈಕಿ ಕೆಲವರು ಚೆನ್ನಾಗಿ ಕೆಲಸ ಮಾಡಿದರು, ಕೆಲವರು ಮಾಡಲಿಲ್ಲ. ರೆಡ್‌ಟೇಪಿಸಂ ಹೆಚ್ಚಿ ಸುಸೂತ್ರವಾಗಿ ಆದಷ್ಟು ಜಾಗ್ರತೆ ಚೆನ್ನಾಗಿ ಕೆಲಸ ಕಾರ್ಯಗಳು ಆಗದೆ ಅದಕ್ಕೆ ಸರಿಯಾದ ಒಂದು ಏಜೆನ್ಸಿ ಬೇಕೆಂದು ಯೋಚನೆ ಮಾಡಿ ಸರ್ಕಾರದವರು ಈ ಗ್ರಾಮೀಣಾಭಿವೃದ್ಧಿ ಸಮಿತಿಗಳನ್ನು ರಚಿಸಿದರು. ಗ್ರಾಮೀಣಾಭಿವೃದ್ಧಿ ಸಮಿತಿ ಎಷ್ಟರಮಟ್ಟಿಗೆ ಕೆಲಸ ಮಾಡಿದೆಯೆಂದು ಯೋಚನೆ ಮಾಡುವಾಗ ಎಷ್ಟು ಕೆಲಸ ಆಗಿದೆ, ಎಷ್ಟು ಬಾವಿಗಳಾದವು, ಎಷ್ಟುರಸ್ತೆಗಳಾಗಿವೆ, ಎಂಬ ಬಗ್ಗೆ ತೀವ್ರ ಉತ್ಪ್ರೇಕ್ಷೆ ಮಾಡಿದ್ದಾರೆ ಎಂದು ಹೇಳುವುದು ಅಷ್ಟು ಸೂಕ್ತವಲ್ಲ. ಅದನ್ನು ಸ್ಥೂಲವಾಗಿ ಪರೀಕ್ಷೆ ಮಾಡಿದರೆ ಬಹಳ ಕೆಲಸ ಮಾಡಿದೆ ಎಂಬುದು ಗೊತ್ತಾಗುತ್ತದೆ. ಏಕೆಂದರೆ, ಸಮಿತಿಗಳು ಕೆಲಸ ಪ್ರಾರಂಭ ಮಾಡುವುದಕ್ಕಿಂತ ಮುಂಚೆ ಒಂದೊಂದು ಬಾವಿಗಳ

ಕೆಲಸ ಎಷ್ಟೋ ವರ್ಷಗಳಿಂದ ಆಗದೇ ನಿಂತೇ ಹೋಗಿದ್ದುದನ್ನು ಅವರು ಕೆಲಸ ಮಾಡಿಪೂರೈಸಿದ್ದಾರೆ, ಅಂಥ ನಿದರ್ಶನಗಳನ್ನು ನಾನು ಮಾನ್ಯ ಸದಸ್ಯರ ಗಮನಕ್ಕೆ ತರುವುದಾದರೆ, 10 ವರ್ಷಗಳಿಂದ ಇನ್ನೂ ಮಂಜೂರೇ ಆಗಿರದಿರುವಂಥವುಗಳನ್ನು ಈ ಸಮಿತಿ ಬಂದ ತಕ್ಷಣ ಅವುಗಳನ್ನೆಲ್ಲಾ ವಿಚಾರ ಮಾಡಿ ಮಂಜೂರಾತಿ ತೆಗೆದುಕೊಂಡು ಕಾರ್ಯಗತಮಾಡಲಾಯಿತು. ಸರ್ಕಾರಿ ಅಧಿಕಾರಿಗಳ ಸಹಕಾರದಿಂದ ಒತ್ತಾಯ ಮಾಡುವುದರಿಂದ, ಅದೇ ರೀತಿ ಕೆಲಸಗಳು ಜಾಗ್ರತೆ ಆಗುವಂತೆ ಕಾರ್ಯಕ್ರಮ ಹಾಕಿಕೊಂಡು ಸುಸೂತ್ರವಾಗಿ ಕೆಲಸ ಕಾರ್ಯಗಳನ್ನು ಮಾಡಿಕೊಂಡು ಬಂದಿದ್ದೇವೆ. ಈ ಸಮಿತಿಗಳನ್ನು ಪ್ರಾರಂಭಮಾಡುವುದಕ್ಕೆ ಸರ್ಕಾರದ ಒತ್ತಾಯ ಏಕೆಂದರೆ, ಹಿಂದಿನಿಂದ, ಹಿರಿಯ ಸದಸ್ಯರಾದ ಪಟ್ಟಾಭಿ ರಾಮನ್‌ರವರು ಹೇಳಿದಹಾಗೆ, ರೆಡ್ ಟೇಪಿಸಂ ಇತ್ತು, ಆದುದರಿಂದ ಕೆಲಸ ವಿಳಂಬವಾಗುತ್ತಾ ಇತ್ತು. ಕೆಲಸಕಾರ್ಯಗಳು ನೆರವೇರುವುದಕ್ಕೆ ಸಾರ್ವಜನಿಕರ ಒತ್ತಾಯ ಇರಲಿ ಎಂಬುದು ಒಂದು ದೃಷ್ಟಿ. ಮತ್ತು ನಮ್ಮ ದೇಶ ಪ್ರಜಾಪ್ರಭುತ್ವ ತತ್ವ ಇಟ್ಟುಕೊಂಡಿರುವ ದೇಶ. ಅದು ಯಶಸ್ವಿಯಾಗಬೇಕಾದರೆ ಪ್ರಜಾಪ್ರಭುತ್ವವನ್ನು ಅರ್ಥಮಾಡಿಕೊಳ್ಳುವ ಶಕ್ತಿ ಜೀರ್ಣ ಮಾಡಿಕೊಳ್ಳತಕ್ಕ ಸಾಮರ್ಥ್ಯ ತಿಳುವಳಿಕೆ ಸಾರ್ವಜನಿಕರಿಗೆ ಇರಬೇಕು, ಮತ್ತು ಪ್ರಜಾಪ್ರಭುತ್ವದ ಮುಖಂಡರಾಗಿ ಕೆಲಸಮಾಡತಕ್ಕ ತರಬೇತಿ ಬೇಕು. ಆ ಸಂಸ್ಥೆ ಯಾವುದಾದರೂ ಆಗಿರಲಿ ಕಾಂಗ್ರೆಸ್‌ನವರು ಆಗಿರಬಹುದು-ಪ್ರಜಾಪ್ರಭುತ್ವ ನಡೆಸಿಕೊಂಡು ಹೋಗುವ ರೀತಿಯಲ್ಲಿ ಜನಗಳನ್ನು ತರಬೇತಿ ಮಾಡುವ ಕೆಲಸ ಮತ್ತು ವ್ಯವಸ್ಥೆಗೆ ಅವಕಾಶಬೇಕು. ಈ ಸಂಸ್ಥೆಯಲ್ಲಿ ಅದೂ ಕೂಡ ಸಿಕ್ಕುತ್ತದೆ. ಜನಗಳ ಕೆಲಸವನ್ನು ಕಷ್ಟ ನಿಷ್ಠೂರವನ್ನು ವಿಚಾರಮಾಡಿ ಸರಿಯಾದ ರೀತಿಯಲ್ಲಿ ಒಂದು ಕಾರ್ಯಕ್ರಮ ಮಾಡಿಕೊಳ್ಳುವುದಕ್ಕೆ ಅನುಕೂಲವಾಗುತ್ತದೆ ಎಂಬ ದೃಷ್ಟಿಯಿಂದ ಈ ಸಮಿತಿಯನ್ನು ಪ್ರಾರಂಭ ಮಾಡಿದರು. ಸಮಿತಿಯವರು ಬೇಕಾದಷ್ಟು ಕೆಲಸ ಕಾರ್ಯಗಳನ್ನು ಬಹಳ ಯಶಸ್ವಿಯಾಗಿ ಮಾಡಿದ್ದಾರೆ, ಮಾನ್ಯ ಸದಸ್ಯರು ಹೇಳಿದ ಹಾಗೆ ಸಹಸ್ರಾರು ರೂಪಾಯಿಗಳ ಕೆಲಸ ಕಾರ್ಯಗಳನ್ನು ಹಳ್ಳಿಗಳಲ್ಲಿ ಮಾಡಿಸಿದ್ದಾರೆ. ಹಳ್ಳಿಗಳಲ್ಲಿ ನವಚೈತನ್ಯವುಂಟಾಗುವಂತೆ ಪ್ರಚಾರ ಕಾರ್ಯ ಮಾಡಿದ್ದಾರೆ. ಈ ರೀತಿ ಎಲ್ಲರೂ ಮಾಡುವುದಕ್ಕೆ ಸಾಧ್ಯವಿಲ್ಲ, ಆದ್ದರಿಂದ ಎಲ್ಲಾ ದೃಷ್ಟಿಯಿಂದಲೂ ಸಾಕಾದಷ್ಟು ಕೆಲಸ ಕಾರ್ಯಗಳನ್ನು ತೀವ್ರವಾಗಿ ಮಾಡಿದ್ದಾರೆ ಎಂದು ನಾನು ಹೇಳುತ್ತೇನೆ. ಮಾನ್ಯ ಸದಸ್ಯರೊಬ್ಬರು ರೂರಲ್ ಡೆವಲಪ್‌ಮೆಂಟ್ ವ್ಯಾನ್‌ಗಳನ್ನು ಅಧ್ಯಕ್ಷರೇ ಉಪಯೋಗಿಸಿಕೊಂಡರು ಎಂದು ಆಕ್ಷೇಪಿಸಿದರು ಈ ಟೀಕೆಗೆ ನಾನು ವಿಷಾದವನ್ನು ವ್ಯಕ್ತಪಡಿಸಬೇಕಾಗಿದೆ. ಜವಾಬ್ದಾರಿಯನ್ನು ತಿಳಿದುಕೊಂಡಿದ್ದ ಯಾರೇ ಆಗಲಿ ಸರ್ಕಾರಿ ಸ್ವತ್ತನ್ನು ಅಷ್ಟುಮಟ್ಟಿಗೆ ದುರುಪಯೋಗಪಡಿಸಲಾರರು ಎಂದು ಹೇಳುತ್ತೇನೆ. ನಾನೂ ಒಬ್ಬ ಚೇರ್ಮನ್ ಆದ್ದರಿಂದ ನಾನಂತು ಆರೀತಿ ವ್ಯಾನ್ ಉಪಯೋಗಿಸಿಲ್ಲ ಎಂಬ ಭರವಸೆಯನ್ನು ಕೊಡಲಿಕ್ಕೆ ಇಚ್ಛಿಸುತ್ತೇನೆ. ಅದನ್ನು ಬೇಜವಾಬ್ದಾರಿಯಿಂದ ಎಲ್ಲರೂ

ಉಪಯೋಗಿಸಿದ್ದಾರೆ ಎಂದು ಹೇಳುವುದು ಸೂಕ್ತವಾಗಲಾರದು ಎಂದು ಹೇಳುವುದಕ್ಕೆ ನಾನು ಇಚ್ಛೆ ಪಡುತ್ತೇನೆ.

ಕೊನೆಯದಾಗಿ, ಪ್ರಯೋಗಿಕವಾಗಿ ಈ ಸಂಸ್ಥೆ ಪ್ರಾರಂಭಮಾಡಿದರೂ ಯಾವ ರೀತಿ ಕೆಲಸ ಮಾಡಿದೆಯೆಂಬುದನ್ನು ನೋಡಬೇಕು. ಇನ್ನು ಮುಂದೆ ಈ ಕೆಲಸಕಾರ್ಯಗಳನ್ನು ಮಾಡುವುದಕ್ಕೆ ಬೇರೆ ಸಂಸ್ಥೆಯನ್ನು ರಚಿಸತಕ್ಕ ಪರಿಸ್ಥಿತಿಯಲ್ಲಿ ಸರ್ಕಾರ ಇದೆ, ಆದ್ದರಿಂದ ಈ ಸಮಿತಿಗಳ ಉಪಯೋಗ ಮುಂದೆ ಬೇಕಾಗಿಲ್ಲವೆಂದು ಕಾಣುತ್ತದೆ. ಈ ಸಮಿತಿಗಳು ಹೋದರೂ ಹೋಗಬಹುದು. ಇದುವರೆಗೂ ಸಮಿತಿ ಪರಿಶುದ್ಧವಾದ ಹೃದಯದಿಂದ ಅನೇಕ ಉಪಯುಕ್ತ ಕೆಲಸ ಕಾರ್ಯಗಳನ್ನು ಮಾಡಿದೆ ಎಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಶಿಕ್ಷಣ ಕುರಿತು ವಿಧಾನಸಭೆಯಲ್ಲಿ ಮಂಡಿಸಿದ ವಿಚಾರ

14-7-1952

ಶ್ರೀ ಕೆ.ವಿ. ಶಂಕರಗೌಡರು – ಅಧ್ಯಕ್ಷರೇ, ಸ್ವಾಮಿ ಈಗ ನಮ್ಮಲ್ಲಿ ಜಾರಿಯಲ್ಲಿರತಕ್ಕ ವಿದ್ಯಾಭ್ಯಾಸ ಕ್ರಮವನ್ನು ದೇಶದ ಉಚ್ಚ ಸಂಸ್ಕೃತಿಯನ್ನು ಪೋಷಿಸತಕ್ಕ ರೀತಿಯಲ್ಲಿ ಹೇಗೆ ಮಾರ್ಪಾಡಾಗಬೇಕೆಂಬ ವಿಚಾರ ಸಭೆಯ ಮುಂದೆ ಚರ್ಚೆಗೆ ಬಂದಿದೆ. ಈ ವಿಷಯದಲ್ಲಿ ನಾನು ಮಾತನಾಡುವಾಗ ಅಷ್ಟು ಅಧಿಕಾರಯುತವಾದ ಸಲಹೆಗಳನ್ನು ಕೊಡಲಾರೆ ಎಂಬ ಶಂಕೆಯು ನನಗಿದ್ದರೂ ಮುಖ್ಯವಾಗಿ ಮೂಲ ತತ್ವದ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಈಗಿನ ವಿದ್ಯಾಭ್ಯಾಸ ಕ್ರಮ ಯಾವ ರೀತಿ ಮಾರ್ಪಾಡಾಗಬೇಕೆಂಬುದನ್ನು ಯೋಚನೆ ಮಾಡುವಾಗ, ನಮ್ಮ ಸಂಸ್ಥಾನದಲ್ಲಿ ಈಗಿರತಕ್ಕ ವಿದ್ಯಾಭ್ಯಾಸ ಕ್ರಮಕ್ಕೆ ಎಷ್ಟು ಮೊಬಲಗು ಖರ್ಚಾಗುತ್ತಾ ಇದೆ, ಅದೇ ರೀತಿಯಲ್ಲಿ ಈ ಮೊಬಲಗನ್ನು ಇನ್ನೂ ಮುಂದೆಯೂ ಖರ್ಚು ಮಾಡಿಕೊಂಡು ಹೋಗತಕ್ಕದ್ದು ಸರಿಯೇ, ಈಗಿರತಕ್ಕ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಇಲ್ಲಿಗೇ ನಿಲ್ಲಿಸಬೇಕೇ ಅಥವಾ ಇನ್ನೂ ಹೆಚ್ಚಾಗಿ ಬೆಳೆಸಿಕೊಂಡು ಹೋಗಬೇಕೆ. (Mr. Deputy Speaker - in the Chair) ಎಂಬ ವಿಚಾರದಲ್ಲಿ ಒಂದೆರಡು ವಿಷಯಗಳನ್ನು ಹೇಳುವುದಕ್ಕೆ ಇಚ್ಛೆ ಪಡುತ್ತೇನೆ. ಮಾನ್ಯ ಸದಸ್ಯರನೇಕರು ಅಭಿಪ್ರಾಯ ಪಟ್ಟ ಹಾಗೆ ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಎಲ್ಲರಿಗೂ ಸರಿಯಾದಂಥ ವಿದ್ಯೆ ಇರಬೇಕು. ಹಾಗೆ ಇಲ್ಲದೇ ಹೋದ ಪಕ್ಷದಲ್ಲಿ ಜನಗಳ ತಿಳುವಳಿಕೆಯ ಮಟ್ಟ ಬಹಳ ಕಡಿಮೆ ಇದ್ದರೆ ಪ್ರಜಾಪ್ರಭುತ್ವದ ಗುರಿ ಏನಿದೆಯೋ ಅದನ್ನು ಸ್ಥಾಪಿಸುವುದಕ್ಕೆ ಕಷ್ಟವಾಗುತ್ತದೆ. ಅಂದ ಮೇಲೆ ಕೇವಲ 100ಕ್ಕೆ 20 ಜನರನ್ನು ತಯಾರು ಮಾಡುವುದಕ್ಕೆ ನಾವು 3 ಕೋಟಿ ಚಿಲ್ಲರೇ ರೂಪಾಯಿಗಳನ್ನು ಖರ್ಚುಮಾಡಿದ ಮೇಲೆ ಎಲ್ಲಾ ಜನರಿಗೂ ಒತ್ತಾಯಪೂರ್ವಕವಾಗಿ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಒದಗಿಸಬೇಕಾದರೆ ಎಷ್ಟು ದುಡ್ಡು ಮುಂದೆ ಖರ್ಚು ಮಾಡಬೇಕಾಗಬಹುದು? ನಮ್ಮ ಬಡ್ಜೆಟ್‌ನಲ್ಲಿರತಕ್ಕ ಇಡೀ ಮೊಬಲಗನ್ನು ಕಲ್ಪಿಸುವುದಕ್ಕೆ ಅವಕಾಶವಿದೆಯೇ ಎಂಬ ವಿಷಯವನ್ನು ನಾವು ಈಗ ದೀರ್ಘವಾಗಿ ಆಲೋಚಿಸಬೇಕಾಗಿದೆ.

ಈ ಮಾನ್ಯ ಸಭೆಯ ಸದಸ್ಯರನೇಕರಿಗೆ ಗೊತ್ತಿರಬಹುದು. ನಾವು ಕೆಲವು ಪುಸ್ತಕಗಳನ್ನ ಓದಿನೋಡಿದ್ದೇನೆ ಮತ್ತು ತಿಳಿದವರನ್ನು ಕೇಳಿ ತಿಳಿದುಕೊಂಡಿದ್ದೇನೆ. ಈ ಪ್ರಜಾಪ್ರಭುತ್ವ ಎಲ್ಲಿ ಯಶಸ್ವಿಯಾಗಿ ನಡೆಯುತ್ತಾ ಇದೆಯೋ ಅಂಥಾ ಪಾಶ್ಚಿಮಾತ್ಯ ದೇಶಗಳಲ್ಲಿ ಸರ್ಕಾರದವರು ಪ್ರೈಮರಿ ವಿದ್ಯಾಭ್ಯಾಸಕ್ಕೆ ಮಾತ್ರ ಜವಾಬ್ದಾರರಾಗಿದ್ದಾರೆ. ಅದರ ಮೇಲ್ಪಟ್ಟು ವಿದ್ಯಾಭ್ಯಾಸಕ್ಕೆ ಸರ್ಕಾರದ ನೇರವಾದ ಜವಾಬ್ದಾರಿ ಇಲ್ಲ. ಪ್ರೈಮರಿ ವಿದ್ಯಭ್ಯಾಸಕ್ಕೆ ಮೇಲ್ಪಟ್ಟ ವಿದ್ಯಾಭ್ಯಾಸವೆಲ್ಲಾ ಸ್ಥಳೀಯ ಸಂಸ್ಥೆಗಳ ಮತ್ತು ಸಾರ್ವಜನಿಕರ ಸಹಾಯದಿಂದ ನಡೆಯತಕ್ಕವುಗಳಾಗಿವೆ ಎಂಬುದು

ಮಾನ್ಯ ಸದಸ್ಯರಿಗೆ ತಿಳಿಯದೆ ಇಲ್ಲ. ಅಂದ ಮಾತ್ರಕ್ಕೆ ಅದರಲ್ಲಿ ಸರ್ಕಾರದವರ ಜವಾಬ್ದಾರಿ ಏನೂ ಇಲ್ಲ ಎಂದು ಅರ್ಥಮಾಡಿಕೊಳ್ಳಬಾರದು. ಸಂದರ್ಭಾನುಸಾರ ಆಯಾಯ ಸಂಸ್ಥೆಗಳ ಹಣಕಾಸಿನ ಪರಿಸ್ಥಿತಿಯನ್ನು ನೋಡಿಕೊಂಡು ಸರ್ಕಾರದವರೂ ಕೂಡ ಆಗಾಗ್ಗೆ ಸ್ವಲ್ಪ ಗ್ರಾಂಟು ಕೊಡುತ್ತಾರೆ. ಆದರೆ ನಮ್ಮ ದೇಶದಲ್ಲಿ ಪ್ರೈಮರಿ ವಿದ್ಯಾಭ್ಯಾಸವಾಗಲೀ ಅಥವಾ ಅದಕ್ಕೆ ಮೇಲ್ಪಟ್ಟ ವಿದ್ಯಾಭ್ಯಾಸವಾಗಲೀ ಎಲ್ಲವನ್ನು ಸರ್ಕಾರದವರೇ ನಡೆಸಬೇಕು, ಸರ್ಕಾರಿ ಖರ್ಚಿನಿಂದಲೇ ನಡೆಸಬೇಕು ಎಂದು ಒಂದು ಭಾವನೆ ಇದೆ. ಒಂದು ದೇಶದ ಸರ್ಕಾರ ಮಾಡಬೇಕಾಗಿರುವ ಕರ್ತವ್ಯಗಳು ಯಾವವು ಎಂಬುದನ್ನು ಮೊದಲು ಗಮನಿಸಬೇಕು. ಸರ್ಕಾರ ನಿರ್ವಹಿಸತಕ್ಕ ಕರ್ತವ್ಯಗಳು ಎರಡು ವಿಧವಾಗಿವೆ. ಮೊದಲನೆಯದು, ಮಾನ್ಯ ಸದಸ್ಯರನೇಕರಿಗೆ ಗೊತ್ತಿರುವ ಹಾಗೇ ಆಂತರಿಕ ಶಾಂತಿ ಪಾಲನೆ ಮತ್ತು ರಕ್ಷಣೆ, ಇವು ಕಡ್ಡಾಯವಾಗಿ ಸರ್ಕಾರ ಮಾಡಲೇಬೇಕಾದವುಗಳು. ಎರಡನೆಯದು 'Social Services and economic end ಗಳಿಗೆ ಮಾಡಬೇಕಾದ ಕರ್ತವ್ಯಗಳು. ಪ್ರೈಮರಿ ವಿದ್ಯಾಭ್ಯಾಸಕ್ಕೆ ಮೇಲ್ಪಟ್ಟ ವಿದ್ಯಾಭ್ಯಾಸದ ಸೌಲಭ್ಯಗಳನ್ನು ಒದಗಿಸುವುದು ಸರ್ಕಾರ ಎರಡನೇ ಕರ್ತವ್ಯಕ್ಕೆ ಸಂಬಂಧಪಟ್ಟ ಪ್ರಶ್ನೆ. ಅಂದ ಮೇಲೆ ಇದರಲ್ಲಿ ಸರ್ಕಾರದ ನೇರವಾದ ಜವಾಬ್ದಾರಿ ಇದೆ ಎಂದು ಹೇಳುವಹಾಗಿಲ್ಲ. ಪ್ರೈಮರಿ ವಿದ್ಯಾಭ್ಯಾಸಕ್ಕೆ ಮಾತ್ರ ಸರ್ಕಾರ ಹೊಣೆಯಾಗಿವೆ. ಅದಕ್ಕೆ ಮೇಲ್ಪಟ್ಟದ್ದು ಸ್ಥಳೀಯ ಸಂಸ್ಥೆಗಳು ಮತ್ತು ಸಾರ್ವಜನಿಕರ ಸಹಾಯದಿಂದ ನಡೆಯಬೇಕಾದ್ದು. ಸಧ್ಯದಲ್ಲಿ ನಮ್ಮ ದೇಶದಲ್ಲಿ ಸ್ಥಳೀಯ ಸಂಸ್ಥೆಗಳ ಸ್ಥಿತಿಗಳು ಯಾವ ರೀತಿ ಇದೆ ಎಂಬುದನ್ನು ಯೋಚನೆ ಮಾಡಬೇಕು. ಸ್ಥಳೀಯ ಸಂಸ್ಥೆಗಳಿಗೆ ಪ್ರೈಮರಿ ವಿದ್ಯಾಭ್ಯಾಸದಿಂದ ಮೇಲ್ಪಟ್ಟ ವಿದ್ಯಾಭ್ಯಾಸ ಏನಿದೆಯೋ ಅದನ್ನು ನಡೆಸುವುದಕ್ಕೆ ಸಾಕಾದಷ್ಟು ಸೌಲಭ್ಯಗಳಿವೆ ಎಂದು ಇಂದು ಹೇಳುವ ಹಾಗಿಲ್ಲ. ಕಾರಣ ಇಷ್ಟೇ. ಸ್ಥಳೀಯ ಸಂಸ್ಥೆಗಳಲ್ಲಿ ನಾನು ಮೊದಲೇ ಹೇಳಿದ ಹಾಗೆ, ಜನಗಳ ತಿಳುವಳಿಕೆ ಮಟ್ಟ ಬಹಳ ಕಡಿಮೆಯಾಗಿರುವುದರಿಂದ ಆ ಸಂಸ್ಥೆಗಳ ಕಾರ್ಯನಿರ್ವಹಣೆಗೆ ಯಾರು ನಿಂತಿದ್ದಾರೋ ಅವರಿಗೆ ಒಂದು ಕಷ್ಟ ಪರಿಸ್ಥಿತಿ ಇದೆ. ಈ ಸಮಯದಲ್ಲಿ ಒಂದು ಉದಾಹರಣೆ ನನ್ನ ಜ್ಞಾಪಕಕೆ ಬರುತ್ತಿದೆ. ನನ್ನ ಒಬ್ಬ ಸ್ನೇಹಿತರು ಬಹಳ ದೊಡ್ಡ ಮನುಷ್ಯರು, ಬಹಳ ನಿಸ್ಪೃಹರು, ಅವರು ಅವರ ಮುನಿಸಿಪಾಲಿಟಿಯಲ್ಲಿ ದುಡ್ಡು ಕಡಿಮೆ ಆಗಿದ್ದು, ಹೆಚ್ಚು ತೆರಿಗೆ ಹಾಕಿ, ಹೆಚ್ಚು ಸೌಲಭ್ಯಗನ್ನು ಕಲ್ಪಿಸಬೆಕೆಂಬ ದೃಷ್ಟಿಯಿಂದ ಕಂದಾಯವನ್ನು ರಿವೈಸ್ ಮಾಡಿ ಹೆಚ್ಚಿದರು. ಎಷ್ಟೇ ದೇಶ ಪ್ರೇಮಿಗಳಾಗಿದ್ದರೂ, ಎಷ್ಟೇ ಸ್ವಾರ್ಥ ತ್ಯಾಗದಿಂದ ಕೆಲಸ ಮಾಡುತ್ತಾ ಇದ್ದರೂ ಕೂಡ ಅವರು ಚುನಾವಣೆಯಲ್ಲಿ ಸ್ಪರ್ಧಿಸಿದಾಗ ಸೋಲಿಸಲ್ಪಟ್ಟರು. ಕಾರಣವೇನೆಂದರೆ ಎಷ್ಟೇ ಅನುಕೂಲ ಇದ್ದಾಗ್ಯೂ, ಎಷ್ಟೋ ದುಡ್ಡು ಅವರಲ್ಲಿ ಇದ್ದಾಗ್ಯೂ, ಸಾಧಾರಣವಾಗಿ ಮನುಷ್ಯನು ತನಗೆ ಅಂಟಿಕೊಂಡಿರುವ ಪ್ರಲೋಭನದ ದೆಸೆಯಿಂದ ಒಂದು ಕಾಸು ಹೆಚ್ಚು ತೆರಿಗೆ ಹಾಕಿದರೂ ಸಹಿಸನು. ಇದಕ್ಕೆಯೇ ಇಂಥವರು ಮೆಂಬರಾಗಿ ಬರುವುದು ಬೇಡ ಎಂಬ ಧೋರಣೆಯನ್ನು

ಜನತೆ ತಾಳುತ್ತದೆ. ಈ ಒಂದು ಪರಿಸ್ಥಿತಿ ಇರುವುದರಿಂದ ಸ್ಥಳೀಯ ಸಂಸ್ಥೆಗಳಲ್ಲಿ ಚುನಾಯಿತರಾಗಿ ಬರತಕ್ಕ ಮಹನೀಯರು ಯಾವ ಕೆಲಸ ಮಾಡುವುದಕ್ಕೂ ಹೆದರುತ್ತಾರೆ. ಆದಾಯವನ್ನು ಹೆಚ್ಚಿಸಲು ಯಾವ ಅನುಕೂಲತೆ ಕಲ್ಪನೆ ಮಾಡಬೇಕೋ ಆ ಅನುಕೂಲತೆ ಕಲ್ಪಿಸುವುದಕ್ಕಾಗಲಿ, ಆ ಮೂಲಕ ಕರ್ತವ್ಯ ಪರಿಪಾಲನೆ ಮಾಡುವುದಕ್ಕಾಗಲಿ, ಆ ಮೂಲಕ ಕರ್ತವ್ಯ ಪರಿಪಾಲನೆ ಮಾಡುವುದಕ್ಕಾಗಲಿ ಆ ಸ್ಥಳೀಯ ಸಂಸ್ಥೆಗಳಲ್ಲಿ ಸಾಕಷ್ಟು ಅನುಕೂಲ ಪರಿಸ್ಥಿತಿ ಇಲ್ಲ. ಆದುದರಿಂದ ಸ್ಥಳೀಯ ಸಂಸ್ಥೆಗಳಲ್ಲಿ ಕೆಲಸ ಮಾಡುವ ಮಹನೀಯರಿಗೆ ಸರ್ಕಾರದವರು ರಕ್ಷಣೆ ಕೊಡಬೇಕು. ಏನು ರಕ್ಷಣೆ ಎಂದರೆ ಸ್ಥಳೀಯ ಸಂಸ್ಥೆಗಳು ಸರ್ಕಾರ ಖಚಿತವಾಗಿ ನಿರ್ದೇಶಿಸಬಹುದಾದ ವಿದ್ಯಾಭ್ಯಾಸಕ್ಕೆ ಏನು ಅನುಕೂಲತೆಗಳನ್ನು ಕಲ್ಪಿಸಬೇಕೋ ಅದನ್ನು ಮಾಡಿಯೇ ಮಾಡಬೇಕೆಂಬ ಒಂದು ಕಾನೂನು ಕಡ್ಡಾಯವಾಗಿ ಹೊರಿಸಬೇಕು. ಈವಿಧವಾದ ಕಾನೂನಿನಿಂದ ಸಾರ್ವಜನಿಕರಿಗೂ ತಿಳುವಳಿಕೆ ಬರುತ್ತದೆ. ಮೆಂಬರುಗಳನ್ನು ದೋಷಣೆ ಮಾಡುವ ಹಾಗಿಲ್ಲ. ಒಂದು ಒತ್ತಾಯ ಜನತೆಯ ಮೇಲೆ ಬೀಳುತ್ತದೆ. ಸದಸ್ಯರಾಗಿ ಬರತಕ್ಕವರಿಗೂ ಒಂದು ಬೆಂಬಲ ಮತ್ತು ರಕ್ಷಣೆ ದೊರಕಿದ ಹಾಗಾಗುತ್ತದೆ. ಈ ರೀತಿ ಕಾರ್ಯಕ್ರಮಗಳಿಂದ ಪ್ರೈಮರಿ ವಿದ್ಯಾಭ್ಯಾಸ ಮತ್ತು ಸೆಕೆಂಡರಿ ವಿದ್ಯಾಭ್ಯಾಸಕ್ಕೆ ಸ್ಥಳೀಯ ಸಂಸ್ಥೆಗಳ ಮತ್ತು ಸಾರ್ವಜನಿಕರ ಸಹಾಯದಿಂದ ಹೆಚ್ಚು ದುಡ್ಡು ಬಂದು ಸರ್ಕಾರದ ಖರ್ಚು ಕಡಿಮೆ ಆಗಬೇಕು. ಆ ರೀತಿ ಕಾರ್ಯಕ್ರಮ ಹಾಕಿಕೊಳ್ಳದೆ ಇದ್ದರೆ ಮುಂದೆ ಬಹಳ ಕಷ್ಟವಾಗುತ್ತದೆ ಎಂದು ಹೇಳದೆ ವಿಧಿಯಿಲ್ಲ.

ಇನ್ನು ಎರಡನೆಯ ವಿಷಯ, ಮುಖ್ಯವಾಗಿ ನಮ್ಮ ಮಕ್ಕಳಿಗೆ ಯಾವ ವಿದ್ಯಾಭ್ಯಾಸ ದೊರಕಬೇಕೋ ಅದು ನಮ್ಮ ಉಚ್ಚ ಸಂಸ್ಕೃತಿಯನ್ನು ಎತ್ತಿ ಹಿಡಿಯತಕ್ಕಂಥಾದ್ದಗಬೇಕು, ಪರಿಪೋಷಿಸತಕ್ಕದ್ದಾಗಬೇಕು. ನಾವು ಕೊಡತಕ್ಕ ವಿದ್ಯಭ್ಯಾಸ ಕ್ರಮದಿಂದ ಮಕ್ಕಳಿಗೆ ಸಶ್ರಮ ಕೆಲಸವೆಂದು ನಾವೇನು ಹೇಳುತ್ತೇವೆಯೇ ಅಂದರೆ ಮನುಷ್ಯ ತಾನೇ ಮೈ ಬಗ್ಗಿ ಕೆಲಸ ಮಾಡುವ ಕೆಲಸ. ಅದರಲ್ಲಿ ಒಂದು ಗೌರವ ಭಾವನೆ ಬರುವಂತಾಗಬೇಕು. ಇಂದು ನಾವು ಕೊಡತಕ್ಕ ವಿದ್ಯೆಯಿಂದ ಶಾರೀರಕ ಶ್ರಮದ ವಿಷಯದಲ್ಲಿ ತಿರಸ್ಕಾರವುಂಟಾಗುತ್ತದೆ. ಅನೇಕ ಉದಾಹರಣೆಗಳು ನಮ್ಮಲ್ಲೆ ಇವೆ. ನಾನೇ ರೈತ ಸಂಸಾರದಲ್ಲಿ ಬೆಳೆದು ಬಂದವನಾಗಿ ಅನೇಕ ವೇಳೆ ಹಸುವಿಗೆ ಹುಲ್ಲು ಹಾಕುತ್ತಿದ್ದರೂ ನಮ್ಮ ಮನೆಯಲ್ಲಿ ಮಿಡ್ಲ್‌ಸ್ಕೂಲು ಮತ್ತು ಹೈಸ್ಕೂಲಿನಲ್ಲಿ ಓದುತ್ತಿರುವ ಮಕ್ಕಳು ಹಸುವಿನ ಮುಂದೆ ಹುಲ್ಲಿಲ್ಲದಿರುವುದನ್ನು ನೋಡಿದರೂ ಸುಮ್ಮನೆ ಇರುತ್ತಾರೆ. ಹಸುವಿಗೆ ಹುಲ್ಲು ಹಾಕುವುದು ಗೌರವಕ್ಕೆ ಕುಂದೆಂದು ಅವರ ಭಾವನೆ. ಅದೂ ಒಂದು ಗೌರವಯುತವಾದದ್ದು ಎಂಬ ಬಾವನೆ ಅವರಿಗೆ ಬರುವುದಿಲ್ಲ. ಹೇಳಿದರೂ ಬೇಕೆಂತಲೇ ಮರೆಯುತ್ತಾರೆ. ಹೀಗೆ ಸನ್ನಿವೇಶದ ಪ್ರಭಾವವೋ ಅಥವಾ ಪಾಶ್ಚಿಮಾತ್ಯರ ಸಂಪರ್ಕ ಮತ್ತು ಅನುಕರಣೆಯಿಂದಲೋ ಏನೋ ಮಕ್ಕಳಿಗೆ ಶಾರೀರಕ ಶ್ರಮದ ಕೆಲಸಗಳಲ್ಲಿ

ಉಂಟಾಗಿರುವ ತಿರಸ್ಕಾರ ಹೋಗಿ ಪುರಸ್ಕಾರ ಬುದ್ಧಿ ಬರಬೇಕಾಗಿದ್ದರೆ ಪಾಠಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುವಾಗಲೇ ಶರೀರ ಶ್ರಮ ವಹಿಸುವ ಮನೋಭಾವವನ್ನು ಬೆಳೆಸಬೇಕು. ಹಾಗೆ ಮಾಡಿದರೆ ದೈಹಿಕ ಶ್ರಮದ ಕೆಲಸಗಳ ಬಗ್ಗೆ ಗೌರವ ಬರುವುದರಲ್ಲೆ ವಿದ್ಯಾಸಂಸ್ಥೆಗಳಿಗೂ ಕೊಂಚ ಉತ್ಪತ್ತಿ ಬರುವ ಅವಕಾಶವಾಗುತ್ತದೆ ಈಗ ನಮ್ಮ ದೇಶ ಸಾಮಾನ್ಯವಾಗಿ ವ್ಯವಸಾಯಗಾರರ ದೇಶ ಆದ್ದರಿಂದ ದೇಶದ ಎಲ್ಲಾ ಜನರಿಗೂ ಕೈಗಾರಿಕಾ ಸಂಸ್ಥೆಗಳಲ್ಲಿ ಅಥವಾ ಬೇರೆ ಸರ್ಕಾರಿ ಉದ್ಯೋಗಗಳಲ್ಲಿ ಉದ್ಯೋಗ ಒದಗಿಸಬೇಕೆಂದರೆ ಅದು ಕೇವಲ ದಿಕ್ಕಿಲ್ಲದ ಗುರಿ ಅಷ್ಟೆ. ಬಹು ಜನ ವ್ಯವಸಾಯವನ್ನು ಅವಲಂಬನೆ ಮಾಡುವ ರೀತಿಯಲ್ಲಿ ಮಾರ್ಪಾಟು ಆಗಬೇಕು. ವ್ಯವಸಾಯದಲ್ಲಿ ಮಕ್ಕಳಿಗೆ ಆಸಕ್ತಿ ಹುಟ್ಟುವಂತೆ ಮಾಡಬೇಕು. ಆದ್ದರಿಂದ ನನ್ನ ವೈಯುಕ್ತಿಕ ಅಭಿಪ್ರಾಯ-ಅದು ಎಷ್ಟರ ಮಟ್ಟಿಗೆಸಾಧುವೋ ಅಲ್ಲವೋ ಅದನ್ನು ಸಭೆಯು ಪರಿಶೀಲನೆ ಮಾಡಬೇಕು. ಹೈಸ್ಕೂಲುಗಳಲ್ಲಾಗಲಿ, ಅಥವಾ ಬೇರಾವ ವಿದ್ಯಾಸಂಸ್ಥೆಗಳಲ್ಲಾಗಲೀ, ಎಲ್ಲೆಲ್ಲಿ ಅವಕಾಶವಿದೆಯೋ ಅಲ್ಲಲ್ಲಿ ಐವತ್ತೋ ನೂರೋ ಸಿಕ್ಕಿದಷ್ಟು ಜಮೀನನ್ನು ಅವರಿಗೆ ಒದಗಿಸಿ, ವಿದ್ಯಾ ಕರಿಕ್ಯಾಲಂನಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಕೋರ್ಸ್ ಇರಲಿ ಇಲ್ಲದಿರಲಿ, ಪ್ರತಿದಿವಸವೂ ಅರ್ಧ ಘಂಟೆಯಾದರೂ ವ್ಯವಸಾಯಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಮಾಡುವ ಏರ್ಪಾಡು ಮಾಡಬೇಕು. ಆದ್ದರಿಂದ ಮಕ್ಕಳಿಗೆ ದೈಹಿಕ ಶ್ರಮದಲ್ಲಿ ಗೌರವ ಬರುವುದಲ್ಲದೆ ಸ್ವಲ್ಪ ಉತ್ಪತ್ತಿಯೂ ಉಂಟಾಗುತ್ತದೆ. ಹೀಗಾದರೆ ಆ ವಿದ್ಯಾಸಂಸ್ಥೆಗೆ ಬರುವ ಉತ್ಪತ್ತಿಯೂ ಹೆಚ್ಚುವುದಲ್ಲದೆ ಮಕ್ಕಳಿಗೆ ದೈಹಿಕ ಶ್ರಮದ ಕೆಲಸಗಳಲ್ಲಿ ಶ್ರದ್ಧೆ, ಮರ್ಯಾದೆಯುಂಟಾಗುತ್ತದೆ. ಇಂಥಾ ಕಾರ್ಯಕ್ರಮ ಪದ್ಧತಿಯನ್ನು ನಮ್ಮ ವಿದ್ಯಾಭ್ಯಾಸ ರೀತಿಯಲ್ಲಿ ಆದಷ್ಟು ಜಾಗ್ರತೆ ಅಳವಡಿಸುವುದು ಸೂಕ್ತವೆಂದು ನಾನು ಸಲಹೆ ಮಾಡುತ್ತೇನೆ.

ಅಲ್ಲದೆ, ಮಕ್ಕಳು ಪಾಠಶಾಲೆಗೆ ಹೋಗಿ ಪ್ರೈಮರಿ ಸ್ಕೂಲು ವಿದ್ಯಾಭ್ಯಾಸ ಮುಗಿಸಿ ಮಾಧ್ಯಮಿಕ ಶಾಲೆಗೆ ಸೇರಿದ ಮೇಲೆ ಅಂದರೆ ಅವರು 7-8 ವಯಸ್ಸಿನವರಾಗಿರುವಾಗ ಸಿ.ಎ.ಟಿ-ಕ್ಯಾಟ್, ಆರ್.ಎ.ಟಿ-ರ್‍ಯಾಟ್ ಎಂದು ತೀರಾ ನಮ್ಮ ಸಂಸ್ಕೃತಿಗೆ ಹೊರಗಿರತಕ್ಕ ವಿಚಾರಗಳನ್ನು ಹೇಳಿಕೊಡುತ್ತಿರುವುದು ನಮ್ಮಲ್ಲೀಗ ಸ್ವಭಾವವಾಗಿದೆ. ಅದು ಬಿಟ್ಟು ನಮ್ಮ ದೇಶದ ಐತಿಹಾಸಿಕ ಪ್ರಸಿದ್ಧರಾದ ರಾಮಚಂದ್ರ, ಪಾಂಡವರು ಯಾರು, ಅವರ ಹಿರಿಮೆ ಏನು, ನಮ್ಮ ದೇಶದ ಚಾರಿತ್ರಿಕ ಪುರುಷರು, ವೀರಾಧಿವೀರರು ಯಾರ ಯಾರು ಆದರ್ಶ ವ್ಯಕ್ತಿಗಳು, ಅವರು ನಮ್ಮ ದೇಶದ ಏಳಿಗೆಗೆ ಎಷ್ಟು ಹೋರಾಡಿದರು ಎಂಬ ವಿಚಾರಗಳನ್ನು ತಿಳಿಸಿ ನಮ್ಮಲ್ಲಿ ದೇಶ ಪ್ರೇಮವನ್ನೂ ಭಕ್ತಿಯನ್ನೂ ಬೆಳೆಸಿ, ಬೆಳಗಿಸಿ, ನಮ್ಮ ದೇಶದ ಆದರ್ಶ ವ್ಯಕ್ತಿಗಳಲ್ಲಿ ಪೂಜ್ಯಭಾವವನ್ನು ಉಂಟು ಮಾಡುವ ವಿದ್ಯೆ ನಮ್ಮಲ್ಲಿಲ್ಲ. ಏನಿದ್ದರೂ ನಾವು ಇಂಗ್ಲೆಂಡ್, ಅಮೆರಿಕಾ ದೇಶಗಳ ಚರಿತ್ರೆಯನ್ನು ಓದುತ್ತೇವೆಯೇ ಹೊರತು, ನಮ್ಮ ದೇಶದ ಚರಿತ್ರೆ ಸಂಸ್ಕೃತಿ ಇವುಗಳನ್ನು ವ್ಯಾಸಂಗ ಮಾಡುತ್ತಿಲ್ಲ. ಸಾಧಾರಣವಾಗಿ ನಮ್ಮ ದೇಶದ ಚರಿತ್ರೆ, ಸಂಸ್ಕೃತಿ ಹಿಂದಿನಿಂದ ಯಾವ ರಿತಿ ಇತ್ತು. ಅದರ ಹಿರಿಮೆಯೇನು, ಅದರ

ವೈಶಿಷ್ಟ್ಯವೇನು ಈ ವಿಚಾರಗಳನ್ನು ತಿಳಿದುಕೊಳ್ಳುವ ಶಿಕ್ಷಣ ದೊರೆಯುತ್ತಿಲ್ಲ. ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ನಮ್ಮ ದೇಶದ ಸಂಸ್ಕೃತಿ, ನಮ್ಮ ದೇಶದ ಇತಿಹಾಸ, ನಮ್ಮ ದೇಶದ ಚರಿತ್ರೆ, ಪ್ರತಿಯೊಂದು ವಿಷಯದಲ್ಲಿಯೂ ನಮ್ಮ ದೇಶ, ನಮ್ಮ ದೇಶ, ನಮ್ಮ ದೇಶ ಎಂಬ ಭಾವನೆ ನಮ್ಮ ಮಕ್ಕಳಿಗೆ ಚಿಕ್ಕಂದಿನಿಂದಲೇ ಬೆಳೆಯುವ ಹಾಗೆ ಮಾಡುವುದು ಅತ್ಯಾವಶ್ಯಕವೆಂದು ನಾನು ಒತ್ತಿ ಹೇಳುತ್ತೇನೆ. ಈಗೇನು ವಿದ್ಯಾಭ್ಯಾಸವನ್ನು ನಾವು ಪಡೆಯುತ್ತಿದ್ದೇವೋ ಅದರಿಂದ ಸಾದಾರಣವಾಗಿ ಬೇರೆಯವರನ್ನು ನಾವು ಅನುಕರಣ ಮಾಡುವ ಮನೋಭಾವನೆ ಬೆಳೆಯುತ್ತಿದೆಯೇ ಹೊರತು ನಮ್ಮ ಸಂಸ್ಕೃತಿಏನಿತ್ತೋ ಅದರಲ್ಲಿ ಅಭಿರುಚಿ ಬರುವುದಕ್ಕೆ ಸಹಕಾರಿಯಾಗಿಲ್ಲ. ಈಗ ಇರತಕ್ಕ ಪದ್ಧತಿಯನ್ನು ಸಂಪೂರ್ಣ ಕಿತ್ತು ಹಾಕಿ ಬೇರೊಂದು ಸಂಪೂರ್ಣ ಹೊಸ ಪದ್ಧತಿಯನ್ನು ತರಬೇಕೆಂದು ಹೇಳುವುದಕ್ಕಾಗುವುದಿಲ್ಲ. ಆದರೆ ತೀವ್ರ ಬದಲಾವಣೆಗಳಾಗಬೇಕೆಂದು ಹೇಳುವವರಲ್ಲಿ ನಾನೊಬ್ಬ. ಆದರೆ ಬದಲಾವಣೆಗಳನ್ನು ಯಾವ ರೀತಿ ಕಾರ್ಯಗತ ಮಾಡವುದೆಂಬುದನ್ನು ಹೇಳುವುದು ಕಠಿಣ ಪ್ರಶ್ನೆ. ಬದಲಾವಣೆಗಳ ರೂಪುರೇಖೆಗಳ ಪೂರ್ಣ ಅರಿವಾದರೂ ನನ್ನ ಅಲ್ಪಬುದ್ಧಿಗೆ ನಿಲುಕದ ಮಾತಾಗಿದೆ. ಆದರೆ ಕೆಲವು ವಿಚಾರಗಳಲ್ಲಿ ಮಾತ್ರ ಸಲಹೆ ಕೊಡಬಲ್ಲೆ. ಹಾಗೆಯೇ ಒಂದೊಂದು ವಿಚಾರದಲ್ಲಿ ಒಬ್ಬೊಬ್ಬರು ಒಂದೊಂದು ಸಲಹೆ ಕೊಡಬಹುದು. ಅವುಗಳೆಲ್ಲವನ್ನೂ ಕ್ರೋಢೀಕರಿಸಿ ಒಟ್ಟಿನಲ್ಲಿ ಸರಿಯಾದ ಒಂದು ರೂಪವನ್ನು ಕೊಡುವುದು. ಸರ್ಕಾರದವರ ಆದ್ಯ ಕರ್ತವ್ಯ. ಅಲ್ಲದೆ ಈಗಾಗಲೇ ಅನೇಕ ಜನ ವಿದ್ಯಾಭ್ಯಾಸದ ಕ್ರಮದಲ್ಲಿ ಪಾಂಡಿತ್ಯ ಪಡೆದಿರುವವರು ನಾನಾ ವಿಷಯಗಳನ್ನು ವರದಿಗಳ ಮುಖಾಂತರ ತಿಳಿಸಿದ್ದಾರೆ. ಅವನ್ನೆಲ್ಲಾ ಪರಿಶೀಲಿಸಿ ನಮ್ಮ ದೇಶದ ಸಂಸ್ಕೃತಿಗನುಗುಣವಾಗಿ ಯಾವ ವಿದ್ಯಾಭ್ಯಾಸದ ಕ್ರಮವನ್ನು ಜಾರಿಗೆ ತರಬೇಕೋ ಅಂಥ ಕ್ರಮವನ್ನು ಆದಷ್ಟು ಜಾಗ್ರತೆ ಜಾರಿಗೆ ತರತಕ್ಕದ್ದು ನಮ್ಮ ದೇಶದ ಹಿತದೃಷ್ಟಿಯಿಂದ ಬಹಳ ಅವಶ್ಯಕವೆಂದು ನಾನು ಒತ್ತಾಯಪೂರ್ವಕವಾಗಿ ಸೂಚಿಸುತ್ತೇನೆ.

ಇಷ್ಟು ಮಾತುಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ ಮತ್ತು ನನಗೆ ಅವಕಾಶಕೊಟ್ಟ ಅಧ್ಯಕ್ಷರಿಗೆ ವಂದಿಸುತ್ತೇನೆ.

**(a) Recommendation of Kothari Education commission**

**Q-387. Sri Siddaiah Kashimath (Shirahatti)-**

Will the Minister of Education be pleased to State:-

(a) Whether the Government has formulated its views on the recommendation of the "Kothari" Commission on Educational reforms;

(b) Whether they propose to consult the legislature before finalising its views;

(c) Whether they intend to have a small Committee consisting of legislations and Educationalists to scrutinise the recommendations of the Committee.

**A- Sri K.V. Shankara Gowda (Minister for education)-**

(a) The Commission's recommendations are being studied.

(b) Yes, if time permits,

(c) This is not considered necessary. The State Advisory Committees on various branches of education will scrutinise the recommendations in detail.

**Sri Siddaiah Kashimath-** What is the difficulty in forming a small committee to scrutinise these things?

**Sri K.V. Shankara Gowda-** It is not felt necessary.

**Recommendations of Kothari Education Commission**

**Q-532. Sri Srikantaiah (Nanjangud)-**

Will the Minister for Education be pleased to state:-

(a) The recommendation or recommendations contained in the report of Kothari Education Commission that the Government has accepted;

(b) Whether Government have decided to do away with one year Pre-University Course;

(c) Whether Government has reserved to introduce two years pre-Collegitate Course and if so in what form?

**A- Sri K.V. Shankara Gowda (Minister of Education)-**

(a) No decission has been taken on the Commission's recommendations so far.

(b) and (c) Do not arise in view of the reply to clause (a) above.

ಶ್ರೀ ಎಲ್. ಶ್ರೀಕಂಠಯ್ಯ- ಸ್ವಾಮಿ, ಯಾವುದಾದರೂ ಒಂದು ನಿರ್ಧಾರಕ್ಕೆ ಬರುವುದಕ್ಕೆ ಮುಂಚೆ ತಾವು ದಿಲ್ಲಿಗೆ ಪ್ರಯಾಣ ಮಾಡಿದಾಗ ಅಲ್ಲಿ ಏನು ಅಭಿಪ್ರಾಯ ನೀವು ಸೂಚಿಸಿದಿರಿ?

ಶ್ರೀ ಕೆ.ವಿ. ಶಂಕರಗೌಡ- ಅಲ್ಲಿ ನಿರ್ಧಾರ ತೆಗೆದುಕೊಳ್ಳಲಿಲ್ಲ. ರೆಕಮೆಂಡೇಷನ್ಸ್ ಮಾಡಿದ್ದೇವೆ. ಸರ್ಕಾರ ಪರಿಶೀಲನೆ ಮಾಡಿ ಕೊನೆಯ ನಿರ್ಧಾರವನ್ನು ಇಂಡಿಯಾ ಸರಕಾರಕ್ಕೆ ತಿಳಿಸುತ್ತೇವೆ.

ಶ್ರೀ ಎಲ್. ಶ್ರೀಕಂಠಯ್ಯ- ಮಾರ್ಚಿ ತಿಂಗಳಲ್ಲಿ ಒಂದು ಎಗ್ಸಿಕ್ಯೂಟಿವ್ ಕನ್‌ಸಲ್ಟೇಟೀವ್ ಕಮಿಟಿ ಎಂದು ಮಾಡಿಕೊಂಡಿದ್ದರು. ಈ ಸಭೆಯಲ್ಲಿ ಮೈಸೂರು ಸರ್ಕಾರಕ್ಕೆ ಪ್ರಾತಿನಿಧ್ಯ ದೊರೆಯುವುದಕ್ಕೆ ಸೂಚಿಸಿದಿರಾ? ಹಾಗೂ ಹೊಡೆದಾಡಿದಿರಾ?

ಶ್ರೀ ಕೆ.ವಿ. ಶಂಕರಗೌಡ- ಅಂಥ ಯಾವ ಒಂದು ಕಮಿಟಿ ಮಾಡಿಲ್ಲ. ಆದರೆ ತ್ರಿಭಾಷಾ ಸೂತ್ರದ ಮೇಲೆ ಒಂದು ಕಮಿಟಿ ಮಾಡಿದ್ದಾರೆ.

ಶ್ರೀ ಎಲ್. ಶ್ರೀಕಂಠಯ್ಯ- ಅದರಲ್ಲಿ ನಮಗೆ ಪ್ರಾತಿನಿಧ್ಯ ಕೊಡಬೇಕು ಎಂದು ತಾವು ಸೂಚಿಸಿದಿರಾ ಮತ್ತು ಅದರ ಬಗ್ಗೆ ಹೊಡೆದಾಡಿದಿರಾ?

ಶ್ರೀ ಕೆ.ವಿ. ಶಂಕರಗೌಡ- ಅದರಲ್ಲಿ ಎಲ್ಲರೂ ಇರಬೇಕೆಂದು ಇಲ್ಲ. ಅದರಲ್ಲಿ ಕೆಲವರನ್ನು ಹಾಕಿದ್ದಾರೆ.

ಶ್ರೀ ಎಲ್. ಶ್ರೀಕಂಠಯ್ಯ- ದಿಲ್ಲಿಯವರು ಹೇಳುವ ಮಾತನ್ನು ನೀವು ಒಪ್ಪಿಕೊಳ್ಳುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ನಾವು ನಮ್ಮ ತಲೆಯನ್ನು ಉಪಯೋಗಿಸುತ್ತೇವೆ.

ಶ್ರೀ ಎಲ್. ಶ್ರೀಕಂಠಯ್ಯ- ಒಂದು ವರ್ಷದ ಯೂನಿವರ್ಸಿಟಿ ಕೋರ್ಸ್ ಇರಬೇಕೆಂದು ನಿರ್ಧಾರ ಯಾವಾಗ ಕೈಗೊಳ್ಳುತ್ತೀರಿ?

ಶ್ರೀ ಕೆ.ವಿ. ಶಂಕರಗೌಡ- ಅದು ಸರ್ಕಾರದ ಪರಿಶೀಲನೆಯಲ್ಲಿ ಇನ್ನೂ ಇದೆ.

ಶ್ರೀ ಸಿದ್ದಯ್ಯ ಕಾಶೀಮಠ- ಅದರಲ್ಲಿ ಕೆಲವು ಅತ್ಯಗತ್ಯ ಶಿಫಾರಸ್ಸುಗಳು ಇವೆ. ಅವುಗಳನ್ನು ಗಣನೆಗೆ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೀರಾ ?

ಶ್ರೀ ಕೆ.ವಿ. ಶಂಕರಗೌಡ- ಎಲ್ಲಾ ಶಿಫಾರಸ್ಸುಗಳನ್ನು ಪರಿಶೀಲನೆ ಮಾಡಿ ಯಾವುದನ್ನು ಜಾರಿಗೆ ತರುವುದು ಅಗತ್ಯವಿದೆಯೋ ಅದನ್ನು ಜಾರಿಗೆ ತರುತ್ತೇವೆ.

ಶ್ರೀ ಎಲ್. ಶ್ರೀಕಂಠಯ್ಯ- ಈ ಬಗ್ಗೆ ಕರ್ನಾಟಕ ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಅವರ ಅಭಿಪ್ರಾಯ ಕೇಳಿದ್ದೀರಾ ?

ಶ್ರೀ ಕೆ.ವಿ. ಶಂಕರಗೌಡ- ಅವರ ಅಭಿಪ್ರಾಯ ಕೇಳಿದ್ದೇವೆ.

ಶ್ರೀ ಎಸ್.ಗೋಪಾಲಗೌಡ- ಈ ಕೋಠಾರಿಯವರ ಆಯೋಗದ ವರದಿ ಪರಿಶೀಲನೆ ಮಾಡುವುದಕ್ಕೆ ರಾಜ್ಯ ಸರ್ಕಾರಕ್ಕೆ ಸಲಹೆ ಕೊಟ್ಟು ಸಹಾಯ ಮಾಡುವುದಕ್ಕೆ ವಿದ್ಯಾಭ್ಯಾಸ ಇಲಾಖೆಯಲ್ಲಿ ಅಧಿಕಾರಿಗಳು ಇರತಕ್ಕಂಥ ತಜ್ಞರ ಯೂನಿವರ್ಸಿಟಿ ವೈಸ್ ಚಾನ್ಸಲರ್ ಅವರನ್ನು ಸೇರಿಸಿ ಏನಾದರೂ ವಿಚಾರ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೀರಾ ?

ಶ್ರೀ ಕೆ.ವಿ.ಶಂಕರಗೌಡ- ಅವರನ್ನು ಸೇರಿಸಿ ಒಂದು ಕಾನ್‌ಫರೆನ್ಸ್ ಕರೆಯಲಾಗಿದೆ, ಡಿಸ್ಕಸ್ ಮಾಡಲಾಗಿದೆ.

**Sri A.R. Badari Naryayan**- Is it not desirable to bring the P.U.C. and XI Standard under the University Control?

ಶ್ರೀ ಕೆ.ವಿ. ಶಂಕರಗೌಡ- ಈ ಪ್ರಶ್ನೆ ಪರಿಶೀಲನೆಯಲ್ಲಿದೆ.

ಶ್ರೀ ಎಲ್. ಶ್ರೀಕಂಠಯ್ಯ- ಯೂನಿವರ್ಸಿಟಿಯವರಿಗೆ ಈ ಸಮಾಚಾರ ಕೇಳಿದ್ದೇವೆಂದು ಹೇಳಿದಿರಿ. ಆದರೆ ಪತ್ರಿಕೆಗಳಲ್ಲಿ ನಿರ್ಧಾರ ಪ್ರಕಟವಾದುದು ಗಮನಕ್ಕೆ ಬಂದಿದೆಯೇ ?

ಶ್ರೀ ಕೆ.ವಿ. ಶಂಕರಗೌಡ- ಸರಕಾರದ ನಿರ್ಧಾರ ಪ್ರಕಟವಾಗಿಲ್ಲ. ಅದು ನನ್ನ ಗಮನಕ್ಕೆ ಬಂದಿಲ್ಲ.

ಶ್ರೀ ಎಂ.ಎಸ್. ಕೃಷ್ಣನ್- ಕೊಠಾರಿ ಕಮಿಷನ್ ರೆಕಮೆಂಡೇಷನ್ಸ್ ಪರಿಶೀಲನೆ ಮಾಡುತ್ತೇವೆ ಎಂದು ಹೇಳಿದಿರಿ. ಪರಿಶೀಲನೆ ಮಾಡುವುದಕ್ಕೆ ಎಷ್ಟು ದಿವಸವಾಗಬಹುದು ? ತೀರ್ಮಾನ ಯಾವಾಗ ಮಾಡಬಹುದು.

ಶ್ರೀ ಕೆ.ವಿ. ಶಂಕರಗೌಡ- ಅದು ದೊಡ್ಡದಾಗಿದೆ, ಗಹನವಾಗಿದೆ. ಅಷ್ಟು ಸುಲಭವಾಗಿ ಜಾರಿಗೆ ತರುವುದು ಕಷ್ಟ. ಅದರಲ್ಲಿ ಆರ್ಥಿಕ ವಿಷಯ ಇದೆ, ತಾಂತ್ರಿಕ ವಿಷಯ ಇದೆ.

ಬಹಳ ಕಠಿಣವಾದ ಸಮಸ್ಯೆ. ಅದಕ್ಕೆ ಸಾಕಷ್ಟು ಕಾಲ ಬೇಕು. ವಿವಿಧ ಹಂತದಲ್ಲಿ ಪರಿಶೀಲನೆ ಮಾಡಲು ಕ್ಯಾಬಿನೆಟ್ ಸಬ್ ಕಮಿಟಿ ನೇಮಕವಾಗಿದೆ. ಶಿಫಾರಸುಗಳನ್ನು ಪರಿಶೀಲನೆ ಮಾಡುತ್ತಾ ಇದೆ. ಆದುದರಿಂದ ಅಂತಿಮ ತೀರ್ಮಾನ ಮಾಡಿ ಅದರ ಮೇಲೆ ಕ್ಯಾಬಿನೆಟ್ ತೀರ್ಮಾನ ಕೈಕೊಳ್ಳುತ್ತದೆ.

ಶ್ರೀ ಆರ್.ಎನ್. ಲಕ್ಷ್ಮೀಪತಿ- ನಮಗೆ ಸ್ವಾತಂತ್ರ್ಯ ಬಂದ ಮೇಲೆ ವಿದ್ಯಾಭ್ಯಾಸದ ಕ್ರಮದಲ್ಲಿ ಬದಲಾವಣೆಯಾಗಬೇಕು ಎಂದು ನೇಮಕ ಮಾಡಿದ ಕಮಿಟಿಯ ಶಿಫಾರಸುಗಳನ್ನು ಸರಕಾರ ಒಪ್ಪಿಕೊಂಡಿದೆ. Shall we take that this will be the last committee and what comes out of it will be final and settled?

ಶ್ರೀ ಕೆ.ವಿ. ಶಂಕರಗೌಡ- ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಇದೇ ಕೊನೆಯ ಕಮಿಟಿ ಎಂದು ತೀರ್ಮಾನ ಮಾಡುವ ಹಾಗೆ ಇಲ್ಲ. ಕಾಲ ತೀವ್ರ ಬದಲಾವಣೆಯಾಗುತ್ತಿದೆ. 10 ವರ್ಷಗಳ ಹಿಂದೆ ಇದ್ದ ಪರಿಸ್ಥಿತಿ ಇಂದು ಇಲ್ಲ. ಇಂದು ಇರುವುದು ಮುಂದೆ 10 ವರ್ಷಗಳ ಮೇಲೆ ಇರುವ ಹಾಗೆ ಇಲ್ಲ. ಆದುದರಿಂದ ಪದೇ ಪದೇ ಬದಲಾವಣೆಯಾಗಬೇಕಾಗುತ್ತದೆ.

ಶ್ರೀ ಜೆ.ಆರ್.ಹಾಲಸ್ವಾಮಿ- ಪಿ.ಯು.ಸಿ. ಪದ್ಧತಿಯನ್ನು ಬದಲಾಯಿಸಿ ಮೊದಲು ಇದ್ದಂತೆ ಇಂಟರ್ ಮೀಡಿಯಟ್ ತರಗತಿಗಳನ್ನು ಮತ್ತೊಮ್ಮೆ ಜಾರಿಗೆ ತರುವ ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆಯೇ?

ಶ್ರೀ ಕೆ.ವಿ.ಶಂಕರಗೌಡ- ಮೊದಲಿದ್ದಂತೆ ಇಂಟರ್‌ಮೀಡಿಯಟ್ ಎಂದು ಹೇಳುವುದಕ್ಕೆ ಆಗುವುದಿಲ್ಲ. ಆದರೆ ಈಗ ಇರುವ ಪಿ.ಯು.ಸಿ. ಮತ್ತು 11ನೇ ಸ್ಟಾಂಡರ್ಡ್ ಇವುಗಳನ್ನು ಎರಡು ವರ್ಷ ಮಾಡಬೇಕೆಂದು ವಿದ್ಯಾಮಂತ್ರಿಗಳ ಸಮ್ಮೇಳನದಲ್ಲಿ ಶಿಫಾರಸ್ಸು ಮಾಡಿದ್ದಾರೆ. ಅದನ್ನು ನಮ್ಮ ಸರ್ಕಾರದವರು ಪರಿಶೀಲನೆ ಮಾಡುತ್ತಿದ್ದಾರೆ.

ಶ್ರೀ ಎ.ಮುನಿಯಪ್ಪ- ಈಗಿನ ಸನ್ನಿವೇಶವನ್ನೂ ಮತ್ತು ಇನ್ನು ಹತ್ತು ವರ್ಷಗಳ ನಂತರ ಇರಬಹುದಾದ ಸನ್ನಿವೇಶವನ್ನೂ ನೋಡಿಕೊಂಡು ವಿದ್ಯಾಭ್ಯಾಸದ ಕ್ರಮಗಳನ್ನು ಅಡಾಪ್ಟ್ ಮಾಡುವುದಕ್ಕೆ ನಿಮ್ಮ ಅಭಿಪ್ರಾಯವೇನು?

ಶ್ರೀ ಕೆ.ವಿ.ಶಂಕರಗೌಡ- ಸಮಾಜದಲ್ಲಿರುವ ಸ್ಥಿತಿಗತಿಗಳನ್ನು ನೋಡಿಕೊಂಡು ಅನುಷ್ಠಾನಕ್ಕೆ ತರುತ್ತಿದ್ದೇವೆ.

**Sri. P.B. Nandihali-** May I know whether Government is satisfied with the present system of one Year P.U.C. Course?

**Sri. K.V. Shankara Gowda-** I cannot exactly say. According to experts opinion it is found necessary that it should be of two years duration.

ಶ್ರೀ **ಎಸ್.ಗೋಪಾಲಗೌಡ**– ಈ ಆಯೋಗದವರ ವರದಿ ಬಗ್ಗೆ ಇದುವರೆಗೆ ಪರಿಶೀಲನೆ ಮಾಡಿರುವುದರಲ್ಲಿ ಸರ್ಕಾರದವರು ಯಾವುದಾದರೂ ಸಲಹೆಗಳನ್ನು ಅಂಗೀಕಾರ ಮಾಡಿದ್ದಾರೆಯೇ, ಕೇಂದ್ರ ಸರ್ಕಾರದವರು ರಾಜ್ಯ ಸರ್ಕಾರದವರು ಯಾವಾಗ ತೀರ್ಮಾನ ಮಾಡಬೇಕು ಎನ್ನುವ ಸಲಹೆಯನ್ನು ಕೊಟ್ಟಿದ್ದಾರೆಯೇ?

ಶ್ರೀ ಕೆ.ವಿ.ಶಂಕರಗೌಡ– ಕೇಂದ್ರ ಸರ್ಕಾರದವರು ಯಾವ ಅವಧಿಯನ್ನೂ ನಿಗಧಿ ಮಾಡಿಲ್ಲ. ಕೊಠಾರಿ ಕಮಿಷನ್‌ನಲ್ಲಿ ಬಂದಿರುವ ಅನೇಕ ಶಿಫಾರಸ್ಸುಗಳನ್ನು ಈಗಾಗಲೇ ಮೈಸೂರು ದೇಶದಲ್ಲಿ ಜಾರಿಗೆ ಕೊಡಲಾಗಿದೆ. ಕೆಲವು ಮುಖ್ಯ ಶಿಫಾರಸ್ಸುಗಳ ವಿಷಯದಲ್ಲಿ ಸರ್ಕಾರ ಪರಿಶೀಲನೆ ಮಾಡುತ್ತಿದೆ.

ಶ್ರೀ ಆರ್.ಎಸ್. ಲಕ್ಷ್ಮೀಪತಿ– ಈ ಆಯೋಗದವರು ಬಹಳ ಒಳ್ಳೆಯ ಶಿಫಾರಸ್ಸು ಮಾಡಿದ್ದಾರೆಂದು ಕೇಳಿದ್ದೇನೆ. ಆಯೋಗದ ಶಿಫಾರಸ್ಸಿನ ಒಂದು ಪ್ರತಿಯನ್ನು ಸದಸ್ಯರಿಗೆ ಕೊಡುವುದಕ್ಕೆ ಸಾಧ್ಯವಾಗುತ್ತದೆಯೇ?

ಶ್ರೀ ಕೆ.ವಿ.ಶಂಕರ**ಗೌ**ಡ– ಒಳ್ಳೆಯ ಶಿಫಾರಸ್ಸುಗಳನ್ನು ಮಾಡಿದ್ದಾರೆ. ಪ್ರತಿ ಬಹಳ ದೊಡ್ಡದು. ಅದರಲ್ಲಿ ಸಾವಿರ ಚಿಲ್ಲರೆ ಪುಟಗಳಿವೆ. ಅದನ್ನು ಅಚ್ಚು ಮಾಡಿಸುವುದು ಬಹಳ ಕಷ್ಟ. ಆದುದರಿಂದ ಪ್ರತಿಯನ್ನು ಸದಸ್ಯರಿಗೆ ಕೊಡುತ್ತೇವೆಂದು ವಾಗ್ದಾನ ಮಾಡುವುದು ಕಷ್ಟವಾಗುತ್ತದೆ.

ಶ್ರೀ ಜೆ.ಆರ್. ಹಾಲಸ್ವಾಮಿ– ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಜಾರಿಯಲ್ಲಿರುವಂತೆ ಡಿಗ್ರಿ ತರಗತಿಗಳಲ್ಲಿ ಪ್ರತಿ ವರ್ಷವೂ ಪಬ್ಲಿಕ್ ಪರೀಕ್ಷೆಯನ್ನು ನಡೆಸುವ ವಿಷಯವನ್ನು ಸರ್ಕಾರ ಪರಿಶೀಲಿಸುವುದೇ?

ಶ್ರೀ ಕೆ.ವಿ.ಶಂಕರಗೌಡ– ಎಲ್ಲಾ ಪ್ರಶ್ನೆಗಳೂ ಪರಿಶೀಲನೆಯಲ್ಲಿವೆ. ಪರೀಕ್ಷೆ ಪದ್ಧತಿಯನ್ನು ಯಾವ ರೀತಿ ಮಾಡಬೇಕು ಎನ್ನುವ ವಿಷಯ ಕೂಡ ಸರ್ಕಾರದ ಪರಿಶೀಲನೆಯಲ್ಲಿದೆ.

ಶ್ರೀ ಎಚ್.ಸಿದ್ದವೀರಪ್ಪ– ಕೊಠಾರಿ ಕಮಿಷನ್ ರಿಪೋರ್ಟ್‌ನ್ನು ಅಧ್ಯಯನ ಮಾಡಲು ಒಂದು ಕ್ಯಾಬಿನೆಟ್ ಸಬ್ ಕಮಿಟಿಯನ್ನು ನೇಮಿಸಲಾಗಿದೆ ಎಂದು ಹೇಳಿದಿರಿ ಇನ್ನು ಮುಂದೆ ಈ ಶಿಫಾರಸ್ಸುಗಳಲ್ಲಿ ಯಾವ ಭಾಗಗಳನ್ನಾದರೂ ಜಾರಿಗೆ ಕೊಡುವುದಕ್ಕೆ ಮುಂಚೆ ಈ ಸಭೆಯನ್ನು ನಂಬಿಕೆಗೆ ತೆಗೆದುಕೊಂಡು ಸಭೆಯನ್ನು ವಿಚಾರ ಮಾಡಿ, ಅವುಗಳನ್ನು ಜಾರಿಗೆ ಕೊಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ವಿ.ಶಂಕರಗೌಡ- ಈ ಸಭೆಯನ್ನು ನಂಬಿಕೆಗೆ ತೆಗೆದುಕೊಳ್ಳದೆ ಯಾವುದನ್ನೂ ಜಾರಿಗೆ ಕೊಡುವುದಕ್ಕೆ ಬರುವುದಿಲ್ಲ.

**Sri H. Siddaveerappa-** Before you take any further decission in the matter, will you be pleased to consult this House and then take a decission?

**Sri K.V. Shankara Gowda-** I Very much wish that this report should be discussed in this House, but to only difficulty is a about the printing of this report which runs into so many pages. So I cannot definitely say whether I can place it before the House for discussion.

**Sri H.Siddaveerappa-** You can even summarise and place only the main recommendations in the hands of members. I am eager to know whether before you make any further experiment in education you would consult this House by arranging for its discussion here.

**Sri K.V. Shankara Gowda-** It is a very good suggestion. I will consider it.

**Sri. Digambar Rao Balwant Rao-** May I know whether a summary of the report will be made available to members before the discussion takes place?

**Mr. Speaker-** We have got the full report in the Library.

**Sri K.V. Shankara gowda-** I am thinking of getting printer summary of the recommendations. I think I will be able to do so. In that case I will place a copy of that summary in the hands of hon'ble Members.

**Sri. A.R. Badari Narayan-** In view of the urgency and importance of the matter, will Government consider coming to an early conclusion on this matter?

**Sri K.V. Shankara Gowda-** I do appreciate the anxiety of the hon'ble member, but hasty conclusions will not do in this case because the recommendations are of a very far racing character

and so we will have to very carefully examine the various recommendations and come to certain decisions. I will certainly bear the suggestion of the hon'ble member in mind.

ಶ್ರೀ ಎಂ.ಎಸ್. ಕೃಷ್ಣನ್- ವಿದ್ಯಾಭ್ಯಾಸದ ಪದ್ಧತಿ ಮತ್ತು ಕ್ರಮ ಮೈಸೂರು ದೇಶದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೀತಿಯಾಗಿರುವುದರಿಂದ ಎಲ್ಲ ಕಡೆಯೂ ಏಕರೂಪವಾಗಿರುವಂತೆ ಮಾಡಲು ತಕ್ಷಣ ಕ್ರಮ ಕೈಗೊಳ್ಳುತ್ತೀರಾ?

**ಶ್ರೀ ಕೆ.ವಿ.ಶಂಕರಗೌಡ-** ಕೊಠಾರಿ ಕಮಿಷನ್ ವರದಿಯಲ್ಲಿ ಏಕರೂಪತೆಯಿಂದ ಬೇಕಾದ ಆವಶ್ಯಕತೆಯಿಲ್ಲವೆಂದು ಸೂಚಿಸಿದ್ದಾರೆ. ವಿವಿಧತೆಯಿದ್ದರೆ ಒಳ್ಳೆಯದೆಂಬುದು ಆ ಕಮಿಷನ್ ಅಭಿಪ್ರಾಯವಾಗಿದೆ. ಆದುದರಿಂದ ಎಲ್ಲ ವಿಷಯಗಳಲ್ಲೂ ಏಕರೂಪತೆ ತರುವುದಕ್ಕೆ ಸಾಧ್ಯವಿಲ್ಲ, ಕೆಲವು ವಿಷಯಗಳಲ್ಲಿ ತರಬೇಕಾಗುತ್ತದೆ.

ಶ್ರೀ ಎ. ನಂಜಪ್ಪ- ಹಾಗಾಗಿಲ್ಲ, ಒಂದೇ ಒಂದು ಸಲ ಬದಲಾವಣೆ 20 ವರ್ಷದಿಂದ ದೊಡ್ಡದಾಗಿ ಆಗಿರುವುದು. ಅದೇನೆಂದರೆ ಮೊದಲಿದ್ದ ಇಂಟರ್ ಮೀಡಿಯೆಟ್ ಪರೀಕ್ಷೆ ತೆಗೆದು ಒಂದು ವರ್ಷದ ಪಿ.ಯು.ಸಿ. ಅಥವಾ 11ನೆಯ ಸ್ಟಾಂಡರ್ಡ್ ಇರುವಂತೆ ಮಾಡಿದ್ದಾರೆ. ಸಣ್ಣ ಸಣ್ಣ ಬದಲಾವಣೆಯಾಗಿರಬಹುದು. ಆದುದರಿಂದ ಅನೇಕ ಬದಲಾವಣೆ ದೊಡ್ಡದಾಗಿ ಏನೂ ಆಗಿಲ್ಲ.

# ಅಂಕೋಲಾ ತಾಲ್ಲೂಕು ಪ್ರೈಮರಿ ಶಾಲೆಗಳ ಬಗ್ಗೆ

ದಿನಾಂಕ: 7.7.1967

ಶ್ರೀ ಡಿ.ಎಸ್.ನಾಡಕರ್ಣಿ– ಉತ್ತರ ಕನ್ನಡ ಜಿಲ್ಲೆಯಲ್ಲಿ 37 ಶಾಲೆಗಳಿಗೆ ಕಟ್ಟಡವಿಲ್ಲ. ಕೆಲವು ಕಡೆ ಸರಕಾರ ಕಟ್ಟಡ ಕಟ್ಟಿಸಿಕೊಟ್ಟಿರುವಂತೆ ಅಂಕೋಲದಲ್ಲೂ ವಿಮೆನ್ಸ್ ವೆಲ್‌ಫೇರ್ ಫಂಡಿನಿಂದಲಾದರೂ ಕಟ್ಟಿಸಿಕೊಡುವುದೇ?

ಶ್ರೀ ಕೆ.ವಿ. ಶಂಕರಗೌಡ– ಪ್ರಾಥಮಿಕ ಶಾಲಾ ಕಟ್ಟಡಕ್ಕೆ ಸರಕಾರ ಹಣ ಕೊಡುವುದಿಲ್ಲ, ಕಟ್ಟಡ ಒದಗಿಸುವುದು ತಾಲ್ಲೂಕು ಮಂಡಲಿಯ ಜವಾಬ್ದಾರಿ.

ಶ್ರೀ ಡಿ.ಎಸ್.ನಾಡಕರ್ಣಿ– ಪ್ರಾಥಮಿಕ ಶಾಲೆಗೆ ಒಂದು ಕಡೆ ಶೇಕಡ 75 ಭಾಗ ಕಟ್ಟಡಕ್ಕಾಗಿ ಕೊಡಲಾಗಿದೆ. ಅಂಕೋಲದಲ್ಲಿ ಹೈಸ್ಕೂಲಿಗೆ ಪೂರ್ತಿ ಖರ್ಚು ಕೊಡಲಾಗಿದೆ. ನಾನು ಕೇಳುವುದು ಹೆಣ್ಣು ಹುಡುಗರ ಶಾಲೆಯಾದ್ದರಿಂದ ಅವರ ಶಿಕ್ಷಣಕ್ಕೆ ತೊಂದರೆಯಾಗಿರುವುದರಿಂದ ವಿಮೆನ್ ವೆಲ್‌ಫೇರ್ ಫಂಡಿನಿಂದಲಾದರೂ ಹಣಕೊಡಲು ಸಾಧ್ಯವೇ?

ಶ್ರೀ ಕೆ.ವಿ. ಶಂಕರಗೌಡ– ಬಹಳ ಹಿಂದೆ ಕೊಟ್ಟಿರಬಹುದು. ಈಗಿನ ಪದ್ಧತಿಯಂತೆ ಅದು ಸರಕಾರದ ಜವಾಬ್ದಾರಿಯಲ್ಲ, ಒಂದು ಸಾವಿರ ರೂಪಾಯಿ ಮಾತ್ರ ಸರಕಾರ ಕೊಡುವುದು. ಶೇಕಡ 40 ಭಾಗ ಗ್ರಾಮಸ್ಥರು ಕೊಡಬೇಕು, ಉಳಿದಿರುವುದನ್ನು ತಾಲ್ಲೂಕು ಬೋರ್ಡ್ ಮತ್ತು ಸರಕಾರ ಯಾವ ಸಹಾಯ ಕೊಡಬಹುದೋ ಅದನ್ನು ಕೊಡಲು ಏರ್ಪಾಡು ಮಾಡಲಾಗುವುದು.

ಶ್ರೀ ಎಂ.ಎಚ್.ಜಯಪ್ರಕಾಶ್ ನಾರಾಯಣ್– ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 120 ರಿಂದ 150 ಮೈಲಿ ದೂರಗಳಿರುವ ಮಲೆನಾಡು ಭಾಗಗಳಲ್ಲಿ ಇರುವ ಪ್ರಾಥಮಿಕ ಶಾಲೆಗಳಿಗೆ ಸುಮಾರು 52 ಶಾಲೆಗಳಿಗೆ ಕಟ್ಟಡವಿಲ್ಲ. ಇಂತಹ ಶಾಲೆಗಳಿಗೆ ಸಹಾಯ ಕೊಡುವಾಗ ಈಗ ಕೊಡುತ್ತಿರುವ ಒಂದು ಸಾವಿರ ರೂಪಾಯಿಗಳಷ್ಟು ಸಹಾಯ ಧನವನ್ನು ಇನ್ನೂ ಹೆಚ್ಚಿಸುವುದಕ್ಕೆ ಸಾಧ್ಯವಿಲ್ಲವೇ?

ಶ್ರೀ ಕೆ.ವಿ. ಶಂಕರಗೌಡ– ಇದು ಸಾಧ್ಯವಿಲ್ಲ.

ಶ್ರೀ ಚಿಕ್ಕೇಗೌಡ– ಶಾಲಾ ಕಟ್ಟಡಗಳಿಗೆ ಅಂದಾಜು ಮಾಡಿರುವ ಪ್ರಕಾರ ಒಂದು ರೂಮಿಗೆ ಎಷ್ಟು ಖರ್ಚು ಬರುತ್ತದೆ?

ಶ್ರೀ ಕೆ.ವಿ.ಶಂಕರಗೌಡ– ಒಂದು ರೂಮಿಗೆ ಸುಮಾರು ಮೂರು ಅಥವಾ ನಾಲ್ಕು ಸಾವಿರದವರೆಗೆ ಬರಬಹುದು.

ಶ್ರೀ ಎಸ್.ಗೋಪಾಲಗೌಡ- ರಾಜ್ಯಾಂಗದ ನಿರ್ದೇಶನದ ತತ್ವಗಳ ಪ್ರಕಾರ ಪ್ರಾಥಮಿಕ ಶಾಲೆಗಳ ಹೊಣೆ ಮತ್ತು ಜವಾಬ್ದಾರಿ ಸರಕಾರದ ಮೇಲಿದೆ. ಆದರೆ ನೀವೀಗ ಹೇಳುತ್ತೀರಿ ಪ್ರೈಮರಿ ಶಾಲೆಗಳ ಕಟ್ಟಡ ಕಟ್ಟಿಸುವುದು ಸರಕಾರದ ಹೊಣೆಯಲ್ಲ ಎಂದು, ಇದರಲ್ಲಿ ಯಾವುದು ಸರಿ? ಕಟ್ಟಡ ಬಿಟ್ಟು ಪ್ರೈಮರಿ ವಿದ್ಯಾಭ್ಯಾಸವೇ?

ಶ್ರೀ ಕೆ.ವಿ. ಶಂಕರಗೌಡ- ಮಾನ್ಯ ಸದಸ್ಯರು ನನ್ನ ಅಭಿಪ್ರಾಯವನ್ನು ತಪ್ಪಾಗಿ ತಿಳಿದುಕೊಂಡಿದ್ದಾರೆ. ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ವೆಚ್ಚ ಮಾಡತಕ್ಕದ್ದು ಸರಕಾರದ ಆದ್ಯ ಕರ್ತವ್ಯ, ಇದು ರಾಜ್ಯಾಂಗದಲ್ಲೂ ಉಲ್ಲೇಖಿತವಾಗಿದೆ. ಇದನ್ನು ಸರಕಾರ ಮಾಡುತ್ತಿದೆ. ಕಟ್ಟಡಗಳನ್ನು ಕಟ್ಟತಕ್ಕದ್ದು ತಾಲ್ಲೂಕು ಬೋರ್ಡುಗಳು ವಹಿಸಬೇಕು ಮತ್ತು ಅವರು ಕಟ್ಟಿಸಬೇಕು. ಅಲ್ಲದೆ ತಾಲ್ಲೂಕು ಬೋರ್ಡ್‌ಗಳಿಗೆ ದುಡ್ಡನ್ನು ಸರಕಾರದವರೇ ಕೊಡುತ್ತಿದ್ದಾರೆ ಎನ್ನುವುದನ್ನು ಮಾನ್ಯ ಸದಸ್ಯರು ಮರೆಯಬಾರದು.

ಶ್ರೀ ಡಿ.ಎಸ್. ನಾಡಕರ್ಣಿ- ಒಂದು ಸಾವಿರ ರೂಪಾಯಿಗಳಲ್ಲಿ ಇಮಾರತ್ತನ್ನು ಕಟ್ಟಲಿಕ್ಕಾಗುತ್ತದೆಯೇ?

(ಉತ್ತರವಿಲ್ಲ)

ಶ್ರೀ ಎಂ.ಎಚ್. ಜಯಪ್ರಕಾಶ ನಾರಾಯಣ್- ತಾಲ್ಲೂಕು ಬೋರ್ಡುಗಳಲ್ಲಿ ಹಾಗೂ ಪಂಚಾಯಿತಿಗಳಲ್ಲಿ ಪ್ರೈಮರಿ ವಿದ್ಯಾಭ್ಯಾಸ ಜನಗಳಿಗೆ ಕೊಡಲು ಸಾಕಷ್ಟು ಚೈತನ್ಯವಿಲ್ಲದೆ ಇರುವುದರಿಂದ ಅಂತಹ ಕಡೆಗಳಲ್ಲಿ ಹೇಗೆ ಮಾಡಬೇಕು ಎಂದು ಸರಕಾರದ ಅಭಿಪ್ರಾಯವಿದೆ?

ಶ್ರೀ ಕೆ.ವಿ. ಶಂಕರಗೌಡ- ಎಜುಕೇಷನ್ನೇನೋ ಉಚಿತವಾಗಿ ಕೊಡಬೇಕು. ಆದರೆ ಗ್ರಾಮಾಂತರ ಪ್ರದೇಶಗಳಲ್ಲಿ ಚೈತನ್ಯ ಕ್ರೋಢೀಕರಣದ ಮುಖ್ಯಸ್ಥರುಗಳು ಇದರ ಕಡೆಗೆ ಸ್ವಲ್ಪ ಹೆಚ್ಚು ಪ್ರಯತ್ನ ಮಾಡಬೇಕು.

**Sri Digambar Rao Balwant Rao-** In case no funds are forth coming from Taluk boards of construct on of building for primary Education, is it not the duty of the Government to build the buildings for Primary Education?

ಶ್ರೀ ಕೆ.ವಿ. ಶಂಕರಗೌಡ- ಇಲ್ಲ.

ಶ್ರೀ ಪಿ.ತಮ್ಮಯ್ಯ- ಸರಕಾರದವರು ಪ್ರಾಥಮಿಕ ಶಾಲಾ ಕಟ್ಟಡಗಳಿಗಾಗಿ ಒಂದು ಸಾವಿರ ರೂಪಾಯಿಗಳಷ್ಟು ಕೊಡಬೇಕು ಎಂದು ಅದಕ್ಕೆ ತಕ್ಕಂತೆ ತಾಲ್ಲೂಕು ಬೋರ್ಡ್‌ಗಳಲ್ಲಿ ಅಥವಾ ಪಂಚಾಯಿತಿಗಳಲ್ಲಿ ಪ್ಲಾನುಗಳನ್ನು ಮಾಡಿದ್ದಾರೆ. ಈಗ ಇದನ್ನು ಸ್ವಲ್ಪ ಬದಲಾವಣೆ ಮಾಡಿ ಈಗ ನೀವು ಕೊಡುವ ಹಣಕ್ಕೆ ಅನುಕೂಲವಾಗುವಂತೆ ಮಾಡುವುದಕ್ಕಾಗುತ್ತದೆಯೇ?

ಶ್ರೀ ಕೆ.ವಿ. ಶಂಕರಗೌಡ– ಪ್ಲಾನನ್ನು ಬದಲಾವಣೆ ಮಾಡುವುದಕ್ಕೆ ಆಗುವುದಿಲ್ಲ.

ಶ್ರೀ ಆರ್.ಎನ್. ಲಕ್ಷ್ಮೀಪತಿ– ತಾಲ್ಲೂಕು ಬೋರ್ಡುಗಳಿಗೆ ಹಾಗೂ ಪಂಚಾಯತಿಗಳಿಗೆ ದುಡ್ಡನ್ನು ಕೊಡುವ ಹೊಣೆ ಸರಕಾರದ ಮೇಲೆ ಇದೆ. ಸಂಸ್ಥಾನ ನಾಮಾವಳಿ ಮೇಲೆ ಇರುವ ಪ್ರೈಮರಿ ಶಾಲೆಗಳಲ್ಲಿ ಈಗ ಕೊಡುತ್ತಿರುವ ಹಣವೇ ಕಡಿಮೆ ಇರುವುದರಿಂದ ಇನ್ನೂ ಸ್ವಲ್ಪ ಹೆಚ್ಚಾಗಿ ಸರಕಾರ ಹಣವನ್ನೇತಕ್ಕೆ ಕೊಡಬಾರದು?

ಶ್ರೀ ಕೆ.ವಿ. ಶಂಕರಗೌಡ– ಪ್ಲಾನನ್ನು ಬದಲಾವಣೆ ಮಾಡುವುದಕ್ಕೆ ಆಗುವುದಿಲ್ಲ.

ಶ್ರೀ ಹೆಚ್.ಬಿ. ಜ್ವಾಲನಯ್ಯ– ಗ್ರಾಮಾಂತರಗಳಲ್ಲಿರುವ ಅನೇಕ ಪ್ರಾಥಮಿಕ ಶಾಲೆಗಳನ್ನು ಮತ್ತು ಅವುಗಳ ಕಟ್ಟಡಗಳನ್ನು ನೋಡಿದರೆ ಅಲ್ಲಿ ದನಗಳೂ ಕೂಡ ಇರಲು ಲಾಯಕ್ಕಾಗಿಲ್ಲ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**Sri K.V. Shankara Gowda-** It is a wild imagination.

ಶ್ರೀ ಎಸ್.ಎಂ.ಗುರ್ರೆಡ್ಡಿ– ತಾಲ್ಲೂಕು ಬೋರ್ಡುಗಳಲ್ಲಿ ಸಾಕಷ್ಟು ಹಣದ ಕೊರತೆ ಇರುವುದರಿಂದ ಇಂತಹ ತಾಲ್ಲೂಕು ಬೋರ್ಡುಗಳಿಗೆ ಸರಕಾರದವರು ಲೋನಿನ ರೂಪದಲ್ಲಿ ಸಹಾಯವನ್ನು ಕೊಡಲು ಪ್ರಯತ್ನ ಮಾಡುತ್ತಾರೆಯೇ?

ಶ್ರೀ ಕೆ.ವಿ. ಶಂಕರಗೌಡ– ಸಾಲ ಕೊಡುವುದು ಸರಕಾರದ ಬೊಕ್ಕಸದ ಮೇಲೆ ಅವಲಂಭಿಸಿದೆ. ಆದರೆ ಸರಕಾರದ ಬೊಕ್ಕಸದಲ್ಲಿ ಈಗ ದುಡ್ಡಿಲ್ಲ. ಆದರಿಂದಾಗಿ ಕೊಡುವುದಕ್ಕೆ ಸಾಧ್ಯವಿಲ್ಲ.

ಶ್ರೀ ಅಜೀಜ್‌ಸೇಠ್– ಸರಕಾರ ಈಗ ಪ್ರಾಥಮಿಕ ಶಾಲೆಗಳಿಗೆ ಸಹಾಯವನ್ನು ಮಾಡುತ್ತಿರುವಾಗ ಸ್ವಲ್ಪ ಕಷ್ಟವಾಗುತ್ತಿರುವುದರಿಂದ ಈಗಿರುವ ನಿಯಮಗಳನ್ನು ಬದಲಾವಣೆ ಮಾಡಿ ಇಂತಹ ಶಾಲೆಗಳಿಗೆ ಅನುಕೂಲವಾಗುವಂತೆ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ– ಎಲ್ಲ ಪ್ರಾಥಮಿಕ ಶಾಲೆಗಳೂ ಚೆನ್ನಾಗಿ ನಡೆಯಬೇಕೆಂಬುದೇ ಸರಕಾರದ ಆಸಕ್ತಿಯಾಗಿದೆ. ಆದರೆ ಸರಕಾರದಲ್ಲಿ ಸಾಕಾದಷ್ಟು ದುಡ್ಡಿಲ್ಲ, ಪರಿಸ್ಥಿತಿ ಸುದರಿಸಿ ಹೆಚ್ಚು ದುಡ್ಡು ನಮಗೆ ಒದಗಿದಾಗ ಹೆಚ್ಚು ಸಹಾಯವನ್ನು ಕೊಡಲು ಪ್ರಯತ್ನ ಮಾಡಬಹುದು.

ಶ್ರೀ ಜಿ. ರಾಮೇಗೌಡ– 65-66ನೇ ಸಾಲಿಗೆ ಮುಂಚಿನ ಗ್ರಾಂಟುಗಳಾವುದನ್ನೂ ಕೊಡಬೇಕಾಗಿರುವುದಿಲ್ಲ ಎಂದು ಹೇಳಿದ್ದೀರಿ. ಏಕೆ ಹೀಗೆ ಗ್ರಾಂಟ್ ಕೊಡಬೇಕಾಗಿರುವುದು ಬಾಕಿ ಇಲ್ಲ ಎಂದು ಹೇಳುತ್ತೀರಿ?

ಶ್ರೀ ಕೆ.ವಿ. ಶಂಕರಗೌಡ– ಹೈಸ್ಕೂಲು ಪ್ರಾರಂಭವಾದಾಗಿನಿಂದಲೂ 3 ವರ್ಷದವರೆಗೂ ಎಕ್ವಿಪ್‌ಮೆಂಟ್ ಮತ್ತು ಮೇನ್‌ಟೆನೆನ್ಸ್ ಗ್ರಾಂಟ್ ಕೊಡಲಾಗುವುದಿಲ್ಲ.

ಶ್ರೀ ಜಿ. ರಾಮೇಗೌಡ :- ಕಾನೂನು ಯಾವಾಗ ಹುಟ್ಟಿತು ಎಂಬ ಮಾಹಿತಿ ನನ್ನಲ್ಲಿ ಇಲ್ಲ, ಆದರೆ ನನಗೆ ತಿಳಿದಿರುವ ಹಾಗೆ ಬಹುಶಃ ಇದು 1961-62 ಆದ್ದರಿಂದ ಇದನ್ನು ಸರಿಯಾಗಿ ಕ್ಲಾರಿಫೈ ಮಾಡಿಕೊಡುವ ಹಾಗೆ ಏರ್ಪಾಡು ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಇಲ್ಲ, ಅದು 1965ಕ್ಕೂ ಇನ್ನೂ ಹಿಂದೆಯೇ ಆಗಿದೆ. ಮಾನ್ಯ ಸದಸ್ಯರಿಗೆ ಬೇಕಾದರೆ ವಿವರ ಕೊಡುತ್ತೇನೆ.

ಶ್ರೀ ಜೆ.ಆರ್.ಹಾಲಸ್ವಾಮಿ- ಮ್ಯಾನೇಜ್‌ಮೆಂಟಿನವರು ಆಡಿಟ್ ವರದಿ ಕೊಟ್ಟಿಲ್ಲ ಎಂದು ಹೇಳಿದ್ದೀರಿ, ವರದಿ ಕೊಟ್ಟರೆ ಒಪ್ಪಿಕೊಳ್ಳುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ರೂಲ್ಸ್ ಪ್ರಕಾರ ಯಾವ ಮೇನ್‌ಟೆನೆನ್ಸ್ ಗ್ರಾಂಟ್ ಕೂಡ ಬೇಕೋ ಅದನ್ನು ಖಂಡಿತ ಕೊಡಲಾಗುತ್ತದೆ.

ಶ್ರೀ ಆರ್.ಎನ್. ಲಕ್ಷ್ಮೀಪತಿ- ಆಡಿಟೆಡ್ ಅಕೌಂಟ್ಸ್ ಬರಲಿಲ್ಲ ಎಂದು ಹೇಳುತ್ತೀರಿ. ತಮ್ಮ ಇಲಾಖೆಯ ಆಡಿಟರ್ ಅವರೇ ಆಡಿಟ್ ಮಾಡಿ ಅದನ್ನೇ ಮ್ಯಾನೇಜ್‌ಮೆಂಟಿನವರ ಲೆಕ್ಕ ಅಂತ ತಿಳಿದುಕೊಂಡು ಈ ಗ್ರಾಂಟುಗಳನ್ನು ಕೊಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ತಾಲ್ಲೂಕು ಬೋರ್ಡ್ ಹೈಸ್ಕೂಲುಗಳಿಗೆ ಕಂಟ್ರೋಲರ್ ಆಫ್ ಲೋಕಲ್ ಆಡಿಟ್ ಸರ್ಕಲ್ ಅವರು ಆಡಿಟ್ ಮಾಡಬೇಕು, ಅವರು ಮಾಡಿಲ್ಲ, ಅನೇಕ ಹೈಸ್ಕೂಲುಗಳ ಲೆಕ್ಕ ಪತ್ರ ಆಡಿಟ್ ಆಗಿಲ್ಲ. ಇದನ್ನು ಸ್ಟೇಟ್ ಅಕೌಂಟ್ಸ್ ಕಂಟ್ರೋಲರ್ ಅವರಿಗೆ ಬರೆದಿದ್ದೇವೆ ಮತ್ತು ಅಂತಹ ಸಂದರ್ಭದಲ್ಲಿ ವಿನಾಯತಿ ಕೊಡಬೇಕೆನ್ನುವ ವಿಷಯವನ್ನು ಫೈನಾನ್ಸ್ ಡಿಪಾರ್ಟ್‌ಮೆಂಟಿಗೂ ಕೂಡ ಬರೆದಿದ್ದೇವೆ. ಅಲ್ಲಿಂದ ಉತ್ತರ ಬಂದ ಮೇಲೆ ಬೇರೆ ಕಾರ್ಯಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ಕೆ.ಪಿ. ಚಿಕ್ಕೇಗೌಡ- ಸಾಕಾದಷ್ಟು ಸಿಬ್ಬಂದಿ ಇಲ್ಲದೆ ಆಡಿಟ್ ಮಾಡುವುದು ನಿಂತು ಹೋಗಿ ಈ ಮೇನ್‌ಟೆನೆನ್ಸ್ ಗ್ರಾಂಟ್ ಕೊಡದೇ ಇರುವುದಕ್ಕೆ ಅದೂ ಒಂದು ಕಾರಣವಲ್ಲವೇ?

ಶ್ರೀ ಜಿ. ರಾಮೇಗೌಡ :- ಆಡಿಟ್ ಮಾಡುವುದು ಸರ್ಕಾರದವರ ಕೆಲಸವಾಗಿರುವುದರಿಂದ ಅವರು ಮಾಡದಿದ್ದರೆ ಅದು ಅವರ ತಪ್ಪು. ಆ ಕಾರಣಕ್ಕಾಗಿ ಗ್ರಾಂಟ್ ಕೊಡದಿದ್ದರೆ ಶಾಲೆಗಳಿಗೆ ತೊಂದರೆಯಾಗುವುದಿಲ್ಲವೇ?

ಶ್ರೀ ಕೆ.ವಿ. ಶಂಕರಗೌಡ- ಅದಕ್ಕೇ ಅಂತಹ ಸಂದರ್ಭಗಳಲ್ಲಿ ವಿನಾಯಿತಿ ಕೊಡಬೇಕೆಂದು ಫೈನಾನ್ಸ್ ಡಿಪಾರ್ಟ್‌ಮೆಂಟಿಗೆ ಬರೆದಿದ್ದೇವೆ.

ಶ್ರೀ ಜಿ. ರಾಮೇಗೌಡ- ಏಡೆಡ್ ಸ್ಕೂಲುಗಳಿಗೆ ಪ್ರತಿ ವರ್ಷವೂ ಆಡಿಟ್ ಮಾಡಿಸಿ ಮುಂಚಿತವಾಗಿ ಅವರಿಗೆ ಹಣ ಒದಗಿಸುವುದಕ್ಕೆ ಏರ್ಪಾಡು ಮಾಡುತ್ತೀರಾ ಸಹಾಯ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ನಮ್ಮ ಅಭಿಲಾಷೆಯೂ ಅದೇ ಆಗಿದೆ.

ಶ್ರೀ ಜೆ.ಆರ್. ಹಾಲಸ್ವಾಮಿ- ತಾಲ್ಲೂಕು ಬೋರ್ಡ್ ಸ್ಕೂಲುಗಳ ಆರ್ಥಿಕ ಪರಿಸ್ಥಿತಿ ಬಹಳ ಕಷ್ಟವಾಗಿರುವುದರಿಂದ ಗ್ರಾಂಟ್ ಇನ್ ಏಡ್ ಕೊಡುವಾಗ ಮೊದಲನೇ ವರ್ಷದಿಂದಲೇ ಕೊಡುವುದಕ್ಕೆ ಏರ್ಪಾಡು ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಅದು ಸಾಧ್ಯವಿಲ್ಲ.

ಶ್ರೀ ಎನ್.ಎಂ. ಕೊಟ್ರ ಬಸವಯ್ಯ ಸೋಜಿ- ಈ ಏಡೆಡ್ ಸ್ಕೂಲುಗಳಿಗೆ ಗ್ರಾಂಟ್ ಕೊಡುವಾಗ ಆಯಾಯ ವರ್ಷವೇ ಗ್ರಾಂಟ್ ಕೊಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಈ ವರ್ಷದ ಗ್ರಾಂಟನ್ನು ಮುಂದಿನ ವರ್ಷ ಕೊಡುತ್ತೇವೆ.

(ದಿನಾಂಕ: 7.7.1967ರಂದು ನಡೆದ ವಿಧಾನಸಭೆಯ ನಡವಳಿ)

# ಪ್ರಶ್ನೋತ್ತರ

## 10-7-1967

### Marathi and Kannada Primary Schools in Belgaum Taluk

***Q-608. Sri P.B. Nandihali (Uchagaon)-**

Will the Minister of Education be pleased to State:-

(a) the number of Marathi primary schools in Belgaum Taluk and the number of students and Teachers;

(b) The number of Kannada primary Schools in Belgaum Taluk and number of students and teachers?

**A- Sri K.V. Shankara Gowda (Minister for Education)-**

(a) Marathi Language

| No. of Schools | No. of Students | Teachers |
|---|---|---|
| 145 | 35,326 | 852 |

(b) Kannda Language

| | | |
|---|---|---|
| 53 | 15,823 | 370 |

**Sri. P.B. Nandihali -** Are Government aware that there are no sufficient teachers in the schools in Belgaum Taluk and in some cases there will be only teacher for four or five classes? What action Government propose to take in this matter? There are no sufficient schools also. Have not representations been made in this behalf?

**Sri K.V. Shankara Gowda -** Sir, there are no representations. For 35,320 students there are 852 teachers.

ಶ್ರೀ ಎಸ್.ಎಸ್. ಅರಕೇರಿ- ಬೆಳಗಾಂ ತಾಲ್ಲೂಕಿನಲ್ಲಿ ಕನ್ನಡ ಸ್ಕೂಲ್‌ಗಳು ಕೇವಲ 53 ಇವೆ. ಆದ್ದರಿಂದ ಕನ್ನಡ ಸ್ಕೂಲ್‌ಗಳನ್ನು ಹೆಚ್ಚು ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಅಂತಹ ಬೇಡಿಕೆಗಳು ಬಂದಿಲ್ಲ ಬಂದರೆ ಪರಿಶೀಲನೆ ಮಾಡುತ್ತೇವೆ.

**Sri P.B. Nandihali-** there are so many representations to the concerned officers. How is it the hon minister says, there are no representation.

**Sri K.V. Shankara Gowda-** The existing number of schools are sufficient for meeting the demand of that area.

**Sri P.B. Nandihali-** in seven classes there is only one teacher for the whole month of June. I no not know what the position now is.

**Sri K.V. Shankara Gowda-** It has not come to my notice.

ಶ್ರೀಮತಿ ಚಂಪಾಬಾಯಿ ಬೋಗಳೆ- ಬೆಳಗಾಂ ಜಿಲ್ಲೆಯಲ್ಲಿ ಕನ್ನಡ ಮಾತನಾಡುವವರು ಹೆಚ್ಚು ಇದ್ದಾರೆ ಎಂಬುದು ಸರ್ಕಾರ ಗಮನಕ್ಕೆ ಬಂದಿದೆಯೆ?

ಶ್ರೀ ಕೆ.ವಿ. ಶಂಕರಗೌಡ- ಇದು ಬೆಳಗಾಂ ಜಿಲ್ಲೆಗೆ ಸೇರಿದ ಪ್ರಶ್ನೆಯಲ್ಲ, ಬೆಳಗಾಂ ತಾಲ್ಲೂಕಿಗೆ ಸೇರಿದ್ದು.

ಶ್ರೀ ಎಂ.ಎಸ್. ಕೃಷ್ಣನ್- ಮರಾಠಿ ಮತ್ತು ಕನ್ನಡ ಶಾಲೆಗಳನ್ನು ಯಾವ ಆಧಾರದ ಮೇಲೆ ಪ್ರಾರಂಭ ಮಾಡಿಸುತ್ತೀರಿ, ಅವರಿಂದ ಬರುವ ಅರ್ಜಿಗಳ ಆಧಾರದ ಮೇಲೆ ಪ್ರಾರಂಭ ಮಾಡಿಸುತ್ತೀರೋ ಅಥವಾ ರಾಜಕೀಯ ಆಧಾರದ ಮೇಲೆ ಏನಾದರೂ ಶಾಲೆಗಳನ್ನು ಪ್ರಾರಂಭ ಮಾಡುತ್ತೀರೋ?

ಶ್ರೀ ಕೆ.ವಿ. ಶಂಕರಗೌಡರು- ಪ್ರತಿಯೊಂದಕ್ಕೂ ರಾಜಕೀಯ ಆಧಾರವಿರುವುದು ಸೂಕ್ತವಲ್ಲ. ಸ್ಥಳೀಯ ವಿದ್ಯಮಾನಗಳನ್ನು, ಕನ್ನಡ ಕಲಿಯುವ ಹುಡುಗರ ಸಂಖ್ಯೆ ಎಷ್ಟು ಇದೆ ಎಂಬುದನ್ನು ನೋಡಿಕೊಂಡು ಅದರ ಒಂದು ಆಧಾರದ ಮೇಲೆ ಪ್ರಾರಂಭ ಮಾಡುತ್ತೇವೆ.

ಶ್ರೀ ಅಜೀಜ್‌ಸೇಠ್- 40 ಜನ ಹುಡುಗರಿಗೆ ಒಬ್ಬ ಉಪಾಧ್ಯಾಯರಂತೆ 35,326 ಜನ ವಿದ್ಯಾರ್ಥಿಗಳಿಗೆ 888 ಜನ ಉಪಾಧ್ಯಾಯರುಗಳು ಬೇಕಾಗುತ್ತಾರೆ. ನೀವು ಕೊಟ್ಟಿರುವ ಉತ್ತರದ ಪ್ರಕಾರ 30 ಜನ ಉಪಾಧ್ಯಾಯರು ಕಮ್ಮಿಯಾಗುತ್ತದೆ, ಆದ್ದರಿಂದ ಕಮ್ಮಿಯಾಗುವ ಉಪಾಧ್ಯಯರನ್ನು ನೇಮಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡರು- ಇತ್ತೀಚೆಗೆ ಕೆಲವು ಶಾಲೆಗಳು ಪ್ರಾರಂಭವಾಗಿವೆ. ಜಾಗ್ರತೆಯಗಿ ಉಪಾಧ್ಯಾಯರನ್ನು ನೇಮಕ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಶ್ರೀ ಎಸ್.ಎಸ್. ಅರಕೇರಿ- ಕನ್ನಡ ಸ್ಕೂಲ್‌ಗಳು ಕಡಿಮೆ ಇವೆ, ಹೆಚ್ಚು ಕನ್ನಡ ಸ್ಕೂಲ್‌ಗಳನ್ನು ಪ್ರಾರಂಭ ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡರು– ಅವಶ್ಯಕ ಇದ್ದರೆ ಹೆಚ್ಚು ಮಾಡುತ್ತೇವೆ.

ಶ್ರೀ ಎಸ್.ಎಂ. ಗುರೆಡ್ಡಿ– ನಮ್ಮ ರಾಜ್ಯಭಾಷೆ ಕನ್ನಡ. ಬೆಳಗಾಂ ಇರುವುದು ಕನ್ನಡ ಪ್ರದೇಶದಲ್ಲಿ ಬೆಳಗಾಂ ತಾಲ್ಲೂಕಿನ ಪ್ರತಿಯೊಂದು ಹಳ್ಳಿಯಲ್ಲೂ ಕನ್ನಡ ಶಾಲೆಗಳನ್ನು ಪ್ರಾರಂಭ ಮಾಡುವುದು ಒಳ್ಳೆಯದಲ್ಲವೇ?

ಶ್ರೀ ಕೆ.ವಿ. ಶಂಕರಗೌಡರು– ಆ ರೀತಿ ಮಾಡುವುದಕ್ಕಾಗುವುದಿಲ್ಲ. ಕನ್ನಡ ರಾಜ್ಯದಲ್ಲಿ ಲಿಂಗ್ವಿಸ್ಟಿಕ್ ಮೈನಾರಿಟಸ್ ಅವರಿಗೂ ರಕ್ಷಣೆ ಕೊಡಬೇಕಾಗುತ್ತದೆ. ಮತ್ತು ಅವರ ರಕ್ಷಣೆಗಳನ್ನು ಪೂರೈಸಬೇಕಾಗುತ್ತದೆ.

ಶ್ರೀ ಎಂ.ಜಿ. ಬಣಕಾರ್– ಬೆಳಗಾಂ ತಾಲ್ಲೂಕ್ ಕನ್ನಡ ಪ್ರದೇಶದಲ್ಲಿದೆ. ಆದರೂ ಅಲ್ಲಿ ಮರಾಠಿ ಶಾಲೆಗಳಿಗಿಂತ ಕನ್ನಡ ಶಾಲೆಗಳು ಕಮ್ಮಿ ಇವೆ. ಕನ್ನಡ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಕನ್ನಡ ಉಪಾಧ್ಯಾಯರ ಸಂಖ್ಯೆ ಕೂಡ ಕಮ್ಮಿ ಇದೆ. ಇದಕ್ಕೆ ಕಾರಣ ಕಂಡುಹಿಡಿಯಬೇಕು, ಮತ್ತು ಕನ್ನಡ ಶಾಲೆಗಳನ್ನು ಹೆಚ್ಚಿಸುವುದಕ್ಕೆ ಏನಾದರೂ ಕ್ರಮವನ್ನು ತೆಗೆದುಕೊಂಡಿದ್ದೀರಾ?

ಶ್ರೀ ಕೆ.ವಿ. ಶಂಕರಗೌಡರು– ಕನ್ನಡದ ಅಭಿರುಚಿಯಿರುವ ಕಡೆಯಲ್ಲಿ ಕನ್ನಡದ ಶಾಲೆಗಳನ್ನು ಪ್ರಾರಂಭ ಮಾಡಿದ್ದೇವೆ. ಕನ್ನಡ ಓದುವುದಕ್ಕೆ ಎಷ್ಟು ಜನ ವಿದ್ಯಾರ್ಥಿಗಳು ಇದ್ದಾರೆ, ಮರಾಠಿ ಓದುವುದಕ್ಕೆ ಎಷ್ಟು ಜನ ವಿದ್ಯಾರ್ಥಿಗಳು ಇದ್ದಾರೆ ಎನ್ನುವ ಅಂಕಿಅಂಶಗಳನ್ನು ನೋಡಿಕೊಂಡು ಶಾಲೆಗಳನ್ನು ಪ್ರಾರಂಭ ಮಾಡುತ್ತೇವೆ.

ಶ್ರೀ ಎಂ.ಜಿ. ಬಣಕಾರ್– ಕನ್ನಡ ಮಾತನಾಡುವವರ ವಿಷಯದಲ್ಲಿ ಮರಾಠಿಗರು ಏನಾದರೂ ತೊಂದರೆ ಕೊಟ್ಟಿದ್ದಾರೆಯೆ? ಅಥವಾ ಕನ್ನಡಿಗರ ಅಭಿರುಚಿಗೆ ಕೆಲವು ಅಡ್ಡಿ ಆತಂಕಗಳು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**Mr. Speaker-** It does not arise out of this question. Such delicate questions should not be put by members.

ಶ್ರೀ ಸಿದ್ದಯ್ಯ ಕಾಶೀಮಠ– ಬೆಳಗಾಂ ಜಿಲ್ಲೆಯಲ್ಲಿ ಕನ್ನಡಕ್ಕೆ ಹೆಚ್ಚಿನ ಪ್ರಾತಿನಿಧ್ಯ. ಇಲ್ಲದಿರುವುದರಿಂದ ಕನ್ನಡ ಭಾಷಾ ವಿದ್ಯಾರ್ಥಿಗಳಿಗೆ ಸಾಕಷ್ಟು ಕನ್ನಡ ಶಾಲೆಗಳಿಲ್ಲದೆ ಮರಾಠಿ ಶಾಲೆಗಳಿಗೆ ಹೋಗಬೇಕಾಗಿದೆ. ಆದ್ದರಿಂದ ಇದರ ಬಗ್ಗೆ ಸರ್ವೆಯನ್ನು ಮಾಡಿಸಿ, ಹೆಚ್ಚು ಕನ್ನಡ ಶಾಲೆಗಳನ್ನು ತೆಗೆಯುವುದಕ್ಕೆ ಏರ್ಪಾಡು ಮಾಡುತ್ತೀರಾ?

ಶ್ರೀ ಕೆ.ವಿ.ಶಂಕರಗೌಡರು– ಕನ್ನಡ ಮಕ್ಕಳು ಮರಾಠಿ ಶಾಲೆಗಳಲ್ಲಿ ಓದತಕ್ಕ ಅವಶ್ಯಕತೆ ಕಂಡುಬರಲಿಲ್ಲ. ಅಲ್ಲಿ ಕನ್ನಡ ಮಕ್ಕಳಿಗೆ ಎಷ್ಟು ಬೇಕಾದರೂ ಶಾಲೆಗಳನ್ನು ಏರ್ಪಾಡು ಮಾಡುತ್ತೇವೆ.

## Cadre and Recruitment Rules for Promotions in Education Department

### 6-3-1968

**116. Sri P. Venkatagiriyappa (Kolar)-**

Will the Minister for Agriculture and Education be pleased to State:-

(a) when the Cadre and Recruitment rules for promotion to Class I and Class II posts in Education department were made and the details of the Notification:

(b) Whether it is a fact that in the said Notification, the ratio for promotions to Class II and Class I is 50:50 and 25:75 for direct recruitment and by promotions?

**A-Sri K.V. Shankaragowda (Minister for Agriculture and Education)-**

(a) The Cadre and Recruitment of the Mysore Education Department (Department of Public Instruction) were issued on 22nd February 1967. The relevant extract of the said Rules in respect of Class I and Class II posts is placed on the Table of the House*

(b) Yes.

ಶ್ರೀ ಪಿ. ವೆಂಕಟಗಿರಿಯಪ್ಪ- ಎರಡನೆ ದರ್ಜೆ ಕೆಲಸಗಳಿಗೆ ಶೇಕಡವಾರು ಪ್ರಮಾಣವನ್ನು ಶೇ. 50 ರಷ್ಟು ಇರಬೇಕೆಂದು ತೀರ್ಮಾನ ಮಾಡಲು ಕಾರಣವೇನು?

ಶ್ರೀ ಕೆ.ವಿ. ಶಂಕರಗೌಡ- ದಕ್ಷರಾದವರನ್ನು ಆಕರ್ಷಿಸುವುದಕ್ಕಾಗಿ ಈ ರೀತಿ ಮಾಡಲಾಗಿದೆ.

ಶ್ರೀ ಎಂ.ಎಸ್. ಕೃಷ್ಣನ್- ಈಗ ನೀವು ಅನುಸರಿಸುತ್ತಿರುವ ಪ್ರಮೋಷನ್ ಪಾಲಿಸಿಯಂತೆ ಕೆಳದರ್ಜೆಯಲ್ಲಿರುವವರನ್ನು ಮೇಲಿನ ದರ್ಜೆಗೆ ಹೋಗುವ ಅವಕಾಶಗಳನ್ನು ಕಲ್ಪಿಸಿದಂತಾಗಿದೆಯೇ? ಮತ್ತು ಇದೇ ರೀತಿ ಯಾವ ರೇಷ್ಯೋ ಬೇರೆ ಕಡೆ ಇಲ್ಲ. ಇದು ತಪ್ಪು ಎನ್ನುವುದು ತಮ್ಮ ಗಮನಕ್ಕೆ ಬಂದಿದೆಯೇ?

ಶ್ರೀ ಕೆ.ವಿ. ಶಂಕರಗೌಡ- ತಪ್ಪು ಎಂದು ಇದನ್ನು ನಾನು ಒಪ್ಪಿಕೊಳ್ಳುವುದಿಲ್ಲ. ಈಗ ಮಾಡಿರುವುದು ಸರಿಯಾಗಿಯೇ ಇದೆ.

ಶ್ರೀ ಎಂ.ಎಸ್. ಕೃಷ್ಣನ್- ದಕ್ಷರಾಗಿರುವವರು ಇದರಲ್ಲಿ ಬರಲು ಅನುಕೂಲವಗಿದೆ ಎಂದು ಹೇಳುತ್ತೀರಿ. ಆದರೆ ಕೈಗಾರಿಕೆಗಳಲ್ಲೂ ಕೂಡ ಇದೇ ರೀತಿಯಾಗಿ ರೆಕ್ರೂಟಮೆಂಟ್ ನೀತಿಯನ್ನು ಅನುಸರಿಸಿ ಬಡ್ತಿಗಳಿಗೆ ಅವಕಾಶ ಕಲ್ಪಿಸಿಲ್ಲ ಎನ್ನುವುದು ತಾವು ನೋಡಬಹುದು. ಇವೊಂದನ್ನು ತಾವು ನೋಡಲೇ ಇಲ್ಲ ಸುಮ್ಮನೆ ಉತ್ತರಕ್ಕಾಗಿ ಉತ್ತರ ಹೇಳಬೇಕೆಂದು ಹೇಳುತ್ತಿದ್ದೀರೇನು?

ಶ್ರೀ ಕೆ.ವಿ. ಶಂಕರಗೌಡ- ನಾನು ಎಲ್ಲವನ್ನೂ ನೋಡಿಯೇ ಇಲ್ಲಿ ಹೇಳುತ್ತಿದ್ದೇನೆ. ಬೇರೆ ಬೇರೆ ಇಲಾಖೆಗಳಲ್ಲಿ ಬೇರೆ ರೀತಿಯಾದ ಪಾಲಿಸಿಗಳಿರುತ್ತವೆ. ಆದರೆ ಎಜುಕೇಷನ್ ಇಲಾಖೆಯುಲ್ಲಿ ಹೊಸದಾಗಿ ಬರುವವರಲ್ಲಿ ಸಾಕಷ್ಟು ದಕ್ಷರೂ ಹಾಗೂ ಪರಿಣಾಮಕಾರಿಯಾಗಿರುವವರೂ ಬರಬಹುದು ಎಂದು ಈಗ ಈ ಶೇಕಡವಾರನ್ನು 50 ಎಂದು ಗೊತ್ತು ಮಾಡಲಾಗಿದೆ. ಇದೂ ಅಲ್ಲದೆ ಒಳ್ಳೆಯ ಪರಿಣಿತರಾದವರು ಹಾಗೂ ಅರ್ಹರಾದವರು ವಿದ್ಯಾಕ್ಷೇತ್ರದಲ್ಲಿ ಬಾರದೇ ಹೋದರೆ ವಿದ್ಯಭ್ಯಾಸದ ಮಟ್ಟವೂ ಕೆಳಗೆ ಇಳಿಯುತ್ತದೆ ಎಂದೂ ಈ ರೀತಿ ಇಡಲಾಗಿದೆ.

ಶ್ರೀ ಪಿ.ವೆಂಕಟಗಿರಿಯಪ್ಪ- 50 ಜನ ಎಂದು ನೀವು ತೆಗೆದುಕೊಂಡರೆ ಹತ್ತಾರು ವರ್ಷಗಳ ಕಾಲ ಸರ್ವೀಸ್ ಮಾಡಿರುವವರಿಗೆ ತುಂಬಾ ಅನ್ಯಾಯವಾಗುವುದು ಸರಕಾರಕ್ಕೆ ಗೊತ್ತಾಗುವಿದಿಲ್ಲವೆ?

ಶ್ರೀ ಕೆ.ವಿ. ಶಂಕರಗೌಡ- ಅಂತಹ ಅನ್ಯಾಯಗಳೇನೂ ಇದರಿಂದಾಗುವುದಿಲ್ಲ. ಯೋಗ್ಯರಾದವರು ಹಾಗೂ ಅರ್ಹತೆಯುಳ್ಳವರು ಇರುವವರಿಗೆ ಶೇಕಡಾ 50ರಷ್ಟು ಎಂದು ಇದ್ದರೆ ಅದರಲ್ಲೂ ಪ್ರಮೋಷನ್ ಅವರಿಗೆ ಸಿಗುತ್ತದೆ.

ಶ್ರೀ ಎಸ್. ಶಿವಪ್ಪ- 1967ರಕ್ಕೆ ಪೂರ್ವದಲ್ಲಿ ಕೇಡರು ಹಾಗೂ ರೆಕ್ರೂಟ್‌ಮೆಂಟ್ ರೂಲ್ಸುಗಳನ್ನು ವಿದ್ಯಾಭ್ಯಾಸದ ಇಲಾಖೆಯಲ್ಲಿ ಐದು ಪ್ರದೇಶಗಳಿಂದ ಬಂದಿರುವವರಿಗಾಗಿ ಮಾಡಿ ಅದಕ್ಕೆ ಸರಿಯದ ಇಂಟರ್‌ಸ್ಟೇಟ್ ಸೀನಿಯಾರಿಟಿ ಲಿಸ್ಟ್‌ಗಳನ್ನೇ ಮಾಡದೇ ವಿದ್ಯಾ ಇಲಾಖೆಯಲ್ಲಿ ಮನಸ್ಸಿಗೆ ಬಂದ ಹಾಗೆ ಪ್ರಮೋಷನ್ನುಗಳನ್ನು ಕೊಟ್ಟುದ್ದರಿಂದ ಅನೇಕರಿಗೆ ತೊಂದರೆಗಳಾಗಿವೆ. ಇದನ್ನೆಲ್ಲಾ ವಿಚಾರ ಮಾಡಿ 67ಕ್ಕೆ ಪೂರ್ವದಲ್ಲಿ ಯಾವ ರೀತಿಯಾದ ಪ್ರಮೋಷನ್‌ಗಳು ಮಾಡಲಾಗಿತ್ತು ಎನ್ನುವುದನ್ನು ತಿಳಿಸಲು ಸಾಧ್ಯವೇ?

**Sri K.V. Shankaragowda-** If he puts a different question I well answer.

ಶ್ರೀ ಎಂ.ಎಸ್. ಕೃಷ್ಣನ್- ತಮ್ಮ ಈ ಧೋರಣೆಯಿಂದ ಎಂದರೆ ಶೇಕಡಾ 50:50 ಎಂದು ಮಾಡಿರುವುದರಿಂದ ಕೆಳದರ್ಜೆ ನೌಕರರುಗಳಿಗೆ ಒಂದು ರೀತಿಯಾದ

ಜಿಗುಪ್ಸೆ ಬಂದು ನಿರುತ್ಸಾಹ ಹೆಚ್ಚಾಗುತ್ತದೆ. ಇದರಿಂದ ತೊಂದರೆಗೆ ಒಳಗಾಗಿರುವವರು ತಮಗೆ ಇದರ ಬಗ್ಗೆ ರೆಪ್ರಸೆಂಟೇಷನ್‌ಗಳನ್ನೇದರೂ ಕೊಟ್ಟಿದ್ದಾರೆಯೇ? ಹಾಗೆ ಕೊಟ್ಟಿದ್ದರೆ ಅದರ ಮೇಲೆ ಏನು ಕಾರ್ಯಕ್ರಮ ತೆಗೆದುಕೊಂಡಿದ್ದೀರಿ?

ಶ್ರೀ ಕೆ.ವಿ. ಶಂಕರಗೌಡ- ಜಿಗುಪ್ಸೆ ಬರುವುದಕ್ಕೇ ಅವಕಾಶವಿಲ್ಲ. ಜಿಗುಪ್ಸೆಯಾಗಿರುವಂತಹವರು ಕೆಲಸದಲ್ಲಿ ನಾಲಾಯಕ್ಕಾಗುತ್ತಾರೆ. ಇಲ್ಲೇನೂ ಜಿಗುಪ್ಸೆಗೆ ಕಾರಣವೇ ಇಲ್ಲ.

ಶ್ರೀ ಆರ್. ಮುನಿಸ್ವಾಮಯ್ಯ- ಕೆಳ ದರ್ಜೆಯಲ್ಲಿರುವ ನೌಕರರು ಮೇಲಿನ ದರ್ಜೆಯ ಕೆಲಸಗಳಿಗೆ ರೆಕ್ರೂಟ್‌ಮೆಂಟ್ ಮಾಡುವಾಗ ಅವರೂ ಅರ್ಜಿಗಳನ್ನು ಹಾಕಿಕೊಳ್ಳಬಹುದಲ್ಲವೇ?

ಶ್ರೀ ಕೆ.ವಿ. ಶಂಕರಗೌಡ- ಅದಕ್ಕೆ ಅಭ್ಯಂತರವೇನೂ ಇಲ್ಲ. ಆದರೆ ವಯೋಮಿತಿಯೊಳಗಿದ್ದರೆ ಅವರೂ ಹಾಕಿಕೊಳ್ಳಬಹುದು.

ಶ್ರೀ ಸಿ.ಕೆ. ರಾಜಯ್ಯಶೆಟ್ಟಿ- ವಿದ್ಯಾ ಇಲಾಖೆಯಲ್ಲಿ ಸಾಮಾನ್ಯವಾಗಿ ನೋಡಿದರೆ ಇನ್ಸ್‌ಪೆಕ್ಟರ್‌ರವರ ದರ್ಜೆಯಿಂದ ಹಿಡಿದು ಮೇಲಿನ ದರ್ಜೆಯ ಹುದ್ದೆಗಳವರೆಗೆ ಬೇಕಾದಷ್ಟು ರಾಜಕೀಯ ಕೈವಾಡಗಳಾಗಿರುವುದು ನಮಗೆ ಕಂಡು ಬರುತ್ತಿದೆ. ಇದಕ್ಕೆ ಉದಾಹರಣೆಯಾಗಿ ಹೇಳಬಹುದಾದರೆ ಹಿಂದೆ ಬಾಂಬೆ ಪ್ರದೇಶದವರು ಮಂತ್ರಿಗಳಾಗಿದ್ದರೆ ಎಂದು ಅವರ ಕಡೆಯವರು ಒಬ್ಬರನ್ನು ಜಾಯಿಂಟು ಡೈರೆಕ್ಟರಾಗಿ ಆಗ ಇದ್ದ ಮಂತ್ರಿಗಳು ಮಾಡಿದರು ಇದು ಸರಿಯಾಗಿದೆಯೇ?

**Sri K.V. Shankaragowda-** That is a different question. I am unable to answer the question.

**Sri L. Srikantaiah-** This Question number 117 is an important question affecting the rural areas. I request the Chair to put the question from the chair.

**Mr. Deputy Speaker-** I will put the question as desired by the members.

## Eelection of Students for Technical Courses

**117. H.D. Devegowda (Holenarasipur)-**

Will the Minister for Agriculture and Education be pleased to State:-

a) whether it has come to the notice of the Government that the present system of selection of students for Technicla Courses (Medical and Engineering) is not beneficial to that students coming from the rural areas;

b) if so, whether Government would think of an alternative formula by amending the present rules to benefit the students coming from rural areas?

**A- Sri K.V. Shankaragowda (Minister for Agriculture and Education)**

a) No.

b) Does not arise.

ಶ್ರೀ ಎಚ್.ಬಿ. ಜ್ವಾಲನಯ್ಯ- ಗ್ರಾಮಾಂತರ ಪ್ರದೇಶದಲ್ಲಿ ವಿದ್ಯಾಭ್ಯಾಸ ಸೌಕರ್ಯ ಕಡಿಮೆಯಗಿರುವುದರಿಂದ ಹಾಗೂ ಅವರು ಎಕನಾಮಿಕಲಿ ಮತ್ತು ಸೋಷಿಯಲಿ ಬ್ಯಾಕ್‌ವರ್ಡ್ ಆಗಿರುವುದರಿಂದ ಸಾವಿರಾರು ವಿದ್ಯಾರ್ಥಿಗಳು ನಗರದಲ್ಲಿಯ ವಿದ್ಯಾರ್ಥಿಗಳೊಂದಿಗೆ ಕಾಂಪೀಟ್ ಮಾಡಲು ಸಾಧ್ಯವಿಲ್ಲದೇ ಇರುವುದರಿಂದ ಅವರಿಗೆ ಸೀಟು ಸಿಕ್ಕುವುದಿಲ್ಲ ಎನ್ನುವುದು ಸರಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಕೆ.ವಿ. ಶಂಕರಗೌಡ- ಸ್ವಾಮಿ, ಅಂಥ ;ವಿಷಯ ಗಮನಕ್ಕೆ ಬಂದಿಲ್ಲ. ಎಕನಾಮಿಕಲಿ ಸೋಷಿಯಲಿ ಬ್ಯಾಕ್‌ವರ್ಡ್ ಆದವರಿಗೆ ನೂರಕ್ಕೆ 30 ಸೀಟು ಕೊಡಬಹುದು ಎಂದಿದೆ. ಈ ಅವಕಾಶವನ್ನು ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳು ಉಪಯೋಗಿಸಬಹುದು.

ಶ್ರೀ ಎಲ್. ಶ್ರೀಕಂಠಯ್ಯ- ಸೋಷಿಯಲಿ, ಎಕನಾಮಿಕಲಿ ಬ್ಯಾಕ್‌ವರ್ಡ್ ಆಗಿರುವ ಗ್ರಾಮಾಂತರ ಪ್ರದೇಶದಲ್ಲಿರುವ 10-20 ಎಕರೆ ಜಮೀನು ಇಟ್ಟುಕೊಂಡು ಇರುವವರ ವರಮಾನ ಜಾಸ್ತಿ ಇದ್ದರೂ ಕೂಡ ಅಂಥವರು ಸಾಂಸ್ಕೃತಿಕವಾಗಿ ಹಿಂದುಳಿದವರು ಎನ್ನುವುದನ್ನು ನೋಡಿದರೆ ಅಂಥವರ ಮಕ್ಕಳು ಎಕನಾಮಿಕಲಿ ಪಾರವರ್ಡ್ ಆಗುತ್ತಾರೆ ಮತ್ತು ಈ 100ಕ್ಕೆ

30ರಷ್ಟು ಸೀಟು ದೊರೆಯುವ ಸೌಕರ್ಯಕ್ಕೆ ಲೋಪ ಬರುತ್ತದೆ. ಇದು ಸರಕಾರದ ಗಮನಕ್ಕೆ ಬಂದಿದೆಯೇ?

**Sri K.V. Shankaragowda-** When a man is economically for word, I donot think he will be socially backward. Therefore if a man who has got 20 to 30 acres of land, he cannot be taken to be economically and socialy backward; and if he does not get any representation, there will be no harm.

ಶ್ರೀ ಎನ್. ಚಿಕ್ಕೇಗೌಡ- ದಾಮಾಷ ಪ್ರಕಾರ ಗ್ರಾಮಾಂತರ ಪ್ರದೇಶದಲ್ಲಿ ಜನ ಹೆಚ್ಚಾಗಿದ್ದಾರೆ. ಪಟ್ಟಣದಲ್ಲಿ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳೊಂದಿಗೆ ಕಾಂಪೀಟ್ ಮಡುವ ಶಕ್ತಿ ಅವರಿಗೆ ಇಲ್ಲದೇ ಇರುವುದರಿಂದ ನಮ್ಮ ನೆರೆ ರಾಜ್ಯಗಳಲ್ಲಿ ಮದ್ರಾಸ್ ರಾಜ್ಯದಲ್ಲಿ ಮಾಡಿರುವ ಹಾಗೆ ಇಲ್ಲಿಯೂ ಕೂಡ ಗ್ರಾಮಾಂತರ ಪ್ರದೇಶದವರಿಗೆ ಒಂದು ಪ್ರೋಪೋರ್ಶನ್ ಮೀಸಲಾಗಿಟ್ಟು ತಾಂತ್ರಿಕ ಕಾಲೇಜುಗಳಿಗೆ ಇವರಿಗೆ ಸೀಟು ಕೊಡುವುದಕ್ಕೆ ಏನು ತೊಂದರೆ ಇದೆ?

ಶ್ರೀ ಕೆ.ವಿ. ಶಂಕರಗೌಡ- ಗ್ರಾಮಾಂತರ ಪ್ರದೇಶದಲ್ಲಿರುವವರೆಲ್ಲರೂ ಬ್ಯಾಕ್‌ವರ್ಡ್ ಎಂದು ಹೇಳುವುದಕ್ಕಾಗುವುದಿಲ್ಲ. ಪಟ್ಟಣದಲ್ಲಿಯೂ ಕೂಡ ಸೋಷಿಯಲಿ, ಎಕನಾಮಿಕಲಿ ಬ್ಯಾಕ್‌ವರ್ಡ್ ಆದ ಜನರಿದ್ದಾರೆ. ಮದ್ರಾಸ್ ರಾಜ್ಯದಲ್ಲಿ ಮಾಡಿರುವ ಹಾಗೆ ಜಿಲ್ಲಾವಾರು ಸೀಟು ಹಂಚಿಕೆ ಮಾಡಬೇಕೆಂದು ಅವರು ಸಲಹೆ ಕೊಡುತ್ತಾರೆ. ಅದು ಸರಿಯಾಗಿ ನಡೆಯುವುದಿಲ್ಲ ಎಂದು ತಿಳಿದು ಬಂದಿದೆ.

ಶ್ರೀ ಎನ್. ಚಿಕ್ಕೇಗೌಢ- ಗ್ರಾಮಾಂತರ ಪ್ರದೇಶದಲ್ಲಿ ಸಾಕಷ್ಟು ಅನುಕೂಲತೆ ಇಲ್ಲದೇ ಇರುವುದರಿಂದ ಪಟ್ಟಣದಲ್ಲಿ ಅನುಕೂಲತೆ ಪಡೆದ ವಿದ್ಯಾರ್ಥಿಗಳೊಂದಿಗೆ ಮೆಡಿಕಲ್ ಮತ್ತು ಟೆಕ್ನಿಕಲ್ ಕಾಲೇಜುಗಳಲ್ಲಿ ಸೀಟು ಪಡೆಯಲು ಕಾಂಪೀಟ್ ಮಾಡುವುದು ಸಾಧ್ಯವಿಲ್ಲದೇ ಇರುವುದರಿಂದ ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳಿಗೆ ಸೀಟು ದೊರಕುವುದಿಲ್ಲ ಅಲ್ಲವೇ?

ಶ್ರೀ ಕೆ.ವಿ. ಶಂಕರಗೌಡ- ಇಲ್ಲಾ ಎಂದು ಉತ್ತರ ಕೊಟ್ಟಿದೆ.

ಶ್ರೀ ಎಸ್. ಶಿವಪ್ಪ- ಕೇವಲ ಮೆರಿಟ್ ಮೇಲೆ ಸೆಲೆಕ್ಷನ್ ಮಾಡುವುದಾದರೆ ಪರೀಕ್ಷೆಯಲ್ಲಿ ವಿದ್ಯಾರ್ಥಿಯು ಪಡೆದ ಅಂಕಗಳ ಮೇಲೆ ಮಾತ್ರ ಮಾಡಬೇಕಾಗುತ್ತದೆ. ಅದು ಸರಿಯಾಗುವುದಿಲ್ಲ. ಆದುದರಿಂದ ವರ್ಚಸ್ಸು, ದೇಹದಾರ್ಢ್ಯ ಕಸಬು ಇವುಗಳನ್ನು ಸೇರಿಸಿ ಇವುಗಳಿಗೆ ಸಹ ಅಂಕಗಳನ್ನು ಇಟ್ಟು ಮೆರಿಟ್ಟನ್ನೂ ತೆಗೆದುಕೊಂಡು ನಿರ್ಣಯ ಮಾಡತಕ್ಕಂಥ ಒಂದು ಹೊಸ ಯೋಜನೆ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ– ಆ ರೀತಿ ಪರಿಗಣಿಸುವುದು ಸರಿಯಾದ ಅಭಿಪ್ರಾಯ ಎಂದು ಹೇಳುವುದಕ್ಕಾಗುವುದಿಲ್ಲ. ಈಗ ಇರತಕ್ಕ ಪದ್ಧತಿಯಲ್ಲಿ ಏನಾದರೂ ನ್ಯೂನಾತಿರಿಕ್ತಗಳು ಇರಬಹುದೇ ಎಂದು ಅವುಗಳನ್ನು ಸರಕಾರ ಪರಿಶೀಲನೆ ಮಾಡಿ ಮುಂದಿನ ವರ್ಷ ಸೂಕ್ತ ಪರಿಹಾರ ಒದಗಿಸಲು ಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ದೊಡ್ಡಬೋರೇಗೌಡ– ಮೆಡಿಕಲ್ ಮತ್ತು ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಯಾವ ಯಾವ ಕಾಲೇಜುಗಳಲ್ಲಿ ಎಷ್ಟೆಷ್ಟು ಜನ ಹಳ್ಳಿಗಾಡಿನ ಮಕ್ಕಳಿಗೆ ಸೀಟು ಕೊಟ್ಟಿದ್ದೀರಿ ಎನ್ನುವುದನ್ನು ಹೇಳುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ– ಬೇರೆ ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಹೇಳುತ್ತೇನೆ.

ಶ್ರೀ ಎನ್. ಚೆನ್ನೇಗೌಡ– ಎಕನಾಮಿಕಲಿ ಬ್ಯಾಕ್‌ವರ್ಡ್ ಎಂದು ಪರಿಗಣಿಸಲು ವಾರ್ಷಿಕ ಉತ್ಪತ್ತಿ 1,200 ರೂಪಾಯಿ ಎಂದು ಇಟ್ಟಿರುವುದು ಬಹಳ ಕಡಿಮೆಯಾಗಿರುವುದು ಅಲ್ಲವೇ.

ಶ್ರೀ ಕೆ.ವಿ. ಶಂಕರಗೌಡ– 1,200 ರೂಪಾಯಿ ಎಂದು ಇರುವುದು ಸರಿಯಾಗಿದೆ. ಈ ಅಭಿಪ್ರಾಯ ಬದಲಾವಣೆ ಮಾಡತಕ್ಕಂಥ ಅವಶ್ಯಕತೆ ಸರಕಾರಕ್ಕೆ ಕಂಡುಬಂದಿಲ್ಲ.

ಶ್ರೀ ಎಚ್. ಪುಟ್ಟದಾಸ– ಕೇವಲ ಮೆರಿಟ್ ಆಧಾರದ ಮೇಲೆ ಆಯ್ಕೆ ಮಡುತ್ತಿರುವುದರಿಂದ ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಇಬ್ಬರು ವಿದ್ಯಾರ್ಥಿಗಳನ್ನು ಒಂದೊಂದು ಕಣ್ಣು ಇರುವವರನ್ನು ಆಯ್ಕೆ ಮಾಡಿದ್ದಾರೆ. ಮುಂದೆ ಅವರು ಅಪ್ಥಾಲ್‌ಮಿಕ್ ಕೇಸುಗಳನ್ನು ಯಾವ ರೀತಿ ಟ್ರೀಟ್ ಮಾಡುತ್ತಾರೆ.

ಶ್ರೀ ಅಜೀಜ್ ಸೇಟ್– ಅವರು ಒಂದು ಕಣ್ಣು, ಇವರದು ಒಂದು ಕಣ್ಣು ಉಪಯೋಗಿಸಿ ಕೆಲಸ ಮಾಡುತ್ತಾರೆ(ನಗು).

ಶ್ರೀ ಕೆ.ವಿ. ಶಂಕರಗೌಡ– ಒಂದೊಂದು ಕಣ್ಣು ಇರತಕ್ಕವರನ್ನು ಆರಿಸಿರುವುದು ನನ್ನ ಗಮನಕ್ಕೆ ಬಂದಿಲ್ಲ.

ಶ್ರೀ ಎಂ. ನಾಗಪ್ಪ– ಹೈದರಾಬಾದ್ ಕರ್ನಾಟಕ ಭಾಗ ಎಜುಕೇಷನ್‌ನಲ್ಲಿ ಬಹಳ ಹಿಂದುಳಿದಿದೆ. ಅದರ ಸಲುವಾಗಿ ಅಲ್ಲಿನ ಮೂರು ಜಿಲ್ಲೆಗಳಿಗೆ ಪ್ರತ್ಯೇಕ ಮೆಡಿಕಲ್ ಕಾಲೇಜು ಮತ್ತು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಸೀಟುಗಳನ್ನು ಮಾಡಿ ಕೊಡುತ್ತೀರಾ? ಮದ್ರಾಸ್‌ನಲ್ಲಿ ಇಂಥ ಪದ್ಧತಿ ಚೆನ್ನಾಗಿ ಕೆಲಸ ಮಾಡುತ್ತಿಲ್ಲವೆಂದು ಹೇಳಿದರು. ಅದೇ ಆಂಧ್ರದಲ್ಲಿ ಯಶಸ್ವಿಯಾಗಿ ನಡೆಯುತ್ತಿರುವುದರಿಂದ ಮೈಸೂರಿನಲ್ಲಿಯೂ ಇದೇ ರೀತಿ ಮಾಡುವುದಕ್ಕೆ ಸಿದ್ದವಾಗಿದ್ದೀರಾ?

ಶ್ರೀ ಕೆ.ವಿ. ಶಂಕರಗೌಡ– ಆ ರೀತಿ ಮಾಡುವುದಕ್ಕೆ ಸಿದ್ಧವಾಗಿಲ್ಲ ಸ್ವಾಮಿ.

ಶ್ರೀ ಸಿದ್ದಯ್ಯ ಕಾಶಿಮಠ– ಆಯ್ಕೆ ಮಾಡುವಾಗ ರಾಜಕೀಯ ಸಂತ್ರಸ್ತರ ಮಕ್ಕಳಿಗೆ ಕೆಲವು ಸೀಟುಗಳನ್ನು ಮೀಸಲಿಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ– ರಾಜಕೀಯ ಸಂತ್ರಸ್ತರ ಮಕ್ಕಳಿಗೆ 12 ಸೀಟು ಮೀಸಲಿಡಲಾಗಿದೆ.

ಶ್ರೀ ಬಿ.ಪಿ. ಗಂಗಾಧರ್– ಗ್ರಾಮಾಂತರದಲ್ಲಿರುವ ವಿದ್ಯಾರ್ಥಿಗಳು ಪಟ್ಟಣಗಳಲ್ಲಿರುವ ವಿದ್ಯಾರ್ಥಿಗಳೊಡನೆ ಪೈಪೋಟಿ ಮಾಡುವುದಕ್ಕೆ ಸಾಧ್ಯವಿಲ್ಲ. ಈಗ 30 ಮತ್ತು 70 ದಾಮಾಷ ಇಟ್ಟಿರುವುದನ್ನು, ಗ್ರಾಮಾಂತರದಿಂದ ಬರತಕ್ಕ ವಿದ್ಯಾರ್ಥಿಗಳು ಜಾಸ್ತಿಯಾಗಿರುವುದರಿಂದ, ಮೈಸೂರು ದೇಶದ ಜನಸಂಖ್ಯೆಯ ಆಧಾರದ ಮೇಲೆ ಗ್ರಾಮಾಂತರದಲ್ಲಿ ಶೇಕಡ 70-80 ರಷ್ಟು ಜನ ಇರುವುದರಿಂದ ಈ ದಾಮಾಷವನ್ನು ಬದಲಾಯಿಸಿ ಗ್ರಾಮಾಂತರದಿಂದ ಬರುವವರಿಗೆ 70 ಮತ್ತು ಇತರರಿಗೆ 30 ಎಂದು ಮಾಡುವುದಕ್ಕಾಗುತ್ತದೆಯೇ?

ಶ್ರೀ ಕೆ.ವಿ. ಶಂಕರಗೌಡ– ಈಗ ಇತರರಿಗೆ 70 ಇಲ್ಲ. ಮಾನ್ಯ ಸದಸ್ಯರು ಹೇಳಿದ್ದು ಸರಿಯಲ್ಲ, ಹರಿಜನರಿಗೆ ಎಂದರೆ ಷೆಡ್ಯೂಲ್ ಕ್ಯಾಸ್ಟ್‌ನವರಿಗೆ ಶೇಕಡ 15, ಷೆಡ್ಯೂಲ್ ಟ್ರೈಬ್‌ನವರಿಗೆ ಶೇಕಡ 3, ಎಕನಾಮಿಕಲಿ ಅಂಡ್ ಸೋಷಿಯಲಿ ಬ್ಯಾಕ್‌ವರ್ಡ್ ಇರುವವರಿಗೆ ಶೇಕಡ 30, ಒಟ್ಟು 48 ಪರ್ಸೆಂಟ್ ಆಗುತ್ತದೆ. ಇದನ್ನು ಬಿಟ್ಟು ಶೇಕಡ 52ರಷ್ಟು ಸೀಟುಗಳು ಮತ್ರ ಜನರಲ್‌ಪೂಲ್‌ಗೆ ಸಿಕ್ಕುತ್ತವೆ. ಇದರಲ್ಲಿಯೂ ಶೇಕಡ ಎರಡೂವರೇ ಸೀಟುಗಳನ್ನು ಆಟಪಾಟಗಳಲ್ಲಿ ಮುಂದುವರಿದಿರುವವರಿಗೆ ಕೊಡಬೇಕೆಂದಿದೆ. 12 ಸೀಟುಗಳು ರಾಜಕೀಯ ಸಂತ್ರಸ್ತರ ಮಕ್ಕಳಿಗೆ ಕೊಡಬೇಕೆಂದಿದೆ.

ಶ್ರೀ ಸಿ.ಕೆ. ರಾಜಯ್ಯಶೆಟ್ಟಿ– 1,200 ರೂಪಾಯಿ ಆದಾಯ ಬರುವವರಿಗೆ ಸಾಧ್ಯವಿಲ್ಲದೆ ಇರಬಹುದು. ಎಕನಾಮಿಕಲಿ, ಸೋಷಿಯಲಿ ಬ್ಯಾಕ್‌ವರ್ಡ್ ಯಾರು ಎನ್ನುವುದಕ್ಕೆ 1,200 ರೂಪಾಯಿ ಮಿತಿಯನ್ನು ತೆಗೆದುಕೊಳ್ಳಲಾಗಿದೆ.

ಶ್ರೀ ಎಚ್.ಎನ್.ನಂಜೇಗೌಡ– ತಾಂತ್ರಿಕ ಶಿಕ್ಷಣ ಪಡೆದರೂ ಕೆಲಸ ಸಿಕ್ಕುವುದಿಲ್ಲ ಎಂದು ಅಪ್ಪಣೆ ಕೊಡಿಸಿದ್ದಾರೆ.

ಶ್ರೀ ಕೆ.ವಿ. ಶಂಕರಗೌಡ– ಕೆಲಸ ಸಿಕ್ಕುವುದಿಲ್ಲ ಎಂದು ಹೇಳಿಲ್ಲ.

ಶ್ರೀ ಎಚ್.ಎನ್. ನಂಜೇಗೌಡ– ಇಂಜಿನಿಯರಿಂಗ್ ಪದವೀಧರರಲ್ಲಿ ಸಾವಿರಕ್ಕೆ ನೂರು ಜನರಿಗೆ ಮಾತ್ರ ಕೆಲಸ ಸಿಕ್ಕಿ 900 ಜನಗಳಿಗೆ ಕೆಲಸ ಸಿಕ್ಕುತ್ತಿಲ್ಲ ಎಂದು ಸರ್ಕಾರದವರೇ ಈ ಸಭೆಯಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಇಂಥ ಪರಿಸ್ಥಿತಿ ಇರುವಾಗ ಬಿ.ಎಸ್ಸಿ (ಅಗ್ರಿಕಲ್ಚರ್) ವಿದ್ಯಾಭ್ಯಾಸದಿಂದ ಅನುಕೂಲ ಪಡೆಯುವವರು ರೈತರ ಮಕ್ಕಳು. ಆದ್ದರಿಂದ ರೈತರಿಗೆ ಅನುಕೂಲ ಮಾಡಿಕೊಡುವ ಸಲುವಾಗಿ ಶೇಕಡ 80 ಸೀಟುಗಳನ್ನು ಗ್ರಾಮಾಂತರ ಪ್ರದೇಶದ ಜನರಿಗೆ ಕೊಡುವುದಕ್ಕೆ ಅವಕಾಶ ಮಾಡಿಕೊಡುತ್ತೀರಾ ಸ್ವಾಮಿ?

ಶ್ರೀ ಕೆ.ವಿ. ಶಂಕರಗೌಡ– ಆ ರೀತಿ ಅವಕಾಶ ಕೊಡುವುದಕ್ಕೆ ಸಾಧ್ಯವಿಲ್ಲ ಎಂದು ಕಾಣುತ್ತದೆ.

ಶ್ರೀ ಅಜೀಜ್ ಸೇಟ್- ರಾಜಕೀಯ ಸಂತ್ರಸ್ತರಿಗೆ 12 ಸೀಟುಗಳನ್ನು ಕಾದಿಡಲಾಗಿದೆ ಎಂದು ಹೇಳಿದರು. ಇದರಲ್ಲಿ ಎ.ಬಿ.ಸಿ. ಎಂದು ವಿಂಗಡನೆ ಮಾಡಿದ್ದೀರೋ ಇಲ್ಲವೋ ಗೊತ್ತಿಲ್ಲ ಅದರಲ್ಲಿ ಮಂತ್ರಿಗಳ ಮಕ್ಕಳು ಎಷ್ಟು ಜನರಿಗೆ, ಪಟ್ಟಣಗಳಲ್ಲಿರುವವರ ಮಕ್ಕಳಿಗೆ ಎಷ್ಟು ಜನರಿಗೆ ಮತ್ತು ಹಳ್ಳಿಯಲ್ಲಿರುವವರಿಗೆ ಎಷ್ಟು ಸೀಟು ಕೊಟ್ಟಿದ್ದೀರಿ ಎಂದು ಹೇಳುವುದಕ್ಕೆ ಸಾಧ್ಯವೇ ಸ್ವಾಮಿ?

ಶ್ರೀ ಕೆ.ವಿ. ಶಂಕರಗೌಡ- ನೋಟೀಸ್ ಬೇಕು, ಸ್ವಾಮಿ.

ಶ್ರೀ ಕೆ.ಎನ್. ವೀರಪ್ಪಗೌಡ- ಹಿಂದುಳಿದವರು ಎನ್ನುವುದಕ್ಕೆ 1,200 ರೂಪಾಯಿ ಮಿತಿಯನ್ನು ಹಾಕಿದ್ದೀರಿ. ಈಗಿನ ಕಾಲದಲ್ಲಿ ಒಬ್ಬ ಶಾಲಾ ಉಪಾಧ್ಯಾಯನಿಗೂ ಕೂಡ ಅದಕ್ಕಿಂತ ಜಾಸ್ತಿ ಆದಾಯ ಬರುತ್ತದೆ. ಅಂಥವರಿಗೂ ಸೀಟು ಸಿಕ್ಕುವುದಕ್ಕೆ ಅವಕಾಶವಿಲ್ಲ. ಈಗ ಸೀಟುಗಳೆಲ್ಲ ಜಾಸ್ತಿಯಾಗಿರುವುದರಿಂದ ಈ ಮಿತಿಯನ್ನು ಒಂದಕ್ಕೆ ಎರಡರಷ್ಟು ಮಾಡುವುದಕ್ಕೆ ಸಾಧ್ಯವೇ?

ಶ್ರೀ ಕೆ.ವಿ. ಶಂಕರಗೌಡ- ಅದರ ಅವಶ್ಯಕತೆಯಿಲ್ಲ.

ಶ್ರೀ ಎ. ಮುನಿಯಪ್ಪ- ಪೊಲಿಟಿಕಲ್ ಸಫರ್ಸ್‌ಗೆ ಶೇಕಡ 12 ಸ್ಥಾನಗಳನ್ನು ಕೊಡುವಾಗ ಅದರ ಸೌಲಭ್ಯವನ್ನು ಯಾರು ಪಡೆಯಬಹುದು.

ಶ್ರೀ ಕೆ.ವಿ. ಶಂಕರಗೌಡ- ಸಫರರ್ ಮಕ್ಕಳು ಅಣ್ಣ ತಮ್ಮಂದಿರು ಮುಂತಾದವರೆಲ್ಲಾ ಪಡೆಯಬಹುದು.

ಶ್ರೀ ಎಲ್.ಶ್ರೀಕಂಠಯ್ಯ- ಸರಕಾರಿ ನೌಕರಲ್ಲದವರು ವರಮಾನ ಸರಿಯಾಗಿ ಕೊಡದೆ ತಪ್ಪಿಸಿಕೊಳ್ಳುವರು. ಆದರೆ ಸರಕಾರಿ ನೌಕರರಿಗೆ ಹಾಗೆ ಮಾಡಲು ಸಾಧ್ಯವಾಗುವುದಿಲ್ಲ. ಇದು ಗಮನಕ್ಕೆ ಬಂದಿದೆಯೆ?

ಶ್ರೀ ಕೆ.ವಿ. ಶಂಕರಗೌಡ- ಅದು ದೊಡ್ಡ ಪ್ರಶ್ನೆ. ಅನೇಕರು ಹಾಗೆ ಮಾಡಬಹುದು.

**Sri G. Chandrakanth-** That is admittedly a fact that Hyderabad Karnataka area is a backward area. What prevents the Government in making allocation of seats for students from that area in the engineering and medical colleges?

**Sri. K.V. Shankaragowda-** That cannot be-done. We have reserved 33 percent for socially and educationally backward classes.

**Sri. Digambara Rao B. Kalmankar-** What is the definition of economically and socially backward class?

**Sri K.V. Shankaragowda-** That has been defined according to rules.

## Three Language Formula

**14-3-1968**

**186. Sri B.P. Gangadhar (Tumkur)-**

Will the Minister for Agriculture and Education be pleased to state:-

a) the intention of the State Government in the matter of imposing compulsory Hindi learning:

b) the idea of the Government in implementing three language formula;

c) Whether it is not a fact that the neighbouring States have not accepted the three language formula and have introduced only two language formula;

d) will the Government be pleased to state the number of places in the State where the disturbances have taken place due to anti Hindi agitation;

e) the places where police firing thas taken place;

f) (i) the number of deathes taken place and (ii) the number of persons wounded;

g) Whether it is not desirable on the part of the Government in the best interest of the State to reject the three language formula and to continue the good old English-Kannada two-language formula?

**A- Sri K.V. Shankaragowda (Minister for Agriculture and Education):**

a) and b) According to the Indian Constitution Hindi is the official language of the Union. The amendment to the official Languages Act and the Resolution of Parliament on the language policy have confirmed that three- Language Formula of Teaching Regional Language, English and Hindi

in Schools should be continued. The first two are required for higher education.

It is considered that a working knowledge of Hindi will be useful for a citizen.

c) All States had originally accepted the formula. Recently Madras has adopted its own formula.

d) Theree cities.

e) Bangalore, Mysore and Mangalore.

f) (i) Seven lives lost.

(ii) 72 were injured.

g) No.

**Sri B.P. Gangadhar-** When Madras has adopted the two language formula, may I know what is the difficulty for us to implement the same?

**Sri K.V. Shankaragowda-** Madras cannot be a model for us. We have long ago accepted the three language formula and we want to continue it.

**Sri. T.R. Shamanna-** When the Government has accepted that the recent resolution adopted by the Parliament on the language issue puts unequal burden on the South and when the Hindi State are adamant and uncompromising, is it not advisable that Government should keep in abeyance the three language formula till they are broutht to their sense?

**Sri K.V. Shankara Gowda-** The three - language formula is applicable to all States and all States have agreed to apply this formula.

ಶ್ರೀ ಎಂ.ಎಸ್. ಕೃಷ್ಣನ್- ಈ ತ್ರಿಭಾಷಾ ಸೂತ್ರದ ಬಗ್ಗೆ ಬೇರೆ ರಾಜ್ಯಗಳಲ್ಲಿ ಮುಖ್ಯವಾಗಿ ಉತ್ತರದ ರಾಜ್ಯಗಳಲ್ಲಿ ಇದು ಯಾವುದೂ ಜಾರಿಗೆ ಬಂದಿಲ್ಲ. ಬರುವ ಹಾಗೂ ಇಲ್ಲ; ಎಕೆಂದರೆ ಅವರಿಗೆ ಗೊತ್ತಿರುವ ಭಾಷೆ ಹಿಂದಿ, ಇನ್ನೊಂದು ಇಂಗ್ಲೀಷು.

ಬೇರೆ ಯಾವ ಭಾಷೆಯನ್ನೂ ಕಲಿತುಕೊಳ್ಳುವುದಕ್ಕೆ ಅವರು ತಯಾರಾಗಿಲ್ಲ. ಪ್ರಯತ್ನವನ್ನು ಅವರು ಮಾಡಿಯೂ ಇಲ್ಲ ಎಂಬುದು ಗೊತ್ತಿದ್ದರೂ ಸಹ ಅದನ್ನು ಇಲ್ಲಿ ಏಕೆ ನಮ್ಮ ಮೇಲೆ ಹೊರಿಸುವುದಕ್ಕೆ ಪ್ರಯತ್ನ ಪಡುತ್ತಾ ಇದ್ದೀರಿ ?

ಶ್ರೀ ಕೆ.ವಿ. ಶಂಕರಗೌಡ- ಈ ಸ್ಟೇಟ್‌ಗಳಲ್ಲೂ ಕೂಡ ತ್ರೀ ಲ್ಯಾಂಗ್ವೇಜ್ ಫಾರ್ಮುಲಾ ತರುವುದಕ್ಕೆ ಒತ್ತಾಯ ಮಾಡುತ್ತಾ ಇದ್ದೇವೆ.

**Sri B.P. Gangadhar-** Taking into consideration the mounting public opinion on this point and also the agitation of the students, will the Government reconsider the entire matter and adopt the two language formula?

**Sri K.V. Shankaragowda -** Public opinion is divided on this issue.

**Sri S. Shivappa-** In answer to (d) and (e) it is stated that the Government of India will be moved to re examine the position. May I know how you have moved the Government of India, what are the suggestions you have made to the Government of India to reconsider this issue and what is the reply that you have received from the Centre.

**Sri K.V. Shankaragowda-** We have asked them to apply this three language formula strictly to all the States and we have asked them to make it compulsory, and we are going to ask the Central Government they anybody seeking employment in Central services should answer papers in three languages, viz., Hindi, English and the regional language.

ಶ್ರೀ ಎನ್.ಎ. ಚನ್ನೇಗೌಡ- ಕೇಂದ್ರ ಸರ್ಕಾರದವರು ಮೊನ್ನೆ ಅಲ್ಲಿ ಮಾಡಿದ ಒಂದು ನಿರ್ಣಯವೇನಿದೆ ಅದು ಸರಿಯಾದ್ದಲ್ಲ ಎಂಬುದನ್ನು ಅವರಿಗೆ ತಿಳಿಸತಕ್ಕ ಬಗ್ಗೆ ನಮ್ಮ ರಾಜ್ಯ ಸರ್ಕಾರದವರು ಕೈಗೊಂಡಿರತಕ್ಕ ಕಾರ್ಯಕ್ರಮಗಳೇನು ?

ಶ್ರೀ ಕೆ.ವಿ. ಶಂಕರಗೌಡ- ಆ ನಿರ್ಣಯವನ್ನು ಬದಲಾಯಿಸಬೇಕೆಂದು ನಾವು ಕೇಳಿದ್ದೇವೆ.

**Sri Digambara Rao B. Kalmankar-** Has it not come to the notice of the Government that the Northern States are not

agreeable to the three- language formula and they are not going to accept it?

**Sri K.V. Shankaragowda-** We cannot say that they are not agreable to the three- language formula, but some of the States are not implementing the three language formula strictly.

**Sri B.P. Gangadhar-** May I know whether the Government will consider to pay compensation to persons who have lost their lives and to persons who have lost their property?

**Sri. K.V. Shankargowda-** That is under the consideration of the Government.

ಶ್ರೀ ಜಿ. ದುಗ್ಗಪ್ಪ- ಇಲ್ಲಿ ಮಂತ್ರಿಗಳು ಕೊಡತಕ್ಕ ಉತ್ತರ ಸಂತೆಯಲ್ಲಿ ಮಳೆ ಬಂದಾಗ ಉಪ್ಪಿನವನು ತಾನು ಕೆಟ್ಟೆ ಎಂದು ಬಾಯಿ ಬಡಿದುಕೊಂಡರೆ, ತೆಂಗಿನಕಾಯಿನವನೂ ಬಾಯಿ ಬಡಿದುಕೊಳ್ಳುತ್ತಿದ್ದನೆಂದು ಹೇಳಿದಂತೆ ಇರುತ್ತದೆಯಲ್ಲವೇ?

ಉಪಾಧ್ಯಕ್ಷರು- ನೀವು ಗಾದೆಯನ್ನು ಹೇಳಿದಿರಿ, ಪ್ರಶ್ನೆಯನ್ನು ಕೇಳಲೇ ಇಲ್ಲ.

**Sri A.R. Badarinarayan-** How far and to what extent have the Hindi speaking areas adoptede effectively the three-language formula?

**Sri K.V. Shankaragowda-** I have already stated that in some of the Hindi speaking areas the three-language formula is not strictly adhered to.

**Sri. Venkatagiriappa-** In view of the imperialistic attitude of the Hindi speaking States, will the Government consider to change the three-language formula in our State also in consonance with Madras State?

**Srik K.V. Shankara Gowda-** Government does not consider advisible to change the three-language formula.

**Sri J.P. Sarvesh-** Through the State Government has accepted this formula of three languages, is it not a fact that there are thousands of schools where Hindi is not taught and Hindi teachers are not available?

**Sri K.V. Shankara Gowda-** In some schools there may not be Hindi teachers, but alternative arrangements are made.

**Sri T.R. Shamanna-** The Government through the Education Minister have accepted that those who get zero in Hindi are promoted. That means the have accepted the two language formula indirectly. But directly the Government say that they are adopting the three language formula. Is it correct?

**Sri K.V. Shankara Gowda-** What is necessary is working knowledge of Hindi. It is not necessary that they should pass in the examination.

**Mr. Deputy Speaker-** Today we are having 15 questions, some of these questions will lapse, if the Hon'ble members distrub the procedings.

**Sri H. Siddaveerappa-** All these have arisen because the Government is keeping mum over this matter. They could have arranged for a debate on this there language formula by allotting two or three days. But they are shirking their responsiblity. they do not want to give priority to this.

**12-30 p.m.**

**Sri S. Sivappa-** The Chair will kindly allow discussion on this important issue concerning the entire State.

**Sri H. Siddaveerappa-** Will they give an assurance to arrange for a debate giving two or three days? I am asking why should they not do so?

**Sri K.V. Shankara Gowda-** The demand on education is going to be placed for discussion before this House. The members will have amplescope to discuss on this subject.

**Sri S. Sivappa-** This three language formula is different from the demand you are placing. Education demand is different and three language formula is different. There is a policy matter involved in this formula.

**Sri H. Siddaveerappa-** Our Parliamentary Affairs Minister is keeping quiet and perhaps he is sleeping although he said that an earliest opportunity will be given to discuss this formula.

**Mr. Deputy Speaker-** Next question.

## BUDGET ESTIMATES FOR 1967-68.

## DEMANDS FOR GRANTS (DEMAND Nos. 17 and 37)

## (Debate - Contd.)

ಶ್ರೀ ಕೆ.ವಿ. ಶಂಕರಗೌಡ- ಮಾನ್ಯ ಸಭಾಪತಿಗಳೇ, ಕಳೆದ ಎರಡು ದಿವಸಗಳಿಂದ ಈ ಸಭೆಯ ಮಾನ್ಯ ಸದಸ್ಯರು ಮಾಡಿರುವ ಭಾಷಣಗಳನ್ನು ನಾನು ಗಮನವಿಟ್ಟು ಕೇಳಿದ್ದೇನೆ. ಅನೇಕ ಜನ ಸದಸ್ಯರು ಉಪಯುಕ್ತವಾದ ಸಲಹೆಗಳನ್ನು ಮಾಡಿದ್ದಾರೆ. ಈ ಸಭೆಯ ಸದಸ್ಯರಲ್ಲಿ ಕೆಲವರು ಆವೇಶಪೂರಿತವಾದ ಭಾಷಣವನ್ನೂ ಕೂಡ ಮಾಡಿದ್ದಾರೆ. ಈ ಸಭೆಯ ಸದಸ್ಯರೆಲ್ಲರ ಗುರಿಯಲ್ಲಿ ಕವಲು ಇಲ್ಲ. ಗುರಿ ಒಂದೇ. ಅದೇನೆಂದರೆ, ಪ್ರಜಾಹಿತ ಸಾಧನೆ ಮತ್ತು ರಾಷ್ಟ್ರ ನಿರ್ಮಾಣ. ಈ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಶಿಕ್ಷಣವು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಅಂಥಾ ಪ್ರಮುಖವಾದ ಪಾತ್ರವನ್ನು ವಹಿಸತಕ್ಕಂಥ ಶಿಕ್ಷಣದ ಬಗ್ಗೆ ರಚನಾತ್ಮಕವಾದ ಸಲಹೆಗಳು ಸ್ವಾಗತಾರ್ಹ. ಈ ಮಾನ್ಯ ಸಭೆಯ ಸದಸ್ಯರು ಮಾತನಾಡಿರತಕ್ಕ ಎಲ್ಲಾ ವಿಷಯಗಳಿಗೂ ಉತ್ತರ ಕೊಡುತ್ತೇನೆಂಬ ಭರವಸೆ ಇಲ್ಲ. ಮುಖ್ಯವಾಗಿ ತತ್ವ ಮತ್ತು ನೀತಿಗಳಿಗೆ ಸಂಬಂದಪಟ್ಟ ವಿಚಾರಗಳ ಬಗ್ಗೆ ನಾನು ಪ್ರಸ್ತಾಪ ಮಾಡುತ್ತೇನೆ. ಎಂದರೆ, ಉಳಿದ ವಿಚಾರಗಳ ಬಗ್ಗೆ ನಿರ್ಲಕ್ಷ್ಯದಿಂದಿರುತ್ತೇನೆಂದು ಯಾರೂ ಭಾವಿಸಿಕೊಳ್ಳಬಾರದು. ಸಾಧ್ಯವಾದಷ್ಟು ಮಟ್ಟಿಗೆ ಅವುಗಳ ಪಟ್ಟಿಯನ್ನು ಮಾಡಿಕೊಂಡಿದ್ದೇನೆ. ಅವುಗಳ ಬಗ್ಗೆ ಸರ್ಕಾರದ ನಿಯಮಗಳಿಗನುಸಾರವಾಗಿ ಮಾಡಬೇಕಾದ ಕೆಲಸಗಳು ಏನಾದರೂ ಇದ್ದರೆ ಅದಷ್ಟು ಜಾಗ್ರತೆ ಮಾಡುತ್ತೇನೆ ಎಂಬ ಆಶ್ವಾಸನೆಯನ್ನು ಮಾನ್ಯ ಸದಸ್ಯರಿಗೆ ಕೊಡುವುದಕ್ಕೆ ಇಚ್ಚಿಸುತ್ತೇನೆ.

ಮಾನ್ಯ ಸಭಾಪತಿಗಳೇ, ನಾವು ನಮ್ಮ ಮಕ್ಕಳಿಗೆ ಕೊಡತಕ್ಕ ಶಿಕ್ಷಣ ನಮ್ಮ ಸಂಸ್ಕೃತಿ ಮತ್ತು ಪರಂಪರೆಗೆ ಅನುಗುಣವಾಗಿ ಇರಬೇಕು; ನಮ್ಮ ಜನರ ಆರ್ಥಿಕ, ಸಾಮಾಜಿಕ, ಹಾಗೂ ನೈತಿಕ ಪ್ರಗತಿಗೆ ಇಂಬುಕೊಡುವಂಥಾದ್ದು ಆಗಿರಬೇಕು; ಆಸೆ ಆಕಾಂಕ್ಷೆಗಳನ್ನು ಈಡೇರಿಸುವಂಥಾದ್ದು ಆಗಿರಬೇಕು; ಜನರ ಜೀವನದ ವ್ಯವಸ್ಥೆಗೆ ಹೊಂದಿಕೊಳ್ಳುವಂಥಾದ್ದು ಆಗಿರಬೇಕು. ಈ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಶಿಕ್ಷಣ ಪದ್ಧತಿಯನ್ನು ಸುಧಾರಣೆ ಮಾಡತಕ್ಕ ಕೆಲಸ ನಮ್ಮ ದೇಶದಲ್ಲಿ ಸಾಕಷ್ಟು ಮಟ್ಟಿಗೆ ನಡೆದಿದೆ. ಇದಕ್ಕಾಗಿ ಇಂಡಿಯಾ ಸರ್ಕಾರದವರು ಅನೇಕ ಕಮಿಟಿಗಳನ್ನು ಸ್ಥಾಪಿಸಿದ್ದಾರೆ. ಮತ್ತು ವರದಿಗಳನ್ನು ತಯಾರಿಸಿದರೂ ಕೂಡ ಕೊನೆಗೆ ಕೊಠಾರಿ ಆಯೋಗ ರಚಿಸಲ್ಪಟ್ಟಿತು. ಅವರ ವರದಿ ಸಿದ್ಧವಾಗಿದೆ. ದೇಶದ ಮುಂದೆ ಈ ವರದಿ ಏನಿದೆ ಇದರ ಬಗ್ಗೆ ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳುವುದಕ್ಕೆ ಇಚ್ಚೆಪಡುತ್ತೇನೆ. ಕೊಠಾರಿ ಕಮಿಟಿಯಲ್ಲಿರಕ್ಕಂಥ ಎಲ್ಲಾ ಶಿಫಾರಸ್ಸುಗಳನ್ನೂ ಕೂಡ ಅನುಷ್ಠಾನಕ್ಕೆ ತರುವುದಕ್ಕೆ ಅರ್ಹವಾಗಿವೆ ಎಂದು ಹೇಳುವುದಕ್ಕೆ ಬರುವುದಿಲ್ಲ ಬಹುಭಾಗ ವಿಷಯಗಳು ಅನುಷ್ಠಾನಕ್ಕೆ ತರುವುದಕ್ಕೆ ಅರ್ಹವಾಗಿವೆ.

(Mr. Deputy Speaker in the Chair)

ಒಂದೆರಡು ಪ್ರಮುಖ ವಿಚಾರದಲ್ಲಿ ಅಭಿಪ್ರಾಯ ಭೇದವಿದೆ. ಅದರಲ್ಲಿ ಮುಖ್ಯವಾದುದು ತ್ರಿಭಾಷಾ ಸೂತ್ರ. ಇದು ದೇಶದ ದುರಾದೃಷ್ಟ. ಈ ತ್ರಿಭಾಷಾ ಸೂತ್ರದ ಬಗ್ಗೆ ಒಂದು ರೀತಿ ಗೊಂದಲವುಂಟಾಗಿದೆ. ಕಳೆದ ತಿಂಗಳಿನಲ್ಲಿ ದೆಹಲಿಯಲ್ಲಿ ಎಲ್ಲ ರಾಜ್ಯಗಳ ಶಿಕ್ಷಣ ಮಂತ್ರಿಗಳ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ಕೂಡ ಭಿನ್ನಭಿಪ್ರಾಯ ತಲೆದೋರಿತು. ಇದನ್ನು ಬಗೆಹರಿಸಲು ಮತ್ತು ಒಂದು ಒಪ್ಪಿಗೆಗೆ ಬರಲು ಕೆಲವು ರಾಜ್ಯಗಳ ಶಿಕ್ಷಣ ಮಂತ್ರಿಗಳನ್ನೊಳಗೊಂಡಂಥ ಒಂದು ಸಣ್ಣ ಕಮಿಟಿಯನ್ನು ಮಾಡಲಾಗಿತ್ತು. ನಮ್ಮ ರಾಜ್ಯದ ಮಟ್ಟಿಗೆ ಹೇಳುವುದಾದರೆ, ತ್ರಿಬಾಷಾ ಸೂತ್ರವನ್ನು ಒಂದು ರೀತಿಯಲ್ಲಿ ನಾವು ಒಪ್ಪಿಕೊಂಡಿದ್ದೇವೆ. ಇದನ್ನು ಜಾರಿಗೆ ತರುವುದಕ್ಕೆ ಯಾರೇ ವಿರೋಧಿಸಿದರೂ ಕೂಡ ಇದು ಖಂಡಿತವಾಗಿ ಜಾರಿಗೆ ಬರುತ್ತದೆ ಎಂದು ಆಶ್ವಾಸನೆ ಈ ಸಂದರ್ಭದಲ್ಲಿ ಕೊಡಲು ಇಚ್ಚಿಪಡುತ್ತೇನೆ.

ಶ್ರೀ ಎಲ್. ಶ್ರೀಕಂಠಯ್ಯ (ನಂಜನಗೂಡು)- ತ್ರಿಭಾಷಾ ಸೂತ್ರವನ್ನು ಜಾರಿಗೆ ತರುವುದಕ್ಕೆ ಗಮನ ಕೊಡುತ್ತೀರಾ? ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು? ಸರಕಾರದ ಅಭಿಪ್ರಾಯವೇನು?

ಶ್ರೀ ಕೆ.ಶಂಕರಗೌಡ- ಹೌದು. ಅದು ಸರಕಾರದ ಅಭಿಪ್ರಾಯ. ನನ್ನ ಅಭಿಪ್ರಾಯವೂ ಅದೇ ಇದೆ.

ಇನ್ನು ಭೋಧನ ಮಾಧ್ಯಮದ ವಿಚಾರವಾಗಿ ಕೆಲವು ಸದಸ್ಯರು ಮಾತನಾಡಿದ್ದಾರೆ. ಪ್ರಾಂತೀಯ ಭಾಷೆ ಭೋದನಾ ಮಾಧ್ಯಮವಾಗಿರಬೇಕು ಎನ್ನುವ ವಿಚಾರದಲ್ಲಿ ಯಾವ ವಿವಾದವಿಲ್ಲ. ನಮ್ಮ ರಾಜ್ಯದಲ್ಲಿ ಈಗಾಗಲೇ ಕನ್ನಡ ಮಾಧ್ಯಮ ಮಾಡತಕ್ಕ ಕೆಲಸವಾಗಿದೆ ಎಂದು ಹೇಳಲು ನನಗೆ ಸಂತೋಷವಾಗುತ್ತದೆ. ಮೈಸೂರು ಬೆಂಗಳೂರು ಹಾಗೂ ಕರ್ನಾಟಕ ಯೂನಿವರ್ಸಿಟಿಯಲ್ಲಿ ಕನ್ನಡ ಭೋಧನ ಮಾದ್ಯಮವುಳ್ಳ ತರಗತಿಗಳನ್ನು ಪ್ರಾರಂಭ ಮಾಡಲಾಗಿದೆ. ಕನ್ನಡ ಬೋಧನ ಮಾಧ್ಯಮ ಪೂರ್ಣವಾಗಿ ಯಶಸ್ವಿಯಾಗಬೇಕಾದರೆ ಪೂರ್ವಭಾವಿಯಗಿ ಕೆಲವು ಕೆಲಸಗಳನ್ನು ಸಾಧಿಸಬೇಕಾಗುತ್ತದೆ. ಅದರಲ್ಲಿ ಮುಖ್ಯವಾದುದು ಮೊದಲನೆಯದು ಅಂದರೆ, ಸಾಕಷ್ಟು ಪ್ರಮಾಣದಲ್ಲಿ ಪಠ್ಯಪುಸ್ತಕಗಳು ತಯಾರಾಗಬೇಕು. ಎರಡನೆಯದಾಗಿ ರಾಜ್ಯದ ಆಡಳಿತ ಭಾಷೆ ಕನ್ನಡವಾಗಬೇಕು. ಮೂರನೆಯದಾಗಿ ಎಲ್ಲ ರಾಜ್ಯಗಳಲ್ಲಿ ಏಕ ಕಾಲದಲ್ಲಿ ಪ್ರಾಂತೀಯ ಭಾಷೆ ಬೋಧನ ಮಾದ್ಯಮವಾಗಬೇಕು. ನಾಲ್ಕನೆಯದಾಗಿ ಪಬ್ಲಿಕ್ ಸರ್ವಿಸ್ ಕಮಿಷನ್ನಿನ ಪರೀಕ್ಷೆಗಳು ಪ್ರಾಂತೀಯ ಭಾಷೆಯಲ್ಲಿ ನಡೆಯುವಂತೆ ಆಗಬೇಕು. ಈ ನಾಲ್ಕು ಕೆಲಸಗಾಳಾದರೆ ಪ್ರಾಂತೀಯ ಭಾಷೆ ಬೋಧನ ಮಾಧ್ಯಮವಾಗುವುದರಲ್ಲಿ ಯಾವ ಕಷ್ಟವಿಲ್ಲ. ಇದನ್ನು ಸಾಧ್ಯವಾದ ಮಟ್ಟಿಗೆ ಜಾರಿಗೆ ತರ...

ಪ್ರಯತ್ನ ಮಾಡಿದ್ದೇವೆ. ಅನೇಕ ಕಾಲೇಜುಗಳಲ್ಲಿ ಶಾಲೆಗಳಲ್ಲಿ ಕನ್ನಡ ಬೋಧನ ಮಾಧ್ಯಮವಾಗಿ ಇಟ್ಟುಕೊಂಡಿಕೊಂಡಿದ್ದೇವೆ. ಪಠ್ಯ ಪುಸ್ತಕ ತಯಾರ್ಮಾಡುವುದಕ್ಕೆ ಸಕಲ ಪ್ರೋತ್ಸಾಹ ಕೊಡುತ್ತಿದ್ದೇವೆ. ನನ್ನ ಆಶಯ ಇನ್ನು ಐದು ವರ್ಷಗಳಲ್ಲಿ ಕನ್ನಡ ಬೋಧನ ಮಾಧ್ಯಮವಾಗಬೇಕು ಎಂದು ಇದೆ.

ಶ್ರೀ ಎಲ್. ಶ್ರೀಕಂಠಯ್ಯ– ತ್ರಿಭಾಷಾ ಸೂತ್ರದಿಂದ ಮಕ್ಕಳಿಗೆ ಕಲಿಯುವುದಕ್ಕೆ ಎಷ್ಟೋ ತೊಂದರೆಯಾಗುತ್ತಿದೆ ಅಲ್ಲವೇ?

ಶ್ರೀ ಕೆ.ವಿ. ಶಂಕರಗೌಡ– ತ್ರಿಭಾಷಾ ಸೂತ್ರದಿಂದ ಮಕ್ಕಳಿಗೆ ತೊಂದರೆಯಾಗುತ್ತದೆ ಅಂದರೆ ಅಂಥ ತೊಂದರೆ ಅನುಭವಿಸಿಲ್ಲ. ಈಗಾಗಲೇ ಅದು ಜಾರಿಯಲ್ಲಿ ಇದೆ. ಕನ್ನಡ ಹಿಂದೀ ಇಂಗ್ಲೀಷ್ ಮಕ್ಕಳು ಕಲಿಯುತ್ತಿದ್ದಾರೆ. ಮೊದಲು ನಾಲ್ಕು ವರ್ಷ ಮಾತೃಭಾಷೆಯಲ್ಲಿ, ಐದನೇ ವರ್ಷದಲ್ಲಿ ಇಂಗ್ಲಿಷ್ ಪ್ರಾರಂಭಿಸುತ್ತೇವೆ. ಆರನೇ ವರ್ಷದಲ್ಲಿ ಹಿಂದೀ ಪ್ರಾರಂಭಿಸಿದ್ದೇವೆ. ಇದರಿಂದ ಯಾವ ತೊಂದರೆಯಾಗಿರಲಿಲ್ಲ. ಶಿಕ್ಷಣ ಮಾಧ್ಯಮದಲ್ಲಿ ಕೆಲವು ವಿಷಯಗಳನ್ನು ಸದಸ್ಯರು ತಿಳಿಸಿದ್ದಾರೆ. ಇನ್ನು ಹತ್ತು ವರ್ಷಗಳಲ್ಲಿ ಎಲ್ಲ ಹಂತದಲ್ಲಿ ತಾಂತ್ರಿಕ ಕಾಲೇಜುಗಳಲ್ಲಿ ಅಧಿಕೃತ ಕಾಲೇಜುಗಳಲ್ಲಿ ಕನ್ನಡವೆ ಶಿಕ್ಷಣ ಮಾಧ್ಯಮವಾಗುವುದರಲ್ಲಿ ಯಾವ ಸಂದೇಹವಿಲ್ಲ ಎಂದು ಈ ಸಭೆಗೆ ತಿಳಿಸಲು ನಾನು ಸಂತೋಷಪಡುತ್ತೇನೆ.

ಕೊಠಾರಿ ಆಯೋಗದವರು ಮಾಡಿರುವ ಶಿಫಾರಸುಗಳಲ್ಲಿ ಮುಖ್ಯವಾದ ವಿಷಯ ಸ್ಟ್ರಕ್ಚರ್ ಆಫ್ ಎಜುಕೇಷನ್ ಎಂದರೆ ಶಿಕ್ಷಣದ ಚೌಕಟ್ಟು, ಸ್ವರೂಪ. ಇದು 15 ವರ್ಷಗಳ ಕಾಲ ಇರಬೇಕು ಎಂದು ಅವರು ಶಿಪಾರಸು ಮಾಡಿದ್ದಾರೆ. ಅದನ್ನು ವಿವಿಧ ಭಾಗಗಳಾಗಿ ವಿಂಗಡಿಸಿದ್ದಾರೆ. ಮೊದಲು 10 ವರ್ಷಗಳು ಸಾಮಾನ್ಯ ಶಿಕ್ಷಣ. ಎಂಬುದಾಗಿಯೂ ವಿಭಾಗಿಸಲ್ಪಟ್ಟಿದೆ. ಆಮೇಲೆ ಎರಡು ವರ್ಷಗಳು ಹೈಯರ್ ಸೆಕಂಡರಿ, ಇದಾದ ಮೇಲೆ ಮೂರು ವರ್ಷಗಳು ಡಿಗ್ರಿ ತರಗತಿಗಳು. ಈ ಅಭಿಪ್ರಾಯವನ್ನು ಸಾಧಾರಣವಾಗಿ ನಾವು ಒಪ್ಪಿಕೊಳ್ಳುವಂಥ ಸ್ಥಿತಿಯಲ್ಲಿದ್ದೇವೆ. ಅದರಲ್ಲಿ ಈಗ ಒಂದು ವರ್ಷ ಹೈಯರ್ ಸೆಕೆಂಡರಿ ಜಾರಿಯಲ್ಲಿದೆ. ಇದನ್ನು ಎರಡು ವರ್ಷಕ್ಕೆ ಬದಲಾವಣೆ ಮಾಡತಕ್ಕ ಕೆಲಸ ನಡೆಯಬೇಕಗಿದೆ. ಇದರಲ್ಲಿ ಒಂದು ಅಡ್ಡಿ ಇದೆ. ಎಲ್ಲಾ ರಾಜ್ಯಗಳಲ್ಲೂ ಇದು ಏಕಕಾಲದಲ್ಲಿ ಆಗಬೇಕು. ಇಲ್ಲದೇ ಇದ್ದರೆ ಒಂದು ರಾಜ್ಯದಲ್ಲಿ ಎರಡು ವರ್ಷ ಇದ್ದು ಮತ್ತೊಂದು ರಾಜ್ಯದಲ್ಲಿ ಒಂದು ವರ್ಷವಿದ್ದರೆ, ಎರಡು ವರ್ಷವಿರತಕ್ಕ ರಾಜ್ಯಗಳ ಮಕ್ಕಳು ಒಂದು ವರ್ಷ ಇರತಕ್ಕ ರಾಜ್ಯಗಳಿಗೆ ವಲಸೆ ಬಂದು ಪರೀಕ್ಷೆಗೆ ಕುಳಿತುಕೊಳ್ಳುವ ಸಂದರ್ಭಗಳಿವೆ. ಇದನ್ನು ಮೈಸೂರು ದೇಶದಲ್ಲಿ ಈಗ ಸ್ವಲ್ಪ ಮಟ್ಟಿಗೆ ನಾವು ನೋಡುತ್ತಿದ್ದೇವೆ. ಕೇರಳ ರಾಜ್ಯದಲ್ಲಿ ಎರಡು ವರ್ಷ ಹೈಯರ್ ಸೆಕಂಡರಿ ಇದೆ. ಮೈಸೂರಿನಲ್ಲಿ ಒಂದು ವರ್ಷ ಹೈಯರ್ ಸೆಕೆಂಡರಿ ಇರುವುದರಿಂದ ಕೇರಳದ ಕೆಲವು ಮಕ್ಕಳು ಮೈಸೂರಿಗೆ ವಲಸೆ ಬಂದು ಒಂದು ವಿಧವಾದ ಗೊಂದಲ

ಉಂಟಾಗಿರುವುದನ್ನು ನಾವು ನೋಡಬಹುದು. ಆದುದರಿಂದ ಇದನ್ನು ಜಾರಿಗೆ ಕೊಡಬೇಕಾದರೆ ಎಲ್ಲಾ ರಾಜ್ಯಗಳಲ್ಲೂ ಏಕ ಕಾಲದಲ್ಲಿ ಜಾರಿಗೆ ಕೊಡತಕ್ಕದು ಉತ್ತಮ ಮತ್ತು ಎರಡು ವರ್ಷಗಳ ಹೈಯರ್ ಸೆಕಂಡರಿ ಕಲಿಯುವುದು ಬಹಳ ಶ್ರೇಷ್ಟವಾದ ಕೆಲಸ. ಒಂದು ವರ್ಷದ ಹೈಯರ್ ಸೆಕೆಂಡರಿ ಇರುವುದಿರಂದ ನಮ್ಮ ಶಿಕ್ಷಣದ ಮಟ್ಟ ಕಡಿಮೆಯಾಗುವುದಕ್ಕೆ ಅವಕಾಶ ಕೊಟ್ಟಂತಾಗಿದೆ. ಆದುದರಿಂದ ಇದನ್ನು ಎರಡು ವರ್ಷ ಮಾಡಬೇಕು ಎನ್ನುವುದರಲ್ಲಿ ಭಿನ್ನಾಭಿಪ್ರಾಯವಿರಲಾರದು ಎಂದು ನಾನು ಊಹಿಸಿಕೊಂಡಿದ್ದೇನೆ. ಇದನ್ನು ಎರಡು ವರ್ಷ ಮಾಡುವುದಕ್ಕೆ ಪ್ರಯತ್ನಗಳನ್ನು ಮಾಡಲಾಗುತ್ತಿದೆ.

ಮಾನ್ಯ ಸಭಾಪತಿಗಳೇ, ನಮ್ಮ ಶಿಕ್ಷಣದ ಪದ್ಧತಿಯಲ್ಲಿರತಕ್ಕ ದೊಡ್ಡ ನ್ಯೂನತೆಯೇನೆಂದರೆ, ಅವಶ್ಯಕತೆ ಹಾಗೂ ಅರ್ಹತೆ ಮತ್ತು ಪ್ರವೃತ್ತಿಯ ಮೇಲೆ ವಿದ್ಯಾರ್ಥಿಗಳನ್ನು ಆರಿಸದೆ ಇರತಕ್ಕದು. ಅವಶ್ಯಕತೆ ಇರಲಿ ಇಲ್ಲದೆ ಇರಲಿ ಅವಶ್ಯಕತೆ ಎಂದರೆ ಮ್ಯಾನ್‌ಪವರ್ ರಿಕ್ವೈರ್‌ಮೆಂಟ್ಸ್, ಅರ್ಹತೆ ಇರಲಿ, ಇಲ್ಲದೆ ಇರಲಿ ಪ್ರತಿಯೊಬ್ಬರೂ ಕೂಡ ವೈಜ್ಞಾನಿಕ ವಿಭಾಗವನ್ನೇ ಅಧ್ಯಯನ ಮಾಡಬೇಕೆಂದು ಅಪೇಕ್ಷಿಸ್ತೇವೆ. ಇದು ದೊಡ್ಡ ನ್ಯೂನತೆ. ಮಾನ್ಯ ಸದಸ್ಯರನೇಕರು ಶಾಲಾ ಕಾಲೇಜುಗಳಲ್ಲಿ ಮಕ್ಕಳಿಗೆ ಸರಿಯಾಗಿ ಸೀಟು ಸಿಕ್ಕುತ್ತಿಲ್ಲ ಎನ್ನುವ ಆಕ್ಷೇಪಣೆಯನ್ನು ಎತ್ತಿದ್ದಾರೆ. ಹೀಗೆ ಆಗುವುದಕ್ಕೆ ಈ ನ್ಯೂನತೆಯೇ ದೊಡ್ಡ ಕಾರಣ. ದೇಶದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ ಎಷ್ಟು ಜನ ಮಕ್ಕಳು ಪಾಸಾಗಿದ್ದಾರೆ ಅವರೆಲ್ಲರಿಗೂ ಕೂಡ ಪಿ.ಯು.ಸಿ. ಅಥವಾ ಹೈಯರ್ ಸೆಕೆಂಡರಿಯಲ್ಲಿ ಸಾಕಾದಷ್ಟು ಸ್ಥಳಾವಕಾಶವಿದೆ. ಎಷ್ಟು ಜನ ಮಕ್ಕಳು ಪಿ.ಯು.ಸಿ.ಯಲ್ಲಿ ಪಾಸಾಗಿದ್ದಾರೆ, ಅವರೆಲ್ಲರಿಗೂ ಬಿ.ಎ, ಬಿ.ಎಸ್ಸಿ., ತರಗತಿಗಳಲ್ಲಿ ಸಾಕಾದಷ್ಟು ಸ್ಥಳಾವಕಾಶವಿದೆ. ಆದರೆ ಬರೀ ವೈಜ್ಞಾನಿಕ ತರಗತಿಗಳಿಗೆ ಹೋಗಬೇಕೆಂಬ ಚಪಲವಿರುವುದರಿಂದ ಸ್ಥಳಾಭಾವವುಂಟಾಗಿದೆ.

ಶ್ರೀ ಎಂ.ಎಸ್. ಕೃಷ್ಣನ್ (ಮಲ್ಲೇಶ್ವರಂ)– ಬೇರೆ ವಿಭಾಗವನ್ನು ತೆಗೆದುಕೊಂಡರೆ ಅವರಿಗೆ ಸರಿಯಾಗಿ ಕೆಲಸಗಳು ಸಿಕ್ಕದೆ ತೊಂದರೆಯಾಗುತ್ತಲ್ಲ ಸ್ವಾಮಿ.

ಶ್ರೀ ಕೆ.ವಿ. ಶಂಕರಗೌಡ– ನಾನು ಹೇಳುವುದನ್ನು ಮಾನ್ಯ ಸದಸ್ಯರು ಗಮನವಿಟ್ಟು ಕೇಳಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಅವಶ್ಯಕತೆಯ ದೃಷ್ಟಿಯಿಂದ ಮಕ್ಕಳನ್ನು ವಿಭಾಗಿಸುತ್ತಿಲ್ಲ ಮತ್ತು ಮ್ಯಾನ್‌ಪವರ್ ರಿಕ್ವೈರ್‌ಮೆಂಟ್ ನೋಡಿಕೊಂಡು ಮಕ್ಕಳನ್ನು ಆರಿಸುತ್ತಿಲ್ಲ. ಇದನ್ನು ಗಮನಿಸಿ ಆರಿಸುವ ಪದ್ಧತಿ ಜಾರಿಗೆ ಬರಬೇಕು. ಈಗ ನಮ್ಮ ಓದತಕ್ಕಂಥ ವಿಭಾಗಗಳನ್ನು ವಿವಿಧ ರೂಪಕ್ಕೆ ತಿರುಗಿಸಬೇಕು. ಡೈವರ್ಸಿಫಿಕೇಷನ್ ಆಫ್ ಕೋರ್ಸ್ ಅದನ್ನು ಜಾರಿಗೆ ತರಬೇಕು. ಔದ್ಯೋಗಿಕ ಶಿಕ್ಷಣಕ್ಕೆ ಹೆಚ್ಚು ಗಮನ ಕೊಡಬೇಕು. ಯಾವ ಯಾವ ಡಿಪಾರ್ಟ್‌ಮೆಂಟಿನಲ್ಲಿ ಎಷ್ಟೆಷ್ಟು ಕೆಲಸ ಇದೆ ಎನ್ನತಕ್ಕಂಥಾದ್ದು ತಯಾರು ಮಾಡಬೇಕು. ಇದನ್ನು ಮಾಡುವುದಕ್ಕಾಗಿ ಬೇರೆ ಬೇರೆ ಯೂನಿಟ್ಟುಗಳನ್ನು ವಿದ್ಯಾಭ್ಯಾಸ ಇಲಾಖೆಯಲ್ಲಿ

ವ್ಯವಸ್ಥೆ ಮಾಡಿ ಪ್ರಯತ್ನ ಮಾಡಲಾಗಿದೆ. ಮುಂದೆ ಬರತಕ್ಕ ವರ್ಷದಲ್ಲಿ ವಿದ್ಯಾರ್ಥಿಗಳ ಅರ್ಹತೆ ಮತ್ತು ಪ್ರವೃತ್ತಿ ಅವುಗಳನ್ನು ಗಮನಿಸಿಕೊಂಡು ಮ್ಯಾನ್‌ಪವರ್ ರಿಕ್ವೈರ್‌ಮೆಂಟ್ಸ್ ಗಮನದಲ್ಲಿಟ್ಟುಕೊಂಡು ವಿದ್ಯಾರ್ಥಿಗಳನ್ನು ಆರಿಸುವ ಏರ್ಪಾಡನ್ನು ಕೈಗೊಳ್ಳಬೇಕು.

ಶ್ರೀ ಬಿ.ಪಿ. **ಗಂಗಾಧರ್ (ತುಮಕೂರು)-** ಮ್ಯಾನ್‌ಪವರ್ ರಿಕ್ವೈರ್‌ಮೆಂಟ್ಸ್ ಎಂದರೆ ಏನು?

ಶ್ರೀ **ಕೆ.ವಿ. ಶಂಕರಗೌಡ-** ಯಾವ ಯಾವ ಕ್ಲಾಸಿಗೆ ಎಷ್ಟೆಷ್ಟು ಜನ ಬೇಕಾಗುತ್ತದೆ ಎನ್ನತಕ್ಕಂಥಾದ್ದು. ಇದಕ್ಕೆ ಮಾನ್ಯ ಸದಸ್ಯರ ಸಹಕಾರವನ್ನು ಕೋರುತ್ತೇನೆ. ಕೆಲವು ಆಕ್ಷೇಪಣೆ ಎತ್ತುತ್ತಾರೆ. ಈ ರೀತಿ ಮಾಡಿದರೆ ಕೆಲವು ವರ್ಗದವರಿಗೆ ಅನ್ಯಾಯವಾಗುತ್ತದೆ ಎನ್ನುವ ಶಂಕೆ ಇದೆ. ಆಗಾಗ್ಗೆ ಆಕ್ಷೇಪಣೆ ಮಾತುಗಳು ಆಗುವ ಅವಕಾಶ ಉಂಟು. ಇದನ್ನು ದೀರ್ಘವಾಗಿ ಯೋಚನೆ ಮಾಡಬೇಕು. ಮುಂದಿನ ವರ್ಷದಲ್ಲಿ ಅರ್ಹತೆ ಮತ್ತು ಪ್ರವೃತ್ತಿ ಆಧಾರದ ಮೇಲೆ ಮತ್ತು ಅವಶ್ಯಕತೆಯ ಆಧಾರದ ಮೇಲೆ ವಿದ್ಯಾರ್ಥಿಗಳನ್ನು ವಿಭಾಗಿಸುವ ಕೆಲಸ ಸಾಗಿಸಬೇಕಗಿದೆ. ಇದಕ್ಕೆ ಮಾನ್ಯ ಸದಸ್ಯರ ಸಹಕಾರವನ್ನು ಕೋರುತ್ತೇನೆ. ಈ ಸಂದರ್ಭದಲ್ಲಿ ಮೆರಿಟ್ ಮತ್ತು ಅರ್ಹತೆ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿದ್ದಾರೆ. ಅರ್ಹತೆಯನ್ನು ಪತ್ತೆ ಹಚ್ಚುವುದಕ್ಕೆ ಇಟ್ಟುಕೊಂಡಿರತಲ್ಲ ಕ್ರಮ ಏನು ಇದೆ ಅದು ದೋಷಯುಕ್ತವಾಗಿದೆಯೆಂದರೆ, ಆ ಮಾತನ್ನು ಒಪ್ಪಿಕೊಳ್ಳುತ್ತೇನೆ. ಬರೀ ಪರೀಕ್ಷೆಯಲ್ಲಿ ಬರತಕ್ಕ ಅಂಕಗಳ ಮೇಲೆ ವಿದ್ಯಾರ್ಥಿಗಳ ಅರ್ಹತೆಯನ್ನು ಪರೀಕ್ಷೆ ಮಾಡುವುದಕ್ಕಾಗುವುದಿಲ್ಲ. ಪ್ರತ್ಯೇಕವಾದ ಪರೀಕ್ಷಾ ಪದ್ಧತಿಯನ್ನೇ ಜಾರಿಗೆ ತರಬೇಕಾಗಿದೆ. ಈ ವರ್ಷ ಇಂಜಿನಿಯರಿಂಗ್ ಕಾಲೇಜುಗಳಿಗೆ ಅರ್ಜಿ ಹಾಕಿಕೊಂಡ ವಿದ್ಯಾರ್ಥಿಗಳನ್ನು ಆರಿಸುವುದಕ್ಕೆ ಇಂತಹ ಪದ್ಧತಿಯನ್ನು ಜಾರಿಗೆ ಕೊಡಬೇಕು ಎಂದು ಎಚ್ಚರಿಸಲಾಗಿತ್ತು. ಆದರೆ ಕಾಲಾವಕಾಶ ಇಲ್ಲದೇ ಇದ್ದುದರಿಂದ ಅದನ್ನು ಜಾರಿಗೆ ಕೊಡಲಾಗಲಿಲ್ಲ. ಮುಂದಿನ ವರ್ಷದಲ್ಲಿ ವಿದ್ಯಾರ್ಥಿಗಳ ಅರ್ಹತೆಯನ್ನು ಮತ್ತು ಪ್ರವೃತ್ತಿಯನ್ನು ಪತ್ತೆ ಮಾಡುವುದಕ್ಕೆ ಒಂದು ಪರೀಕ್ಷೆಯನ್ನು ಉಂಟು ಮಾಡಿ ಆ ಪರೀಕ್ಷೆಯಲ್ಲಿ ಗೆದ್ದವರಿಗೆ ತಾಂತ್ರಿಕ ಕಾಲೇಜುಗಳಲ್ಲಿ ಸೀಟುಗಳನ್ನು ಕೊಡತಕ್ಕ ವ್ಯವಸ್ಥೆ ಮಾಡಬೇಕು ಎಂದು ಸರ್ಕಾರ ಆಲೋಚಿಸುತ್ತಾ ಇದೆ. ಮಾನ್ಯ ಸಭಾಪತಿಗಳೇ ಕಳೆದ 2 ದಶಕಗಳಲ್ಲಿ ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಆಗಿವೆ. ಜನರಲ್ಲಿ ಅಸಾಧಾರಣವಾದ ಜಾಗೃತಿ ಮೂಡಿದೆ. ಪ್ರತಿಯೊಬ್ಬರಿಗೂ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕು ಎನ್ನತಕ್ಕ ಆಕಾಂಕ್ಷೆ ಹುಟ್ಟಿದೆ. ಈ ಕಾರಣದಿಂದ ಶಾಲಾಕಾಲೇಜುಗಳನ್ನು ಸ್ಥಾಪನೆ ಮಾಡಬೇಕು ಎನ್ನುವ ಒತ್ತಾಯ ಬಹಳವಾಗಿ ಹೆಚ್ಚಿತು. ಆ ಒತ್ತಾಯಕ್ಕೆ ಮನ್ನಣೆ ಕೊಡುವುದಕ್ಕಾಗಿ ಅಗಾಧ ಪ್ರಮಾಣದಲ್ಲಿ ನಾವು ಶಾಲಾಕಾಲೇಜುಗಳನ್ನು ಎರಡು ದಶಕಗಳಲ್ಲಿ ಪ್ರಾರಂಭ ಮಾಡಿದ್ದೇವೆ. ಇದಕ್ಕೆ ಸಂಬಂಧಪಟ್ಟಂತೆ ಪೂರ್ಣ ಅಂಕಿಅಂಶಗಳು ಇಲ್ಲದೇ ಇದ್ದರೂ ಕೆಲವು ಅಂಕಿಅಂಶಗಳನ್ನು ಮಾನ್ಯ ಸಭೆಯ ಗಮನಕ್ಕೆ ತರಬಯಸುತ್ತೇನೆ. 1956ನೇ

ಇಸವಿಯಲ್ಲಿ ನಮ್ಮ ದೇಶದಲ್ಲಿ ಇದ್ದಂಥ ಮಾಧ್ಯಮಿಕ ಶಾಲೆಗಳು 1,558 ಇದ್ದುದು 1966ನೇ ಇಸವಿಯಲ್ಲಿ 10,124 ಆಗಿದೆ. ಈ ರೀತಿ 10 ವರ್ಷದಲ್ಲಿ, 1,558 ಇದ್ದುದು 10,121 ಆಗಿದೆ. ಹೈಸ್ಕೂಲುಗಳನ್ನು ತೆಗೆದುಕೊಂಡರೆ 1956ರಲ್ಲಿ ಇದ್ದಂಥ ಹೈಸ್ಕೂಲ್ ಶಾಲೆಗಳ ಸಂಖ್ಯೆ 486 ಇದ್ದುದು 1966ರಲ್ಲಿ 1,670 ಆಗಿದೆ.

**ಶ್ರೀ ಟಿ.ಆರ್. ಶಾಮಣ್ಣ (ಬೆಂಗಳೂರು ಕೋಟೆ)-** 1956ನೇ ಇಸವಿಯ ಅಂಕಿಅಂಶಗಳು ಹಳೇ ಮೈಸೂರಿಗೆ ಸಂಬಂಧ ಪಟ್ಟವುಗಳೇ ಅಥವಾ ಹೊಸ ಮೈಸೂರಿಗೆ ಸಂಬಂಧಪಟ್ಟವುಗಳೇ?

**ಶ್ರೀ ಕೆ.ವಿ. ಶಂಕರಗೌಡ-** ಎರಡೂ ಸೇರಿದೆ. 10 ವರ್ಷದಲ್ಲಿ ಮಾಧ್ಯಮಿಕ ಶಾಲೆಗಳ ಸಂಖ್ಯೆಗಳನ್ನು ತೆಗೆದುಕೊಂಡರೆ ಒಂದಕ್ಕೆ 10 ರಷ್ಟು ಹೆಚ್ಚಾಗಿದೆ. ಹೈಸ್ಕೂಲ್‌ಗಳ ಸಂಖ್ಯೆ ತೆಗೆದುಕೊಂಡರೆ ಒಂದಕ್ಕೆ 4ರಷ್ಟು ಹೆಚ್ಚಾಗಿದೆ. ಇದು ಮಹತ್ತರವಾದ ಸಾಧನೆ. ಇದನ್ನು ಅಲ್ಲಗಳೆಯಲಾರರು ಎಂದು ನಂಬಿಕೊಂಡಿದ್ದೇನೆ. ಈ ದೊಡ್ಡ ಸಾಧನೆಗಾಗಿ ಶಹಬಾಸ್‌ಗಿರಿ ಕೊಡಬೇಕು.

ಇನ್ನು ಶಿಕ್ಷಣದ ವಿಚಾರವಾಗಿ ಕೆಲವು ಅಂಶಗಳನ್ನು ಮುಚ್ಚು ಮರೆ ಇಲ್ಲದೆ ಒಪ್ಪಿಕೊಳ್ಳಬೇಕಾಗಿದೆ. ಮುಂದೆ ಬರುತ್ತದೆ. ಒಪ್ಪಿಕೊಳ್ಳುತ್ತೇನೆ. ಹೀಗೆ ಜನರ ಬೇಡಿಕೆಗಳನ್ನು ಮಾನ್ಯ ಮಾಡುವ ಉತ್ಸಾಹದಲ್ಲಿ ಗುಣವನ್ನು ಕಾಪಾಡಿಕೊಂಡು ಬರುವುದರಲ್ಲಿ ವಿಫಲರಾಗಿದ್ದೇವೆ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕು. ಕ್ವಾಂಟಿಟಿ ಆಫ್ ಎಕ್ಸ್‌ಪ್ಯಾನ್‌ಷನ್ ಮಾಡಿದ್ದೇವೆ, ಕ್ವಾಲಿಟಿಯನ್ನು ಉಳಿಸಿಕೊಂಡು ಬರುವುದರಲ್ಲಿ ನಾವು ವಿಫಲರಾಗಿದ್ದೇವೆ. ಮಾನ್ಯ ಸಭಾಪತಿಗಳೇ, ದೇಶದಲ್ಲಿ ಪ್ರಾರಂಭವಾಗಿರತಕ್ಕ ಎಲ್ಲಾ ಪಾಠಶಾಲೆಗಳನ್ನು ಒದಗಿಸುವುದಕ್ಕೆ ಲ್ಯಾಬರೇಟರಿ, ಲೈಬ್ರರಿ ಮಾಡಿಸುವುದಕ್ಕೆ ಕೋಟ್ಯಾಂತರ ರೂಪಾಯಿ ಬೇಕಾಗುತ್ತದೆ. ನಮ್ಮಲ್ಲಿ ದುಡ್ಡೇ ಇಲ್ಲ. ದುಡ್ಡೇ ಇದಕ್ಕೆ ಮುಖ್ಯವಾದ ಅಡ್ಡಿ ದುಡ್ಡಿನ ಅಭಾವದಿಂದ ಅಲ್ಲಲ್ಲಿ ಶಾಲಾಕಟ್ಟಡಗಳನ್ನು ಕಟ್ಟಿಸುವುದಕ್ಕೆ ಆಗಲಿಲ್ಲ. ತರಬೇತಾದಂಥ ಶಿಕ್ಷಕರನ್ನು ನೇಮಿಸುವುದಕ್ಕೆ ಅವಕಾಶ ಆಗಲಿಲ್ಲ. ಲ್ಯಾಬ್ರರೇಟರಿ ಸ್ಥಾಪನೆ ಮಾಡುವುದಕ್ಕೆ ಅವಕಾಶ ಆಗಲಿಲ್ಲ ಲೈಬ್ರರಿ ಸ್ಥಾಪನೆ ಮಾಡುವುದಕ್ಕೆ ಅವಕಾಶ ಆಗಲಿಲ್ಲ ಅದರಿಂದ ಗುಣ ಬಹಳಮಟ್ಟಿಗೆ ಕಡಿಮೆ ಆಗಿದೆ. ಇದಕ್ಕೆ ಕಾರಣ 20 ವರ್ಷದಲ್ಲಿ ನಡೆಸಿಕೊಂಡ ಬಂದ ನೀತಿ Something is better than nothing ಎನ್ನುವ ನೀತಿ. ದೇಶದ ಯಾವ ಚರಿತ್ರೆಯನ್ನು ತೆಗೆದುಕೊಂಡರೂ ಕೇವಲ 10-20 ವರ್ಷದಲ್ಲಿ ಇದನ್ನು ಪೂರ್ಣವಾಗಿ ಜಾರಿಗೆ ತಂದಿದ್ದೇವೆ ಎಂದು ಹೇಳುವ ಹಾಗೆ ಇಲ್ಲ. ಸ್ವಲ್ಪ ಕಾಲ ತೆಗೆದುಕೊಂಡಿದ್ದೇವೆ. ಏನೂ ಇಲ್ಲದೇ ಇರುವುದಕ್ಕಿಂತ ಸ್ವಲ್ಪ ಹೆಚ್ಚು ಮಾಡುವುದು ಲೇಸು ಎನ್ನುವ ದೃಷ್ಟಿಯನ್ನು ಇಟ್ಟುಕೊಂಡು ಶಾಲಾಕಾಲೇಜುಗಳನ್ನು ಪ್ರಾರಂಭ ಮಾಡಿದ್ದೇವೆ ಮುಂದೆ ಬರತಕ್ಕ ವರ್ಷದಲ್ಲಿ ವಿಸ್ತರಣೆ ತಡೆಗಟ್ಟಿ ಆಗಿರತಕ್ಕಂಥ ವಿಸ್ತರಣೆಯನ್ನು

ಬಲಪಡಿಸಿ, ಕ್ರೋಢೀಕರಿಸಿ ಗುಣವನ್ನು ಉತ್ತಮಪಡಿಸುವುದಕ್ಕೆ ಪ್ರಯತ್ನ ಪಡಬೇಕಾಗಿದೆ ಇದಕ್ಕೆ ಈ ಸಭೆಯ ಮಾನ್ಯ ಸದಸ್ಯರ ಸಹಕಾರವನ್ನು ಕೋರುತ್ತೇನೆ ಶಾಲೆಗಳನ್ನು ಪ್ರಾರಂಭ ಮಾಡುವುದಕ್ಕೆ. ಶಿಕ್ಷಣ ಸೌಲಭ್ಯಗಳನ್ನು ವಿಸ್ತರಿಸುವುದಕ್ಕೆ, ಒತ್ತಾಯ ತರಬಾರದು ಎಂದು.

ಮಾನ್ಯ ಸಭಾಪತಿಗಳೇ ಇನ್ನು ನರ್ಸರಿ ಸ್ಕೂಲ್ ವಿಷಯವಾಗಿ ಮಾನ್ಯ ಸಭೆಯ ಸದಸ್ಯರು ಪ್ರಸ್ತಾಪಿಸಿದ್ದಾರೆ. ಪ್ರೀ ಪ್ರೈಮರಿ ಎಜುಕೇಷನ್ ಏನು ಇದೆ ಅದರ ಜವಾಬ್ದಾರಿಯನ್ನು ಪೂರ್ಣವಹಿ ಸರ್ಕಾರ ಹೊರತಕ್ಕದ್ದು ಕಷ್ಟವಾಗಿದೆ. ಕಡ್ಡಾಯ ಪ್ರಾಥಮಿಕ ಶಿಕ್ಷಣದ ಜವಾಬ್ದಾರಿಯನ್ನು ನಾವು ಹೊತ್ತು ಕೊಂಡಿರುವುದರಿಂದ ಪ್ರೀ ಪ್ರೈಮರಿ ಶಿಕ್ಷಣಕ್ಕೆ ಜವಾಬ್ದಾರಿ ಖಾಸಗಿಯವರಿಗೆ ವಹಿಸಿದ್ದೇವೆ. ಆದರೆ ಅದನ್ನು ಪೂರ್ಣವಾಗಿ ಮರೆತಿಲ್ಲ. ಖಾಸಗಿ ಶಾಲೆಗಳಿಗೆ ಇರತಕ್ಕ ಹಣವನ್ನು ಕೊಡುತ್ತಾ ಇದ್ದೇವೆ ಅಲ್ಲಿ ಶಿಕ್ಷಕರನ್ನು ತರಪೇತು ಮಾಡುವುದಕ್ಕಾಗಿ ಟ್ರೈನಿಂಗ್ ಇನ್‌ಸ್ಟಿಟ್ಯೂಟ್‌ಗಳನ್ನು ಪ್ರಾರಂಭ ಮಾಡಿದ್ದೇವೆ. ಇನ್ನು ಕಡ್ಡಾಯ ಪ್ರಾಥಮಿಕ ಶಿಕ್ಷಣದ ವಿಚಾರವಾಗಿ ಮಾನ್ಯ ಸದಸ್ಯರು ಕೆಲವರು ಮಾತನಾಡಿದ್ದಾರೆ. ಕೆಲವರು ಕಡ್ಡಾಯ ಪ್ರಾಥಮಿಕ ಶಿಕ್ಷಣ ಬಹಳ ಮಟ್ಟಿಗೆ ಯಶಸ್ವಿ ಆಗಿಲ್ಲ ಅದು ವಿಫಲವಾಗಿದೆ ಎನ್ನತಕ್ಕ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ಒಪ್ಪತಕ್ಕ ಮಾತಲ್ಲ. ನಾನು ಹೆಮ್ಮೆಯಿಂದ ಹೇಳುತ್ತೇನೆ. ಕಡ್ಡಾಯ ಪ್ರಾಥಮಿಕ ಶಿಕ್ಷಣ ಬಹಳ ಮಟ್ಟಿಗೆ ಯಶಸ್ವಿಯಾಗಿದೆ. ಎಂದು. 6 ವರ್ಷದಿಂದ 10 ವರ್ಷದವರೆಗೆ ಇರತಕ್ಕ ಮಕ್ಕಳಲ್ಲಿ ಶೇಕಡ 91ರಷ್ಟು ಮಕ್ಕಳು ಈಗ ಪಾಠಶಾಲೆಗೆ ಬರುತ್ತಿದ್ದಾರೆ. ಪಾಠಶಾಲೆಗೆ ಬರತಕ್ಕ ಮಕ್ಕಳು ಬಿಟ್ಟುಹೋಗದಂತೆ ನೋಡುವುದಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದೇವೆ.

**Sri K.H. Patil (Hubli)-** Are 91 percent of the boys and girls attending the schools? It is a surprise to us.

**Sri K.V. Shankara Gowda-** 91 percent have enrolled. More than 60 percent are attending the schools.

ಮಕ್ಕಳು ಪ್ರಾಥಮಿಕ ಪಾಠಶಾಲೆಯನ್ನು ಬಿಟ್ಟು ಹೋಗದಂತೆ ಅನೇಕ ಆಕರ್ಷಕ ಕಾರ್ಯಕ್ರಮಗಳನ್ನು ಜಾರಿಗೆ ಕೊಟ್ಟಿದ್ದೇವೆ. ಬಡ ಹುಡುಗರಿಗೆ ಸ್ಲೇಟು, ಪುಸ್ತಕ ಸಮವಸ್ತ್ರಗಳು ಮತ್ತು ಹೆಣ್ಣು ಮಕ್ಕಳಿಗೆ ವಿದ್ಯಾರ್ಥಿವೇತನ ಹಾಜರಾತಿಗಾಗಿ ಕೊಡುವುದು, ಮಧ್ಯಾಹ್ನದ ಉಪಹಾರ ಮುಂತಾದುವನ್ನು ಕೊಡುತ್ತಿದ್ದೇವೆ. ಇದರಿಂದ ಬಹು ಜನಮಕ್ಕಳು ಪ್ಠಾಠಶಾಲೆಯನ್ನು ಬಿಡುತ್ತಿಲ್ಲ. ಸುಮಾರು 10 ಲಕ್ಷ ಪ್ರಾಥಮಿಕ ಶಾಲೆ ಮಕ್ಕಳಿಗೆ ವ್ಯಾಸಂಗ ಮಾಡುವವರಿಗೆ ಮಧ್ಯಾಹ್ನದ ವೇಳೆಯಲ್ಲಿ ಉಪಾಹಾರ ಕೊಡಲು ಏರ್ಪಾಡಾಗಿದೆ. ಪ್ರೀ ಪ್ರೈಮರಿ ಸ್ಟೇಜಿನಲ್ಲಿ 4 ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಉಪಹಾರ ಕೊಡಲು ಏರ್ಪಾಡುಮಾಡಿದೆ. ಇವೆಲ್ಲವನ್ನೂ ಗಮನಿಸಿ ನಾವು ತುಲನಾತ್ಮಕವಾಗಿ ಪರಿಶೀಲಿಸಿದರೆ ಕಡ್ಡಾಯ ಪ್ರಾಥಮಿಕ

ಶಿಕ್ಷಣ ಬಹಳ ಮಟ್ಟಿಗೆ ಯಶಸ್ವಿಯಾಗಿದೆ ಎಂದು ಹೇಳುತ್ತೇನೆ, ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ಕೊಡುವಾಗ ತರಬೇಕಾಗಿರುವವರನ್ನು ಪಾಠ ಹೇಳಲು ಸಾಕಷ್ಟು ಸಂಖ್ಯೆಯಲ್ಲಿ ಒದಗಿಸುತ್ತಿಲ್ಲ ಎಂದು ತಿಳಿಸಿದ್ದಾರೆ. ಇವರ ಅಭಾವವಿದ್ದರೂ ಕೂಡ ನಾವು ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಲೇಬೇಕು, ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯಲೇಬೇಕು. ಅದುದರಿಂದ ಪ್ರಾರಂಭಿಸಿದ್ದೇವೆ. ಏಕ ಕಾಲದಲ್ಲಿ ತರಬೇತಾದ ಉಪಾಧ್ಯಾಯರನ್ನು ಎಲ್ಲಾ ಶಾಲೆಗಳಿಗೂ ಹಾಕುವುದು ಕಷ್ಟ. ಈಗ ಇಲ್ಲಿ ನಮ್ಮಲ್ಲಿ ಸುಮಾರು 70-80 ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ತರಬೇತು ಕೊಡುವ ಸಂಸ್ಥೆಗಳಿದ್ದರೂ ಕೂಡಾ ಸಾಕಾದಷ್ಟು ತರಬೇತುದಾರರನ್ನು ಒದಗಿಸಲು ಸಾಧ್ಯವಿಲ್ಲ ಆದಷ್ಟು ಮಂದಿಯನ್ನು ಒದಗಿಸಲು ಸೂಕ್ತ ಕ್ರಮ ಕೈಗೊಂಡಿದ್ದೇವೆ. ಹೀಗೆ ಪ್ರಾಥಮಿಕ ಕಡ್ಡಾಯ ಶಿಕ್ಷಣ ಯಶಸ್ವಿಯಾಗಿ ನಡೆಯುತ್ತಿದೆ ಎಂದು ಹೇಳಲು ಸಂತೋಷವಾಗುತ್ತದೆ.

ಇನ್ನು ಪ್ರೌಢಶಾಲೆಗಳಲ್ಲಿ ಮತ್ತು ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಫೀಜಿನ ಹಾವಳಿ ಹೆಚ್ಚಾಗಿದೆ ಎಂದು ಕೆಲವರು ಹೇಳಿದ್ದಾರೆ. ಅದರ ಬಗ್ಗೆ ಒಂದು ವಿಷಯವನ್ನು ಮುಖ್ಯವಾಗಿ ಹೇಳುವುದಕ್ಕೆ ನಾನು ಇಷ್ಟಪಡುತ್ತೇನೆ. ಯಾವ ಯಾವ ಸಂಸ್ಥೆಗಳು ಸರಕಾರದಿಂದ ಆರ್ಥಿಕ ಸಹಾಯವನ್ನು ಪಡೆಯುತ್ತಿವೆಯೋ ಆ ಸಂಸ್ಥೆಗಳಲ್ಲಿ ಕ್ಯಾಪಿಟೇಷನ್ ಫೀಜಿಲ್ಲ. ಅಂಥ ಸಂಸ್ಥೆಗಳಲ್ಲಿ ಎಲ್ಲಾದರೂ ಆ ಪದ್ಧತಿಯಿದ್ದರೆ ಮಾನ್ಯ ಸದಸ್ಯರು ಅದನ್ನು ಸರಕಾರದ ಗಮನಕ್ಕೆ ತಂದರೆ ಉಗ್ರ ಕ್ರಮ ಅವರ ಮೇಲೆ ಕೈಕೊಳ್ಳುವುದಕ್ಕೆ ಪ್ರಯತ್ನವನ್ನು ಮಾಡುತ್ತೇವೆ. ಯಾವ ಸಂಸ್ಥೆಗೂ ಕ್ಯಾಪಿಟೇಷನ್ ಫೀಜನ್ನು ತೆಗೆದುಕೊಳ್ಳಲು ಅವಕಾಶ ಕೊಡಬರದು. ಈಗ ಪ್ರಾಥಮಿಕ ಶಿಕ್ಷಣ ಮಾತ್ರವಲ್ಲ, ಪ್ರೌಢಶಾಲೆ ಶಿಕ್ಷಣಕ್ಕೂ ಫೀಜಿಲ್ಲ, ಅದನ್ನು ಮುಫತ್ತಾಗಿ ಕೊಡಲಾಗುತ್ತದೆ. ಹೈಸ್ಕೂಲಿನಲ್ಲಿ ಉಚಿತ ಶಿಕ್ಷಣವಿದೆ. ಆದುದರಿಂದ ಹೈಸ್ಕೂಲುಗಳಲ್ಲಿ ಕ್ಯಾಪಿಟೇಷನ್ ಫೀಜನ್ನು ವಿಧಿಸಲು ಅವಕಾಶವಿಲ್ಲ. ಕೆಲವು ಕಡೆ ವಿಧಿಸಿರಬಹುದು. ಅದನ್ನು ಗಮನಕ್ಕೆ ತಂದರೆ ತಕ್ಕ ಕ್ರಮ ತೆಗೆದುಕೊಳ್ಳುತ್ತೇವೆ. ಇನ್ನು ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಫೀಜನ್ನು ವಿಧಿಸುವ ವಿಚಾರದಲ್ಲಿ ಗೊಂದಲವಾಗಿದೆ. ಇದರಲ್ಲಿ ತಾತ್ವಿಕವಾಗಿ ನೋಡಿದರೆ ಕ್ಯಾಪೀಜನ್ನು ವಿಧಿಸುವ ಸಂಸ್ಥೆ ಇರಲೇಬಾರದು ಎಂದು ಹೇಳುವ ಹಾಗಿಲ್ಲ ಅನೇಕ ಖಾಸಗಿಯವರು ಸ್ತುತ್ಯಕಾರ್ಯವನ್ನು ಮಾಡಿದ್ದಾರೆಂದು ಹೇಳಲಿಷ್ಟಪಡುತ್ತೇನೆ. ಸರಕಾರ ಎಲ್ಲ ತಾಂತ್ರಿಕ ಶಾಲೆಗಳನ್ನು ಕೂಡ ತನ್ನ ಸ್ವಂತ ಹಣದಿಂದ ತೆರೆಯಲು ಸಾಧ್ಯವಿಲ್ಲ. ಎಲ್ಲಿ ಸರಕಾರ ತೆರೆಯಲು ಸಾಧ್ಯವಿಲ್ಲ ಅಂಥ ಕಡೆ ಖಾಸಗಿಯವರು ಮುಂದೆ ಬಂದು ಪ್ರಾರಂಭಿಸಿದರೆ ಅದಕ್ಕೆ ಪ್ರೋತ್ಸಾಹ ಕೊಟ್ಟರೆ ತಪ್ಪೇನೂ ಇಲ್ಲ, ಆದರೆ ಇಷ್ಟೇ ಕ್ಯಾಪಿಟೇಷನ್ ಪೀಜನ್ನು ತೆಗೆದುಕೊಳ್ಳಬೇಕೆಂದು ಒಂದು ನಿಯಮವಿರಬೇಕು. ಇದನ್ನು ಯೋಚನೆ ಮಾಡಿ ಜಾರಿಗೆ ತರಲು ಕ್ರಮ ಕೈಕೊಂಡಿದ್ದೇವೆ. ಈ ಸಂಬಂಧದಲ್ಲಿ ವಿನಯವಾಗಿ ಒಂದು ಪ್ರಾರ್ಥನೆ ಮಾಡುತ್ತೇನೆ. ಬಹಳ ಉತ್ಪ್ರೇಕ್ಷೆ ಈ ಸಂದರ್ಭದಲ್ಲಿ ಮಾಡುವುದುಂಟು ಯಾರಾದರೂ ಈ ಸಂಬಂಧವಾಗಿ ಬಂದು ಏನಾದರೂ

ಹೇಳಿದರೆ ಅದು ಸತ್ಯ ಎಂದು ಭಾವಿಸಬಾರದು. ಕೆಲವು ಕಡೆ ಅಕ್ರಮವಿರಬಹುದು, ಅದನ್ನು ತಡೆಗಟ್ಟುವುದಕ್ಕೆ ಸರ್ಕಾರ ಸೂಕ್ತ ಕ್ರಮ ಕೈಕೊಳ್ಳುವುದು. ಇಂಜಿನಿಯರಿಂಗ್ ಕಾಲೇಜಿನ ಬಗ್ಗೆ ಹೇಳುವುದಾದರೆ ಒಂದು ಸಂತೋಷದ ವಿಷಯವೇನೆಂದರೆ, ಮೊನ್ನೆ ಖಾಸಗಿ ಕಾಲೇಜಿನ ಅಧಿಕಾರ ವರ್ಗದವರನ್ನು ಬರಮಾಡಿದ್ದೆ, ಅವರ ಜೊತೆ ಚರ್ಚೆ ಮಾಡಿದೆ ಅವರೆಲ್ಲರಿಗೂ ಕ್ಯಾಪಿಟೇಷನ್ ಫೀಜನ್ನು ತೆಗೆಯಬೇಕೆಂದು ಮನವಿ ಮಾಡಿದೆ, ಅವರೆಲ್ಲರಿಗೂ ಅನುದಾನವಿದ್ದರೆ, ಅವರೆಲ್ಲರೂ ಗ್ರಾಂಟ್-ಇನ್-ಕೊಡ್ ಕೆಳಗೆ ಬಂದು ಒಂದೆ ಪೂಲಿಗೆ ಸೇರಬೇಕೆಂದು ಹೇಳಿದೆ. ಬಹುಶಃ ಅವರು ಅದಕ್ಕೆ ಒಪ್ಪಬಹುದೆಂದು ನಾನು ಭಾವಿಸುತ್ತೇನೆ.

## 18-ಜುಲೈ-1967

ವಿದ್ಯಾರ್ಥಿಗಳ ಅಶಿಸ್ತಿನ ಬಗ್ಗೆ ಕೆಲವು ಮಾನ್ಯ ಸದಸ್ಯರು ಮಾತನಾಡಿದ್ದಾರೆ, ಇದು ಬಹಳ ಗಹನವಾದ ಮತ್ತು ಜಟಿಲವಾದ ಪ್ರಶ್ನೆ ವಿದ್ಯಾರ್ಥಿಗಳ ಅಶಿಸ್ತು ಬಹಳ ಕಳವಳ ಉಂಟುಮಾಡುವ ವಿಷಯ ಮಕ್ಕಳ ಗುಣ, ನಡತೆ ಬೆಳೆಯಬೇಕಾಗಿರುವಾಗ ಅದಕ್ಕೆ ಸರಿಯಾಗಿ ಗಮನಕೊಡದೆ ಒಟ್ಟು ಅದು ಶಿಥಿಲವಾದರೆ ಬಹಳ ಅಪಾಯಕಾರಿ. ಅದರ ಜವಾಬ್ದಾರಿಯನ್ನು ಎಲ್ಲರೂ ಹೊರಬೇಕು. ವಿದ್ಯಾರ್ಥಿಗಳ ಅಶಿಸ್ತಿಗೆ ನಾವೆಲ್ಲರೂ ಕೂಡ ಒಂದಲ್ಲ ಒಂದು ರೀತಿಯಲ್ಲಿ ಕಾರಣಕರ್ತರು. ಆದುದರಿಂದ ನಾನು ಈ ಸಭೆಯ ಮೂಲಕ ಪೋಷಕರು ಮತ್ತು ಜನ ನಾಯಕರಲ್ಲಿ ಪ್ರಾರ್ಥನೆ ಮಾಡುತ್ತೇನೆ. ಇಂದು ಈ ವಿಷಯವನ್ನು ನಾವು ದೀರ್ಘವಾಗಿ ಆಲೋಚನೆ ಮಾಡಬೇಕು ನಮ್ಮ ಆಶೋತ್ತರ ಏನೇ ಇರಲಿ ಅದನ್ನು ಈಡೇರಿಸಿಕೊಳ್ಳುವಾಗ ಯಾವ ಮಾರ್ಗವನ್ನಾದರೂ ಅನುಸರಿಸಬಹುದು ಎಂಬ ಭಾವನೆಯನ್ನು ಬಿಡಬೇಕು. ನಮ್ಮ ಗುರಿ ಹೇಗೆ ಶುದ್ಧವಾಗಿರಬೇಕೋ ಹಾಗೆಯೇ ನಾವು ಅನುಸರಿಸುವ ಮಾರ್ಗವೂ ಕೂಡ ಶುದ್ದವಾಗಿರಬೇಕು. ದೇಶದ ವಿದ್ಯಾರ್ಥಿಗಳಲ್ಲಿರುವ ಇಲ್ಲದ ಸಲ್ಲದ ಗೊಂದಲ ಮಾಡುವ ಭಾವನೆ, ಅಶಿಸ್ತು ಉಂಟುಮಾಡುವ ಭಾವನೆ ಅವೆಲ್ಲವೂ ಹೋಗಬೇಕೆಂದು ಪ್ರಾರ್ಥನೆ ಮಾಡುತ್ತೇನೆ. ವಿದ್ಯಾರ್ಥಿಗಳನ್ನು ಆಕರ್ಷಣೆ ಮಾಡುವ ಇತರ ಕೆಲವು ಕ್ರಮಗಳನ್ನು ಜಾರಿಗೆ ಕೊಡಬೇಕಾಗಿದೆ, ಇದರ ಬಗ್ಗೆ ಕೊಠಾರಿ ಕಮಿಷನ್‌ನವರು ಒಂದು ರೀತಿಯಲ್ಲಿ ಶಿಫಾರಸ್ಸು ಮಾಡಿದ್ದಾರೆ, ಅದನ್ನು ನೋಡಿ ಯಾವ ರೀತಿ ಜಾರಿಗೆ ತರಬೇಕೆಂಬುದನ್ನು ತೀರ್ಮಾನಿಸುತ್ತೇವೆ ಎಂದು ಆಶ್ವಾಸನೆ ಕೊಡುತ್ತೇನೆ.

ಪಠ್ಯ ಪುಸ್ತಕಗಳ ವಿಚಾರದಲ್ಲಿ ಕೆಲವರು ಕೆಲವು ವಿಚಾರಗಳನ್ನು ಹೇಳಿದ್ದಾರೆ, ಅದನ್ನು ಮುಚ್ಚು ಮರೆಯಿಲ್ಲದೆ ಒಪ್ಪುತ್ತೇನೆ. ಈಗ ಬರುವ ಪುಸ್ತಕಗಳು ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದಿಲ್ಲ, ದೇಶಪ್ರೇಮವನ್ನು ಪ್ರತಿಬಿಂಬಿಸುವುದಿಲ್ಲ, ಇದಕ್ಕೆ ಕೆಲವು ಕಾರಣಗಳಿವೆ. ನಾವು ಕೊಡುವ ಸಂಭಾವನೆ ಬಹಳ ಕಡಿಮೆ, ಪುಸ್ತಕ ಬೇರೆಯುವವರಿಗೆ ಸಾಕಷ್ಟು ಪ್ರತಿಫಲ ದೊರೆಯುವುದಿಲ್ಲ. ಆದುದರಿಂದ ಒಳ್ಳೆಯ ಮೇಧಾವಂತರು ಬರೆಯುವ ಪುಸ್ತಕಗಳು

ದೊರೆಯುತ್ತಿಲ್ಲ. ಶಕ್ತಿ ಇರುವವರು, ಪಂಡಿತರು ಪಠ್ಯಪುಸ್ತಕಗಳನ್ನು ಬರೆಯುವ ವ್ಯವಸ್ಥೆಯನ್ನು ಇನ್ನು ಮುಂದೆ ಮಾಡಬೇಕಾಗಿದೆ. ಬರುವ ವರ್ಷ ಸರಕಾರ ಇಂಥ ಕಾಯಕ್ರಮ ಕೈಕೊಳ್ಳುತ್ತದೆ ಮತ್ತು ಸಕಾಲದಲ್ಲಿ ಪುಸ್ತಕಗಳು ದೊರೆಯುತ್ತಿಲ್ಲ ಎಂಬ ದೂರು ಇದೆ, ಇದರಲ್ಲಿ ಸ್ವಲ್ಪ ಸತ್ಯಾಂಶವಿದೆ ಇದಕ್ಕೆ ಕಾರಣ ಪುಸ್ತಕಗಳನ್ನು ಮಾರುವ ಏಜೆಂಟರು. ಅವರು ಮೊದಲು ಬೇಕಾದ ಪುಸ್ತಕಗಳನ್ನು ಸಂಗ್ರಹ ಮಾಡದೆ ತೊಂದರೆಯಾಗುತ್ತಿದೆ. ಮೊದಲೆ ಹೆಚ್ಚು ಸಂಗ್ರಹ ಮಾಡಿದರೆ ಅದಕ್ಕೆ ಹಾಕಿರುವ ಹಣಕ್ಕೆ ಬಡ್ಡಿ ಕೊಡಬೇಕಾಗುತ್ತದೆ. ಎಂದು ಅವರು ಕೇವಲ ತರಗತಿ ಪ್ರಾರಂಭವಾಗುವುದಕ್ಕೆ 8-10 ದಿವಸಗಳ ಮುಂದೆ ಪಠ್ಯ ಪುಸ್ತಕಗಳ ಶೇಖರಣೆ ಮಾಡುತ್ತಾರೆ. ಹೀಗಾಗಿ ಪಠ್ಯ ಪುಸ್ತಕಗಳು ಸಕಾಲದಲ್ಲಿ ಒದಗುವುದಕ್ಕೆ ತೊಂದರೆಯಾಗಿದೆ. ನಾವು ಬಹಳ ಮೊದಲೆ ಪ್ರಿಂಟ್ ಮಾಡಲು ಕ್ರಮ ಕೈಕೊಳ್ಳೋಣವೆಂದರೆ ಪ್ರೆಸ್ಸಿನಲ್ಲಿ ಅಗಾಧ ಪ್ರಮಾಣದಲ್ಲಿ ಜಾಗ ಬೇಕಾಗುತ್ತದೆ, ಪುಸ್ತಕಗಳನ್ನು ಶೇಖರಣೆ ಮಾಡಲು ಸಾಕಷ್ಟು ಜಾಗವಿಲ್ಲ. ಆದುದರಿಂದ ಫೇಸ್ ಮಾಡಿ ಮುದ್ರಿಸಬೇಕು. ಮತ್ತು ಜಾಗ್ರತೆ ಮಾಡುವುದಕ್ಕೆ ವ್ಯವಸ್ಥೆ ಮಾಡಬೇಕು. ಇದಕ್ಕೆ ಮಾರಾಟಗಾರರಿಗೆ ಪ್ರೋತ್ಸಾಹ ಕೊಡಲು ಈಗ ಕೊಡುವ ಮಾರ್ಜಿನ್ ಇರುವುದನ್ನು ವ್ಯತ್ಯಾಸ ಮಾಡಬೇಕೆಂದು ಆಲೋಚನೆ ಮಾಡುತ್ತಿದ್ದೇವೆ. ಫೆಬ್ರವರಿ-ಮಾರ್ಚಿಯಲ್ಲಿ ಪುಸ್ತಕಗಳನ್ನುಕೊಂಡರೆ ಒಂದು ಕಮಿಷನ್, ಮೇ-ಜೂನ್‌ನಲ್ಲಿ ಕೊಂಡರೆ ಒಂದು ಕಮಿಷನ್, ಜುಲೈ-ಆಗಸ್ಟಿನಲ್ಲಿ ಕೊಂಡರೆ ಒಂದು ಕಮಿಷನ್ ಹೀಗೆ ಕೊಡಲು ಏರ್ಪಾಡು ಮಾಡಬೇಕೆಂದಿದ್ದೇವೆ. ಮಾರ್ಚಿ, ಏಪ್ರಿಲ್, ಮೇ ತಿಂಗಳುಗಳಲ್ಲಿ ಕೊಂಡಾಗ ಹೆಚ್ಚು ಕಮಿಷನ್ ಕೊಟ್ಟರೆ ಶೇಖರಣೆ ಮೊದಲೇ ಮಾಡಿ ಸಕಾಲದಲ್ಲಿ ಮಕ್ಕಳಿಗೆ ಪಠ್ಯ ಪುಸ್ತಕಗಳು ದೊರೆಯಲು ಅವಕಾಶವಾಗುತ್ತದೆ ಎಂದು ಭಾವಿಸಿ ಹಾಗೆ ಮಾಡಲು ವಿಚಾರ ಮಾಡುತ್ತಿದ್ದೇವೆ.

ಇನ್ನು ಮಾನ್ಯ ಸದಸ್ಯರಾದ ಶ್ರೀ ಕೆ.ಎಚ್. ಪಾಟೀಲರು ಬಹಳ ಉದ್ದೇಶಪೂರಿತವಾಗಿ ಭಾಷಣ ಮಾಡಿದ್ದಾರೆ. ಅವರ ಭಾವನೆಯನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಈ ಸಂದರ್ಭದಲ್ಲಿ ಒಂದು ಆಶ್ವಾಸನೆಯನ್ನು ಕೊಡುತ್ತಿದ್ದೇನೆ. ಸರ್ಕಾರದ ಜವಾಬ್ದಾರಿಯನ್ನು ಹೊಂದಿರತಕ್ಕ ನಾನಾಗಲೀ ನನ್ನ ಮಾನ್ಯ ಸಹೋದ್ಯೋಗಿಗಳಾಗಲೀ ಎಲ್ಲರೂ ಆತ್ಮಸಾಕ್ಷಿಯಾಗಿ ಕೆಲಸ ಮಾಡುತ್ತೇವೆಂದು ಈ ಸಮಯದಲ್ಲಿ ಹೇಳ ಬಯಸುತ್ತೇನೆ. ಆತ್ಮಸಾಕ್ಷಿ ಎಂಬುದು ಪ್ರತಿಯೊಬ್ಬರಿಗೂ ಸಂಬಂಧಿಸಿದ ವಿಷಯ. ಹೇಳುವವನಿಗೂ ಕೇಳುವವನಿಗೂ ಸಂಬಂಧಪಟ್ಟ ವಿಚಾರ. ಆತ್ಮಶೋಧನೆ ಪ್ರತಿಯೊಬ್ಬರೂ ಮಾಡಬೇಕು. ಇದರಲ್ಲಿ ಸರ್ಕಾರ ಪಕ್ಷಪಾತ ತೋರಿಸುತ್ತಿಲ್ಲ. ಗುಂಪಿನ ದೃಷ್ಟಿಯಿಂದ ಕೆಲಸ ಮಾಡುತ್ತಿಲ್ಲ.

ಶ್ರೀ ಎಸ್. **ಗೋಪಾಲಗೌಡ** (ತೀರ್ಥಹಳ್ಳಿ)- ಈ ಆತ್ಮಶೋಧನೆಗೆ ಟೈಮ್ ಲಿಮಿಟ್ ಏನಾದರೂ ಇದೆಯೇ?

ಶ್ರೀ ಕೆ.ವಿ ಶಂಕರಗೌಡ– ಆತ್ಮಶ್ರೋಧನೆ ಹುಟ್ಟಿದಂದಿನಿಂದ ಸಾಯುವವರೆಗೂ ಇರಬೇಕು. ಸ್ವಪ್ನ ಜಾಗ್ರತೆ ಸುಸ್ಥಿತಿಯಲ್ಲಿಯೂ ಇರಬೇಕು.

ಶ್ರೀ ಬಿ.ಪಿ. ಗಂಗಾಧರ್– ಗೋಪಾಲಗೌಡರು ಕೇಳಿರುವುದು, ಸತ್ತು ಹೋದ ಮೇಲೆ ಮಾಡುವುದೋ ಎಂದು

ಶ್ರೀ ಕೆ.ವಿ. ಶಂಕರಗೌಡ– ಇನ್ನು ಮಾನ್ಯ ಶ್ರೀ ಶಾಮಣ್ಣನವರು ಕಮರ್ಷಿಯಲ್ ಶಿಕ್ಷಣ ಸಂಸ್ಥೆಗಳಿಗೆ ಅನುದಾನಗಳನ್ನು ಕೊಡುತ್ತಿಲ್ಲವೆಂದು ಪ್ರಸ್ತಾಪ ಮಾಡಿದ್ದಾರೆ. ಇದು ವಿಚಾರಣೆ ಮಾಡತಕ್ಕ ವಿಷಯ.

ಶ್ರೀ ಟಿ.ಆರ್.ಶಾಮಣ್ಣ– ನಾನು ಹೇಳಿದ ಮಾತು ಅಸತ್ಯವೇ, ಅಥವಾ ಸತ್ಯಕ್ಕೆ ದೂರವಾದುದೇ ಎಂದು ಹೇಳಿಲ್ಲ.

ಶ್ರೀ ಕೆ.ವಿ. ಶಂಕರಗೌಡ– ಆ ವಿಷಯವನ್ನು ನೀವು ಸರಿಯಾಗಿ ತಿಳಿದುಕೊಳ್ಳದೆ ಹೇಳುತ್ತೀರಿ ಎಂದು ನಾನು ಹೇಳಲಿಷ್ಟಪಡುತ್ತೇನೆ.

1956ನೇ ಇಸವಿ, ಅಂದರೆ ಸ್ಟೇಟ್ ರಿ-ಆರ್ಗನೈಸೇಷನ್‌ಗೆ ಮುಂಚೆ ಯಾವ ಯಾವ ಸಂಸ್ತೇಗಳಿಗೆ ಇದನ್ನು ಕೊಡುತ್ತಿದ್ದೇವೋ ಅಂಥ ಸಂಸ್ಥೆಗಳಿಗೆ ಮಾತ್ರ ಕೊಡುತ್ತಿದ್ದೇವೆ ಮತ್ತು ಹೊಸದಾಗಿ ಆದ ಸಂಸ್ಥೆಗಳಿಗೆ ಕೊಡುತ್ತಾ ಇಲ್ಲ.

ಶ್ರೀ ಟಿ.ಆರ್. ಶಾಮಣ್ಣ– ಯಾವ ಸಂಸ್ಥೆಗಳಿಗೂ ಖಂಡಿತವಾಗಿಯೂ ಕೊಡುತ್ತಿಲ್ಲವೆಂದು ನಾನು ಹೇಳುತ್ತೇನೆ.

ಶ್ರೀ ಕೆ.ವಿ. ಶಂಕರಗೌಡ– ಅದಕ್ಕೆ ಕಾರಣವೇನೆಂದರೆ, ಆರ್ಥಿಕ ಸಹಾಯವನ್ನು ಕೊಡುವುದಕ್ಕೆ ನಿಯಮ ಇನ್ನೂ ಆಗಿಲ್ಲ; ಗ್ರ್ಯಾಂಟ್ ಇನ್ ಎಯಿಡ್ ರೂಲ್ಸ್ ಪರಿಶೀಲನೆಯಲ್ಲಿದೆ. ಅದರಿಂದ ಕಾಮರ್ಸ್ ಕಾಲೇಜುಗಳಿಗೂ ಕೊಡುವಂತಹ ವಿಚಾರ ಇದೆ. ಅದನ್ನು ಆದಷ್ಟು ಜಾಗ್ರತೆ ಮಾಡುತ್ತೇವೆಂದು ಈ ಸಮಯದಲ್ಲಿ ಹೇಳುತ್ತೇನೆ.

ಇನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಒಂದು ಯೂನಿವರ್ಸಿಟಿ ಆಗಬೇಕೆಂದು ಮಾನ್ಯ ಸದಸ್ಯರನೇಕರು ಒತ್ತಾಯ ಮಾಡಿದ್ದಾರೆ. ಒಬ್ಬ ಮಾನ್ಯ ಸದಸ್ಯರು ವಿಶ್ವಕ್ಕೆಲ್ಲಾ ಒಂದೇ ವಿಶ್ವವಿದ್ಯಾನಿಲಯ ಇರಬೇಕು ಎಂದು ಹೇಳಿದರು. ವಿಶ್ವವಿದ್ಯಾನಿಲಯಗಳು ಹೆಚ್ಚು ಇದ್ದಷ್ಟೂ ಒಳ್ಳೆಯದು. ವಿಶ್ವವಿದ್ಯಾನಿಲಯಗಳಲ್ಲಿ ಬೋಧನ ಕ್ರಮ ಮಾತ್ರವಲ್ಲದೆ, ಸಂಶೋಧನೆ ಕೂಡ ಇದೆ. ಈಗ ಸಂಶೋಧನೆಗಳಿಗೆ ಹೆಚ್ಚು ಹೆಚ್ಚು ಅನುಕೂಲಗಳನ್ನು ಒದಗಿಸುವುದು ಅವಶ್ಯಕ. ಆದ್ದರಿಂದ ಹೆಚ್ಚು ಹೆಚ್ಚು ವಿಶ್ವವಿದ್ಯಾನಿಲಯಗಳನ್ನು ಪ್ರಾರಂಭ ಮಾಡುವುದರಲ್ಲಿ ಅಭ್ಯಂತರವಿಲ್ಲ. ಆದರೆ ಈಗಿನ ಹಣಕಾಸಿನ ಪರಿಸ್ಥಿತಿಯಲ್ಲಿ ಹೆಚ್ಚಿನ ವಿಶ್ವವಿದ್ಯಾನಿಲಯಗಳನ್ನು ಪ್ರಾರಂಭ ಮಾಡತಕ್ಕದ್ದು ಕಷ್ಟ. ದಕ್ಷಿಣ ಕನ್ನಡ ಜಿಲ್ಲೆಗೆ ಒಂದು ಆಗಬೇಕು. ಮಲೆನಾಡಿಗೆ ಒಂದು

ಆಗಬೇಕು. ಚಿತ್ರದುರ್ಗಕ್ಕೂ ಒಂದು ಆಗಬೇಕು. ಆದ್ದರಿಂದ ಈ ಕಾರ್ಯಕ್ರಮವನ್ನು ಕೈಗೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಇನ್ನು ಉಪಾಧ್ಯಾಯರು ರಾಜಕೀಯದಲ್ಲಿ ಪ್ರವೇಶ ಮಾಡುತ್ತಿದ್ದಾರೆಂದು ಒಂದು ದೂರು ಬಂತು. ಈ ರೀತಿ ಯಾರಾದರೂ ರಾಜಕೀಯದಲ್ಲಿ ಕೈ ಹಾಕಿದರೆ, ಅದು ಅಕ್ಷಮ್ಯ ಮತ್ತು ಅಪರಾಧ.

ಶ್ರೀ ಎಚ್. ಸಿದ್ದವೀರಪ್ಪ (ಹರಿಹರ)- ಹಾಕದೆ ಇರುವವರು ಯಾರು? ನಾನು ಹೇಳುವುದು ಆತ್ಮಸಂಶೋಧನೆ ನಡೆಸಿ ಬಿಟ್ಟರೆ. "What is wrong with them" is not the point but what is right with them ಎಂದು ಗೊತ್ತಾಗುತ್ತದೆ.

ಶ್ರೀ ಕೆ.ವಿ. ಶಂಕರಗೌಡ- ನನಗೆ ಬಂದಿರತಕ್ಕ ಸಮಾಚಾರದ ಪ್ರಕಾರ ನಿಜವಾಗಿ ಅವರನ್ನು ರಾಜಕೀಯಕ್ಕೆ ಹೆಚ್ಚಾಗಿ ಉಪಯೋಗಿಸಿಕೊಂಡವರು ವಿರೋಧ ಪಕ್ಷದವರು ಎಂದು ತಿಳಿದಿದ್ದೇನೆ (ನಗು).

ಶ್ರೀ ಎಂ.ಎಸ್. ಕೃಷ್ಣನ್- ಚುನಾವಣೆ ಕಾಲದಲ್ಲಿ ಕಾಂಗ್ರೆಸ್ಸಿನವರು ಉಪಯೋಗಿಸಿಕೊಳ್ಳಲಿಲ್ಲವೇ?

ಶ್ರೀ ಎಸ್.ಶಿವಪ್ಪ (ಶ್ರವಣಬೆಳಗೊಳ) ಒಂದು ವೇಳೆ ಅವರು ವಿರೋಧ ಪಕ್ಷಕ್ಕೆ ಸಹಾಯ ಮಾಡಿದ್ದಾರೆಂದು ಈ ಜ್ಞಾನಿಗಳು ಆ ಪಕ್ಷಕ್ಕೆ ಸಹಾಯ ಮಾಡಬೇಕಾಗಿದ್ದರೆ ವಿರೋಧ ಪಕ್ಷ ಎಷ್ಟು ಉತ್ತಮ ಮಟ್ಟದಲ್ಲಿದೆ ಎಂಬುದನ್ನು ಒಪ್ಪಿಕೊಳ್ಳುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ನಾನು ಹೇಳಿದ ವಿಷಯವನ್ನು ಮಾನ್ಯ ಸದಸ್ಯರು ಒಪ್ಪಿಕೊಂಡ ಹಾಗೆ ಆಯ್ತು.

**(Mr. Speaker in the chair)**

ಶ್ರೀ ಬಿ.ಪಿ. **ಗಂಗಾಧರ್**- ಇಂಥ ಕೆಟ್ಟ ಭಾವನೆ ಬರಬಾರದು. ಆಕಸ್ಮಾತ್ ಯಾರಾದರೂ ಹೇಳಿದರೂ ಕೂಡ ತಾವು ಅದನ್ನು ನಂಬಬಾರದು.

ಶ್ರೀ ಕೆ.ವಿ.ಶಂಕರಗೌಡ- ಆದ್ದರಿಂದ ಉಪಾಧ್ಯಾಯರುಗಳನ್ನು ರಾಜಕೀಯಕ್ಕೆ ಉಪಯೋಗಿಸಿಕೊಳ್ಳತಕ್ಕದ್ದನ್ನು ನಿಲ್ಲಿಸಬೇಕು. ಯಾರಾದರೂ ಪ್ರವೇಶ ಮಾಡಿದ್ದಾರೆ ಎಂದು ನನಗೆ ತಿಳಿದು ಬಂದರೆ, ಖಂಡಿತವಾಗಿಯೂ ನಾನು ಕ್ರಮ ತೆಗೆದುಕೊಳ್ಳುತ್ತೇನೆ ಆದರೆ ಅದಕ್ಕೆ ಸರಿಯಾದ ಮಾಹಿತಿಯನ್ನು ತಿಳಿಸಬೇಕಷ್ಟೇ.

ಇನ್ನು ಈ ವರ್ಗಾವಣೆ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಪ್ರಾಥಮಿಕ ವಿದ್ಯಾಭ್ಯಾಸದಲ್ಲಿ ತೊಡಗಿರತಕ್ಕ ಉಪಾಧ್ಯಾಯರುಗಳ ಸಂಖ್ಯೆ ಹೆಚ್ಚಾಗಿದೆ.

ಶ್ರೀ ಎಂ.ಎಸ್. ಕೃಷ್ಣನ್- ರಾಜಕೀಯಕ್ಕೆ ಪ್ರವೇಶ ಮಾಡಿದರೆ ಕ್ರಮ ತೆಗೆದುಕೊಳ್ಳುವುದು ಎಂದು ಹೇಳಿದಿರಿ. ಅಂದರೆ ಕಾಂಗ್ರೆಸ್‌ಗೆ ವಿರೋಧವಾಗಿ ಪ್ರವೇಶ ಮಾಡಿದರೆ ಮಾತ್ರ ತೆಗೆದುಕೊಳ್ಳುತ್ತೀರಾ? ಅಥವಾ ಕಾಂಗ್ರೆಸ್ ಪರವಾಗಿ ಮಾಡಿದರೂ ಕ್ರಮ ತೆಗೆದುಕೊಳ್ಳುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಉಪಾಧ್ಯಾಯರುಗಳ ಸಂಖ್ಯೆ ಬಹಳ ಹೆಚ್ಚಾಗಿದೆ. ಇವರನ್ನು ಬೇರೆ ಬೇರೆ ಕಡೆ ವರ್ಗ ಮಾಡತಕ್ಕದ್ದು ಬಹಳ ಕಷ್ಟ. ಎಲ್ಲಿಯವರೆಗೆ ದೂರುಗಳು ಬರುವುದಿಲ್ಲವೋ ಅಲ್ಲಿಯವರೆಗೆ ಅವರನ್ನು 5 ವರ್ಷವಾದರೂ, 8 ವರ್ಷವಾದರೂ ಒಂದು ಸ್ಥಳದಲ್ಲಿ ಇಡಬಹುದೆಂದು ಸರ್ಕಾರದ ನಿಯಮವಿದೆ. ಎಲ್ಲಿ ದೂರುಗಳು ಇವೆಯೋ ಅಲ್ಲಿ ಮಾತ್ರ ಅವರನ್ನು ವರ್ಗ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ. ಒಂದು ತಾಲ್ಲೂಕಿನಿಂದ ಇನ್ನೊಂದು ತಾಲ್ಲೂಕಿಗೆ ಒಂದು ಡಿಸ್ಟ್ರಿಕ್ಟಿನಿಂದ ಇನ್ನೊಂದು ಡಿಸ್ಟ್ರಿಕ್ಟಿಗೆ ವರ್ಗಾವಣೆ ಮಢುವುದು ಬಹಳ ಕಷ್ಟ. ಗ್ರಾಮಾಂತರ ಪ್ರದೇಶಗಳಲ್ಲಿ ಉಪಾಧ್ಯಾಯರುಗಳಿಗೆ ವಸತಿ ಸೌಕರ್ಯ ಇಲ್ಲ. ಆದ್ದರಿಂದ ದೂರ ದೂರ ಪ್ರದೇಶಗಳಲ್ಲಿ ವಸತಿ ಸೌಕರ್ಯಗಳನ್ನು ತಕ್ಷಣ ಏರ್ಪಾಡು ಮಾಡುವುದಕ್ಕೆ ಹಣವಿಲ್ಲ. ಆದ್ದರಿಂದ ಅವರಿಗೆ ಹೆಚ್ಚಿಗೆ ಕೆಲಸಕ್ಕೆ ತೊಂದರೆಯಾಗಬಾರದು ಮತ್ತು ಅವರು ಪಾಠಶಾಲೆಗಳನ್ನು ಮರೆಯಬಾರದು. ಈ ದೃಷ್ಟಿಯಿಂದ ಎಲ್ಲೆಲ್ಲಿ ಸೂಕ್ತವೆಂದು ಕಂಡು ಬಂದಿದೆಯೋ ಅಲ್ಲಿಗೆ ವರ್ಗ ಮಾಡುವುದಕ್ಕೆ ಏರ್ಪಾಡು ಮಾಡುತ್ತೇವೆ.

ಕೊನೆಯದಾಗಿ ಮಾನ್ಯ ಸದಸ್ಯರು ಎತ್ತಿರತಕ್ಕಂತಹ ಕೆಲವು ಮುಖ್ಯವಾದಂತಹ ವಿಚಾರಗಳಿಗೆ ಉತ್ತರ ಕೊಟ್ಟಿದ್ದೇನೆ. ಯಾವುದಾದರೂ ಬಿಟ್ಟು ಹೋಗಿದ್ದರೆ, ಅದನ್ನೆಲ್ಲಾ ಪಟ್ಟಿ ಮಾಡಿದ್ದೇನೆ. ಅದನ್ನು ಖಂಡಿತವಾಗಿ ಮಾಡುತ್ತೇನೆಂದು ಆಶ್ವಾಸನೆಯನ್ನು ಕೊಟ್ಟು ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಎಚ್. ಸಿದ್ದವೀರಪ್ಪ- ಸ್ವಾಮಿ, ತಾವು ಅಪ್ಪಣೆ ಕೊಡಿಸಿದರೆ ಒಂದೆರಡು ವಿಷಯಗಳ ಮೇಲೆ ಕ್ಲಾರಿಫಿಕೇಶನ್ಸ್ ಕೇಳಬೇಕೆಂದಿದ್ದೇನೆ.

**Mr. Speaker-** I will allow it till two minutes to two.

ಶ್ರೀ ಎ.ಆರ್. ಬದರಿ ನಾರಾಯಣ್ (ಶಿವಮೊಗ್ಗ)- ನನ್ನ ಪ್ರಶ್ನೆ ಪೆಂಡಿಗ್‌ನಲ್ಲಿದೆ, ಅದಕ್ಕೆ ಉತ್ತರ ಕೊಡಲಿಲ್ಲ.

ಶ್ರೀ ಕೆ.ವಿ.ಶಂಕರಗೌಡ- ಪ್ರತಿಯೊಂದು ಜಿಲ್ಲೆಗೂ ಆಗುವುದಿಲ್ಲ. ಅಭ್ಯಂತರವಿಲ್ಲ ಎಂದು ಹೇಳಿದ್ದೇನೆ.

ಶ್ರೀ ಎ.ಆರ್. ಬದರಿನಾರಾಯಣ್- ಮಂಗಳೂರು, ಹಾಸನ, ಚಿಕ್ಕಮಗಳೂರು, ಕೊಡಗು, ಮಲೆನಾಡು ಎಲ್ಲಾ ಕಡೆಗೂ ಮಾಡಬೇಕೆಂದು ಕೇಳಿದ್ದೇನೆ.

ಶ್ರೀ ಕೆ.ವಿ. ಶಂಕರಗೌಡ– ಈಗ ಹಣವಿಲ್ಲ. ಹಣ ಬಂದ ತಕ್ಷಣ ಎಲ್ಲಾ ಕಡೆಗೂ ಮಾಡುತ್ತೇವೆ. ಅದರಲ್ಲೂ ನಿಮ್ಮ ಮಲೆನಾಡಿಗೆ ಮೊದಲು ಮಾಡುತ್ತೇನೆ.

ಶ್ರೀ ಎಚ್.ಸಿದ್ದವೀರಪ್ಪ– ಮಾನ್ಯ ಮಂತ್ರಿಗಳು ಮಾಡಿದ ಭಾಷಣದಲ್ಲಿ ಒಂದು ಗಮನಾರ್ಹವಾದ ವಿಚಾರವನ್ನು ಇಲ್ಲಿ ಹೇಳಿದರು. ಅದು ಈ ಸಭೆಯಲ್ಲಿ ಎಲ್ಲರ ಹಾಗೂ ದೇಶದ ಗಮನವನ್ನು ಸೆಳೆಯತಕ್ಕ ವಿಷಯ. ಅದೇನೆಂದರೆ ಮ್ಯಾನ್ ಪವರ್ ರಿಕ್ವೈರ್‌ಮೆಂಟ್ ಬಗ್ಗೆ ಹೇಳಿದರು. ಇದು ಬಹಳ ಮುಖ್ಯವಾದುದು. ಇವೊತ್ತಿನ ದಿವಸ ದೇಶದಲ್ಲಿ ಯಾವ ರೀತಿಯಾಗಿ ಬದಲಾವಣೆಯಾಗುತ್ತಿದೆ ಎನ್ನುವುದನ್ನು ಎಲ್ಲರೂ ಗಮನಿಸಬೇಕು. ಈಗಾಗಲೇ ಬಿ.ಇ. ಪಾಸು ಮಾಡಿಕೊಂಡು ಎಲ್ಲ ಮೇಧಾವಿಗಳೂ ಉದರ ಪೋಷಣೆಗಾಗಿ ಅಲೆಯತಕ್ಕ ಕಾಲ ಈಗ ಬಂದಿದೆ. ಆದುದರಿಂದ ಇದು ಬಹಳ ದೊಡ್ಡ ಪ್ರಶ್ನೆ. ಮ್ಯಾನ್‌ಪವರ್ ಟೋಟಲಿಟೇರಿಯನ್ ಸ್ಟೇಟ್‌ನಲ್ಲಿ ಹೇಗಿರಬೇಕು ಎನ್ನುವುದನ್ನು ಸರಿಯಾಗಿ ಪರೀಕ್ಷೆ ಮಾಡಿ ಮೊದಲಿನಿಂದಲೂ ಇರುವ ಹತ್ತನೇ ವರ್ಗ ಹಾಗೂ ಹನ್ನೊಂದನೇ ವರ್ಗದಲ್ಲಿ ಯಾವ ರೀತಿಯಾದ ಡೈವರ್ಸಿಫೈಡ್ ಕೋರ್ಸಸ್‌ಗಳು ಇರಬೇಕು ಎನ್ನುವುದನ್ನೆಲ್ಲಾ ವಿಚಾರ ಮಾಡಿ ಕೊಠಾರಿ ಕಮಿಷನ್ನಿನವರು ಸ್ವಲ್ಪ ಅವರ ವರದಿಯಲ್ಲಿ ಹೇಳಿದ್ದಾರೆ ಮತ್ತು ಇದು ಬಹಳ ಸ್ವಾರಸ್ಯವಾಗಿದೆ. ಇದೇ ರೀತಿ ನಮ್ಮ ಸಂಸ್ಥಾನದಲ್ಲೂ ಮಾಡಲು ಒಂದು ಹೈ ಪವರ್ ಕಮಿಟಿ ಮಾಡುತ್ತೀರಾ? ಹಾಗೆ ಮಾಡಿದರೆ ಇದನ್ನೆಲ್ಲಾ ವಿಚಾರ ಮಾಡಿ ಹೇಗೆ ಮಾಡಬಹುದು ಮತ್ತು ಇದರ ರಿಕ್ವೈರ್‌ಮೆಂಟಾಗಲು ಯಾವ ರೀತಿ ಇರಬೇಕು ಎನ್ನುವ ವಿಚಾರದಲ್ಲಿ ಶೀಘ್ರವಾಗಿ ಯೋಚನೆ ಮಾಡಿ ಕಾರ್ಯಕ್ರಮ ಕೈಗೊಳ್ಳಲು ಇಂತಹ ಒಂದು ಕಮಿಟಿ ನೇಮಿಸುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ– ಇದಕ್ಕೆ ಯಾವ ಕಮಿಟಿಯ ಅವಶ್ಯಕತೆಯೂ ಇದ್ದ ಹಾಗೆ ಕಾಣುವುದಿಲ್ಲ. ಈಗಾಗಲೇ ನಮ್ಮ ರಾಜ್ಯದಲ್ಲೇ ರಿಸರ್ಚ್ ಬ್ಯೂರೋ ಹಾಗೂ ಇವಾಲ್ಯೂಯೇಷನ್ ಯೂನಿಟ್‌ಗಳು ಇವೆ ಮತ್ತು ಈ ದೆಸೆಯಲ್ಲಿ ಕೆಲಸ ಮಾಡುತ್ತಿವೆ ಮತ್ತು ಇವರು ಸಕಾಲದಲ್ಲಿ ಸರಕಾರಕ್ಕೆ ಸಾಕಾದಷ್ಟು ಶಿಫಾರಸ್ಸುಗಳನ್ನು ಮಾಡುತ್ತಿದ್ದಾರೆ. ಅದನ್ನೇ ಸರಕಾವು ಅನುಸರಿಸಿಕೊಂಡು ಅದನ್ನು ಜಾರಿಗೆ ಕೊಡಲು ಪ್ರಯತ್ನ ಮಾಡುತ್ತಿದ್ದಾರೆ.

ಶ್ರೀ ಎಲ್.ಶ್ರೀಕಂಠಯ್ಯ– ತ್ರಿಭಾಷಾ ಸೂತ್ರದ ಬಗ್ಗೆ ನಮಗೆ ಯಾವ ತೊಂದರೆಯೂ ಬಂದಿಲ್ಲ ಎನ್ನುವ ಅಭಿಪ್ರಾಯವನ್ನು ಮಂತ್ರಿಗಳು ಹೇಳಿದರು. ಇದರ ಬಗ್ಗೆ ನನ್ನ ಒಂದು ಅಭಿಪ್ರಾಯವನ್ನು ಇಲ್ಲಿ ಹೇಳಬೇಕಾಗಿದೆ. ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ಮೇಲೆ ಹಿಂದಿಯನ್ನು ಕಡ್ಡಾಯವಾಗಿ ಹೊರಿಸಿದರೆ ಅದನ್ನು ಓದುವುದು ಕಷ್ಟವಾಗುತ್ತದೆ. ಅಲ್ಲದೆ ಎಷ್ಟೋ ಹುಡುಗರು ಫೇಲ್ ಆಗುತ್ತಿದ್ದಾರೆ. ಇದನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ ಇಂಗ್ಲಿಷನ್ನು ತೆಗೆದರೂ ಏನೂ ಹಾನಿಯಾಗುವುದಿಲ್ಲ. ಹಿಂದಿಯನ್ನು

ತೆಗೆದು ಕನ್ನಡವನ್ನು ಮಾಧ್ಯಮವಾಗಿ ಇಟ್ಟುಕೊಳ್ಳಿ. ಹಿಂದಿ ಹಾಗೂ ಇಂಗ್ಲಿಷನ್ನು ಬಿಹಾರ್ ಸರಕಾರ ಮಾಡಿರುವ ಹಾಗೆ ಆಪ್ಷನಲ್ ಸಬ್‌ಜಕ್ಟ್‌ನಂತೆ ಮಾಡಿ. ಪ್ರೈಮರಿ ಹಾಗೂ ಸೆಕೆಂಡರಿ ಶಾಲೆಗಳಲ್ಲಿ ಹಿಂದಿಯನ್ನು ಒತ್ತಾಯವಾಗಿ ಹೇರಬೇಡಿ ಎಂದು ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ವಿ. ಶಂಕರಗೌಡ– ಇದು ಸತ್ಯಕ್ಕೆ ದೂರವಾದ ಮಾತು. ಪರೀಕ್ಷೆಗಳಲ್ಲಿ ಕಾಲೇಜುಗಳಲ್ಲಿ ಹಾಗೂ ಸ್ಕೂಲುಗಳಲ್ಲಿ ಹಿಂದಿಗೆ ಕುಳಿತುಕೊಳ್ಳಬೇಕಾದ್ದುದು ಇಲ್ಲ ಮತ್ತು ಕಡ್ಡಾಯವಾಗಿ ಯಾರೂ ಓದಬೇಕಾಗಿಲ್ಲ. ಹಾಗಿದ್ದರೂ ಸುಮಾರು 90 ಸಾವಿರ ವಿದ್ಯಾರ್ಥಿಗಳು ಹಿಂದಿ ಪರೀಕ್ಷೆಗಳಿಗೆ ಕುಳಿತುಕೊಂಡು ಪಾಸು ಮಾಡುತ್ತಿದ್ದಾರೆ. ಹಿಂದಿ ಒಂದು ರಾಷ್ಟ್ರ ಭಾಷೆಯಾಗಿದೆ ಮತ್ತು ನಮ್ಮ ದೇಶಕ್ಕೆ ಒಂದು ರಾಷ್ಟ್ರ ಭಾಷೆ ಇರಬೇಕು. ಈಗ ಇಂಗ್ಲಿಷ್‌ನಲ್ಲೂ ಕೂಡ ಅನೇಕ ವಿದ್ಯಾರ್ಥಿಗಳು ಓದಿದರೂ ಫೇಲ್ ಆಗುತ್ತಿದ್ದಾರೆ. ಆದರಲ್ಲೂ ಇಂಗ್ಲಿಷನ್ನೇ ಹೆಚ್ಚು ಓದಬೇಕೆಂದು ಬಯಸುತ್ತಾರೆ. ಆದರಂತೆ ಹಿಂದಿಯಲ್ಲೂ ಫೇಲ್ ಆಗುತ್ತಾರೆ.

ಶ್ರೀ ಎಸ್. ಅಗ್ನಿಹೋತ್ರಿ (ಧಾರವಾಡ ರೂರಲ್)– ಮಾನ್ಯ ಸಚಿವರು ಮುಂಬಯಿ ಕರ್ಣಾಟಕದಲ್ಲಿದ್ದ ಬೋರ್ಡು ಸ್ಕೂಲ್‌ಗಳಲ್ಲಿದ್ದ ಪ್ರಾಥಮಿಕ ಶಿಕ್ಷಕರು 63ನೇ ಇಸವಿಯಲ್ಲಿ ರಿಟೈರು ಆಗಿದ್ದರೂ ಅವರಿಗೆ ಪೆನ್‌ಷನ್ ಕೊಡುವುದಾಗಿ ಸರಕಾರ ಆಗಲೇ ಆಶ್ವಾಸನೆ ಕೊಟ್ಟಿತ್ತು. ಆದರೆ ಇದುವರೆಗೂ ಅವರಿಗೆ ಪೆನ್‌ಷನ್ ಕೊಡಿಸಲು ಮತ್ತು ಅವರು ಜೀವಂತ ಇರುವಾಗ ಪೆನ್‌ಷನ್ ಕೊಡಿಸಲು ಸಾಧ್ಯವೇ?

ಶ್ರೀ ಕೆ.ವಿ. ಶಂಕರಗೌಡ– ಮಾನ್ಯ ಸದಸ್ಯರು ಅಷ್ಟು ನಿರಾಶರಾಗಬೇಕಾಗಿಲ್ಲ, ವಿಷಯವೇನು ಎನ್ನುವುದನ್ನು ಪರಿಶೀಲನೆ ಮಾಡುತ್ತೇನೆ.

ಶ್ರೀ ಎಸ್. ಶಿವಪ್ಪ– ಮಾನ್ಯ ಸಚಿವರು ಮೈಸೂರು ವಿಶ್ವವಿದ್ಯಾನಿಲಯದವರು ಮಹಾರಾಜಾ ಹಾಗೂ ಯುವರಾಜಾ ಕಾಲೇಜುಗಳಲ್ಲಿರುವ ಉಪಾಧ್ಯಾಯರುಗಳಿಗೆ ಹಾಗೂ ಇನ್ನಿತರೆ ನೌಕರ ವರ್ಗದವರಿಗೆ ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನವರು ಒಪ್ಪಿರುವಂತೆ ಮೈಸೂರು ಯೂನಿವರ್ಸಿಟಿಗೆ ಶೇ. 80 ರಷ್ಟು ಹಣ ಕೊಡುತ್ತಾರೆ. ಆದರೂ ಇದರ ಬಗ್ಗೆ ಮಾನ್ಯ ಮಂತ್ರಿಗಳು ಇಲ್ಲಿ ಒಂದು ಹೇಳಿಕೆ ಕೊಟ್ಟಾಗ ಇವರ ಸ್ಕೀಂಗಳನ್ನು ಇಲ್ಲಿ ಮಾಡಲು ಸಾಧ್ಯವಿಲ್ಲ ಎನ್ನುವಂತೆ ಹೇಳಿದರು. ಇದರಿಂದೇನಾಗುತ್ತದೆ ಎಂದರೆ, ಈಗಾಗಲೇ ನಿಮ್ಮ ಉದ್ದೇಶದಂತೆ ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನವರು ಯೂನಿವರ್ಸಿಟಿ ಟೀಚರುಗಳಿಗೆ ಉತ್ತಮವಾದ ಸ್ಕೇಲ್ಸ್ ಕೊಡಬೇಕು. ಎನ್ನುವ ನಿಯಮವನ್ನು ಮೈಸೂರು ವಿಶ್ವವಿದ್ಯಾನಿಲಯದ ಬಗ್ಗೆ ಆಚರಣೆಗೆ ತರಲು ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನಂತೆ ಒಪ್ಪಿಕೊಂಡಿದ್ದಾರೆ. ಆದರೆ ಈಗ ಇದನ್ನು ಕಾರ್ಯಗತ ಮಾಡುವ ಕಾಲ ಬಂದಿರುವಾಗ ಮೈಸೂರು ಸರಕಾರ ಆಗುವುದಿಲ್ಲ ಎಂದರೆ ಇಲ್ಲದ ತೊಂದರೆಗಳಾಗುತ್ತವೆ ಮತ್ತು ಇಲ್ಲದ ಗೊಂದಲಗಳಿಗೆ ಕಾರಣವಾಗುತ್ತದೆ. ಮೈಸೂರು ವಿಶ್ವವಿದ್ಯಾನಿಲಯದವರೇ ತಮ್ಮಲ್ಲಿರುವ ಹಣದಲ್ಲೇ ಇದನ್ನು

ಮಾಡಬೇಕೆಂದೂ ಇದೆ. ಮಹಾರಾಜಾ ಕಾಲೇಜೂ ಹಾಗೂ ಯುವರಾಜಾ ಕಾಲೇಜೂ ಇವೆರಡೂ ಒಂದೇ ಕ್ಯಾಂಪಸ್‌ನಲ್ಲಿವೆ. ಇಲ್ಲಿ ಮಾನಸಗಂಗೋತ್ರಿಯಲ್ಲಿ ಪೋಸ್ಟ್ ಗ್ರಾಜುಯೇಟು ಕೋರ್ಸುಗಳನ್ನು ಹೇಳಿ ಕೊಡುತ್ತಿದ್ದಾರೆ. ಇವೆರಡೂ ಇಂಟಿಗ್ರೇಟೆಡ್ ಸ್ಕೀಂನಂತೆ ಇರುವುದರಿಂದ ಒಂದೇ ರೀತಿಯ ನಿಯಮಗಳನ್ನು ಇಲ್ಲಿ ಆಚರಣೆಗೆ ತರಬೇಕು. ಇದನ್ನು ಸರಕಾರ ಸ್ವಲ್ಪ ವಿಶಾಲದೃಷ್ಟಿಯಿಂದ ನೋಡಬೇಕೆಂದು ಹಾಗೂ ನ್ಯಾಯವಾಗಿ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಕೆ.ವಿ. ಶಂಕರಗೌಡ– ಈ ವಿಶ್ವವಿದ್ಯಾನಿಲಯದಲ್ಲಿ ಪಾಠ ಹೇಳತಕ್ಕವರು ಪೋಸ್ಟು ಗ್ರಾಜುಯೇಟ್ ಕೋರ್ಸುಗಳಿಗಾಗಿ ಶಿಕ್ಷಣ ಕೊಡುತ್ತಿದ್ದಾರೆ. ಆದರೆ ಮಹಾರಾಜಾಸ್ ಹಾಗೂ ಯುವರಾಜಾಸ್ ಕಾಲೇಜುಗಳಲ್ಲಿರುವ ಟೀಚರುಗಳು ಅಂಡರ್ ಗ್ರಾಜುಯೇಟುಗಳಿಗೆ ಪಾಠ ಹೇಳಿಕೊಡುತ್ತಿದ್ದಾರೆ. ಇವರೆಡೂ ಬೇರೆ ಬೇರೆಯಾಗಿವೆ. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ಮೊದಲು ಹೇಳುವುದನ್ನು ಮರೆತೆ. ದಯವಿಟ್ಟು ಕ್ಷಮಿಸಬೇಕೆಂದು ಕೋರುತ್ತೇನೆ. ಸಂತೋಷದಿಂದ ಒಂದು ವಿಚಾರವನ್ನು ಇಲ್ಲಿ ಹೇಳಬೇಕಗಿದೆ. ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನವರು ಏನು ಶಿಫಾರಸ್ಸುಗಳನ್ನು ಮಾಡಿದ್ದಾರೆ ಅವನ್ನೆಲ್ಲಾ ಜಾರಿಗೆ ತರಲು ನಾಲ್ಕನೇ ಯೋಜನೆಯಲ್ಲಿ ಸಂಬಳ ಸಾರಿಗೆಗಳು ಎಲ್ಲಾ ಕಾಲೇಜುಗಳಲ್ಲಿಯೂ ಇರುವ ಅಧ್ಯಾಪಕರುಗಳಿಗೆ ಕೊಡುವುದಕ್ಕೆ ನಮ್ಮ ಸರಕಾರ ತೀರ್ಮಾನ ತೆಗೆದುಕೊಂಡಿದೆ. ಇದಕ್ಕೆ ಫೈನಾನ್ಸ್ ಇಲಾಖೆಯೂ ಕೂಡ ಒಪ್ಪಿದೆ. ಇದನ್ನು ವಿಶ್ವ ವಿದ್ಯಾನಿಲಯಗಳಲ್ಲಿರುವ ಎಲ್ಲರಿಗೂ ಕೊಡಲು ಸರಕಾರ ಒಪ್ಪಿದೆ ಮತ್ತು ನಿರ್ಧಾರ ಮಾಡಿದೆ. ನಾಲ್ಕನೇ ಯೋಜನೆಯಲ್ಲಿ ಸಂಬಳ ಸಾರಿಗೆಗಳನ್ನು ರಿವೈಸು ಮಾಡುವಾಗ ಏಡೆಡ್ ಶಾಲೆಗಳಿಗೂ ಸರಕಾರದ ಶಾಲೆಗಳಲ್ಲಿರುವ ಎಲ್ಲಾ ಅಧ್ಯಾಪಕರುಗಳಿಗೂ ಕೊಡಬೇಕೆಂದು ಏರ್ಪಾಡು ಮಾಡಲಾಗಿದೆ.

ಶ್ರೀ ಸಿ.ಕೆ. ರಾಜಯ್ಯಶೆಟ್ಟಿ (ಚಿಕ್ಕನಾಯಕನಹಳ್ಳಿ)– ಮ್ಯಾನ್ ಪವರ್‌ನ್ನು ಜಾಸ್ತಿ ಮಾಡಬೇಕೆಂದು ಮಾನ್ಯ ಮಂತ್ರಿಗಳು ಇಲ್ಲಿ ಹೇಳಿದರು. ಕೆ.ಜಿ.ಎಫ್.ನಲ್ಲಿರುವ ಕಾಲೇಜಿನಲ್ಲಿ ಡಿಪ್ಲೊಮಾ ಇನ್ ಮೈನಿಂಗ್ ಇಂಜಿನಿಯರಿಂಗ್ ಎನ್ನುವ ಕೋರ್ಸ್ ಇದೆ. ಇದರಂತೆ ಡಿಗ್ರಿ ಕೋರ್ಸನ್ನೇಕೆ ತೆರೆಯಬಾರದು? ಎರಡನೆಯದು ಸೆಕೆಂಡರಿ ಕೋರ್ಸುಗಳಲ್ಲಿ ಒಂದು ವರ್ಷ ಇದ್ದುದನ್ನು ಎರಡು ವರ್ಷಗಳೆಂದು ಮಾಡಲು ಕಾರಣಗಳೇನು? ಮ್ಯಾನ್ ಪವರನ್ನು ಇನ್‌ಕ್ರಿಸ್ ಮಾಡಬೇಕೆಂದು ಹೇಳುವಾಗ ಎಲ್ಲಾ ಸ್ಕೂಲುಗಳಲ್ಲಿಯೂ ವ್ಯವಸಾಯಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡಬೇಕು ಎಂದಿರುವಾಗ ವ್ಯವಸಾಯದ ಕಾಲೇಜುಗಳನ್ನು ಇನ್ನೂ ಜಾಸ್ತಿ ಇರುವಂತೆ ಏಕೆ ಮಾಡಬಾರದು? ಇದರ ಬಗ್ಗೆ ಸರಕಾರದ ಅಭಿಪ್ರಾಯಗಳೇನು?

ಶ್ರೀ ಕೆ.ವಿ. ಶಂಕರಗೌಡ– ಮೈನಿಂಗ್‌ಗಾಗಿಯೇ ಪ್ರತ್ಯೇಕವಾದ ಒಂದು ಕಾಲೇಜು ಇರಬೇಕೆಂದು ಹೇಳುವುದನ್ನು ನಾನು ಒಪ್ಪುವುದಿಲ್ಲ. ಈಗಾಗಲೇ ದೇಶದ ವಿವಿಧ

ಭಾಗಗಳಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳಲ್ಲೇ ಈ ಭಾಗಗಳನ್ನೂ ತೆಗೆಯಬಹುದು. ಎಲೆಕ್ಟ್ರಾನಿಕ್ಸ್ ಹಾಗೂ ಮೈನಿಂಗ್ ಇವುಗಳ ಕೋರ್ಸುಗಳನ್ನೂ ಅನುಕೂಲಕ್ಕೆ ತಕ್ಕಂತೆ ತೆರೆಯಬಹುದು. ಈಗಾಗಲೇ ನಮ್ಮ ರಾಜ್ಯದಲ್ಲಿ 15 ಇಂಜಿನಿಯರಿಂಗ್ ಕಾಲೇಜುಗಳಿವೆ. ಈ ಕಾಲೇಜುಗಳಲ್ಲಿ ವಿವಿಧ ಭಾಗಗಳನ್ನು ಇನ್ನೂ ತೆರೆಯಲು ಅವಕಾಶಗಳಿವೆ ಮತ್ತು ಇದರಿಂದ ಇನ್ನೂ ಹೆಚ್ಚು ವಿದ್ಯಾಭ್ಯಾಸಕ್ಕೆ ಅವಕಾಶ ಮಾಡಿಕೊಡಬಹುದು.

ಶ್ರೀಮತಿ ಕೆ.ಎಸ್. ನಾಗರತ್ನಮ್ಮ (ಗುಂಡ್ಲುಪೇಟೆ)- ನಾಲ್ಕೈದು ಜನ ಹೆಣ್ಣು ಮಕ್ಕಳು ಈ ಸಭೆಯಲ್ಲಿ ಸದಸ್ಯರಾಗಿ ಬಂದಿದ್ದವರ ಮತ್ತು ಮಹಿಳೆಯರ ಸ್ಕೂಲುಗಳ ಬಗ್ಗೆ ಅವರ ಎಜುಕೇಷನ್ ಬಗ್ಗೆ ಸರಕಾರಕ್ಕೆ ಹೇಳಿದೆವು. ಆದರೆ ಮಾನ್ಯ ಮಂತ್ರಿಗಳು ಏಕೋ ಮಹಿಳಾ ವಿದ್ಯಾರ್ಥಿಗಳ ಶಿಕ್ಷಣದ ಬಗ್ಗೆ ಇಲ್ಲಿ ಏನನ್ನೂ ಹೇಳಲಿಲ್ಲ. ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾದ ಹಾಸ್ಟೆಲ್‌ಗಳಿರಬೇಕು ಎಂದು ಹೇಳಿದ್ದೆ. ಇದರ ಬಗ್ಗೆ ಉತ್ತರ ಬರಲಿಲ್ಲ ಮತ್ತು ಹೆಣ್ಣು ಮಕ್ಕಳ ಶಾಲೆಗಳಲ್ಲಿ ಟೀಚರುಗಳು ರಿಟೈರು ಆಗುವಾಗ ಅವರ ಸ್ಥಳದಲ್ಲೇ ಇರುವಂತೆ ಪೋಸ್ಟು ಮಾಡಬೇಕೆಂದು ಹೇಳಿದ್ದೆ. ಮಾನ್ಯ ಸಚಿವರು ಹೆಣ್ಣು ಮಕ್ಕಳ ಬಗ್ಗೆ ಇಲ್ಲಿ ಏನೇನೂ ಹೇಳಲಿಲ್ಲ. ಇವರ ಮೇಲೆ ಏಕೆ ಅವರ ಲಕ್ಷವಿಲ್ಲವೋ ಕಾಣೆ!

ಶ್ರೀ ಕೆ.ವಿ. ಶಂಕರಗೌಡ- ನಾನಾಗಲೇ ಹೇಳಿದೆ, ಮಾನ್ಯ ಸದಸ್ಯರು ಸರಿಯಾಗಿ ಕೇಳಲಿಲ್ಲ ಎಂದು ತೋರುತ್ತೆ. ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾಗಿ ಹಾಸ್ಟೆಲ್ ಮಾಡುವುದಕ್ಕೆ ಸಾಧ್ಯವಿಲ್ಲ. ತಮ್ಮಂತಹ ಉದಾರಿಗಳು ಯಾರಾದರೂ ಸಹಾಯ ಮಾಡಿದರೆ ಆಗ ಸಾಧ್ಯವಾದ ಕಡೆಗಳಲ್ಲಿ ಹಾಸ್ಟೆಲುಗಳನ್ನು ಕಟ್ಟಿಸಿಕೊಡಬಹುದು. ಎಲ್ಲ ಕಡೆಯಲ್ಲಿಯೂ ಮಹಿಳೆಯರಿಗಾಗಿಯೇ ಪ್ರತ್ಯೇಕವಾದ ಹಾಸ್ಟೆಲುಗಳನ್ನು ಮಾಡುವುದಕ್ಕೆ ಸಾಧ್ಯವಿಲ್ಲ.

**Mr. Speaker-** The Question is:

"That the respective sums not exceeding the amounts Specified in Demand Nos. 17 and 37, be granted to the Government to defray the charge which will come in course of Payment during the financial year for the period ending 31st day March 1968, in respect of Education, Stationery and Printing".

The Motion was adopted.

# ಶಿಕ್ಷಣ ಇಲಾಖೆ ಮೇಲಿನ ಬೇಡಿಕೆ ಕುರಿತ ಚರ್ಚೆಗೆ ಉತ್ತರ

## 6 ಏಪ್ರಿಲ್ 1968

ಶ್ರೀ ಕೆ.ವಿ. ಶಂಕರಗೌಡ (ವ್ಯವಸಾಯ ಮತ್ತು ಶಿಕ್ಷಣ ಮಂತ್ರಿಗಳು)- ಮಾನ್ಯ ಸಭಾಪತಿಗಳೆ, ಈ ಬೇಡಿಕೆಯ ಮೇಲೆ ಎರಡು ದಿನಗಳಿಂದ ಈ ಸಭೆಯು 37 ಜನ ಸದಸ್ಯರುಗಳು ಮಾತನಾಡಿದ್ದಾರೆ. ಅನೇಕ ಮಾನ್ಯ ಸದಸ್ಯರು ಉಪಯುಕ್ತವಾದ ಹಾಗೂ ರಚನಾತ್ಮಕವಾದ ಟೀಕೆಗಳನ್ನು ಮಾಡಿದ್ದಾರೆ ಮತ್ತೆ ಕೆಲವರು ಉಗ್ರವಾದ ಟೀಕೆಗಳನ್ನು ಮಾಡಿ ಹೆದರಿಸಿದ್ದಾರೆ. ಪ್ರತಿಯೊಂದು ವಸ್ತುವಿನಲ್ಲಿಯು ಕೇವಲ ದೋಷವನ್ನೇ ಹುಡುಕತಕ್ಕ ಜನ ಒಂದು ವಿಧ, ಪ್ರತಿಯೊಂದು ವಸ್ತುವಿನಲ್ಲಿಯೂ ಒಳ್ಳೆಯದನ್ನೇ ಹುಡುಕತಕ್ಕ ಜನ ಮತ್ತೊಂದು ವಿಧ. ಪ್ರತಿಯೊಂದು ವಸ್ತುವಿನಲ್ಲಿಯೂ ವಾಸ್ತವಾಗಿರತಕ್ಕ ಒಳ್ಳೆಯದು, ಕೆಟ್ಟದ್ದು ಎರಡನ್ನು ಗುರುತಿಸತಕ್ಕವರು ಮೂರನೆ ವಿಧ. ಈ ವರ್ಗೀಕರಣಕ್ಕೆ ಈ ಸಬೆಯ ಮಾನ್ಯ ಸದಸ್ಯರು ಹಾಗಲ್ಲ. ಅವರವರ ಪ್ರಕೃತಿಗೆ ಅನುಗುಣವಾಗಿ ಅವರು ಮಾತನಾಡುವಂತ ಧಾಟಿಯಲ್ಲಿ ಮತ್ತು ಅವರ ವಿನ್ಯಾಸದಲ್ಲಿ ವ್ಯತ್ಯಾಸವನ್ನು ತೋರಿಸುತ್ತಾರೆ.

ಶಿಕ್ಷಣ ಇಲಾಖೆಯಲ್ಲಿರತಕ್ಕ ಎಲ್ಲ ಶಿಕ್ಷಕರೂ ಕೂಡ ಅಧಕ್ಷರು, ಅಪ್ರಮಾಣಿಕರು, ಅನರ್ಹರು ಎಂದು ಕೆಲವರು ಟೀಕೆ ಮಾಡಿದ್ದಾರೆ. ಇದು ಸತ್ಯಕ್ಕೆ ದೂರವಾದ ಮಾತು. ಎಲ್ಲರೂ ಯೋಗ್ಯರೇ ಇದ್ದಾರೆ, ಎಲ್ಲರೂ ಧಕ್ಷರಾಗಿದ್ದಾರೆ, ಎಲ್ಲರೂ ಪ್ರಾಮಾಣಿಕರಾಗಿದ್ದಾರೆ ಎಂಬುದಾಗಿ ಹೇಳತಕ್ಕ ಸಹಾಸಕ್ಕೆ ನಾನು ಹೋಗದೆ ಇದ್ದರೂ ಅಂಥವರ ಸಂಖ್ಯೆ ಅತ್ಯಲ್ಪ. ಅವರುಗಳನ್ನು ಕೂಡ ಗುರುತಿಸಿ ಅವರ ಮೇಲೆ ಸಕಾಲದಲ್ಲಿ ಉಗ್ರವಾದ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಇಲಾಖೆ ಹಿಂಜರಿಯುವುದಿಲ್ಲ. ಈಗಾಗಲೇ ಅಂಥ ಕ್ರಮಗಳನ್ನು ತೆಗೆದುಕೊಂಡಿದೆ.

ಯಾವ ಶಾಲೆಗೂ ಕೂಡ ಕಟ್ಟಡವಿಲ್ಲ, ವೈಜ್ಞಾನಿಕ ಉಪಕರಣಗಳಿಲ್ಲ. ಪೀಠೋಪಕರಣಗಳಿಲ್ಲ ಎಂದು ಬಂದಿರತಕ್ಕ ಟೀಕೆ ಏನಿದೆ ಇದೂ ಕೂಡ ಸತ್ಯಕ್ಕೆ ದೂರವಾದ ಮಾತು. ಅನೇಕ ಶಾಲೆಗಳಿಗೆ ಬೇಕಾಗುವಂಥ ಉಪಯುಕ್ತವಾದ ಕಟ್ಟಡಗಳನ್ನು ಕಟ್ಟಿಸಲಾಗಿದೆ. ಸರ್ಕಾರದವರು ತಾಲ್ಲೂಕು ಬೋರ್ಡನವರು ಇಬ್ಬರೂ ಸೇರಿಕೊಂಡು ಅನೇಕ ಸ್ಥಳಗಳಲ್ಲಿ ಹೊಸ ಕಟ್ಟಡಗಳನ್ನು, ನೂರಾರು ಕಟ್ಟಡಗಳನ್ನು ಕಟ್ಟಿಸಿದ್ದಾರೆ ಇನ್ನೂ ಕೆಲವು ಕಡೆ ಕಟ್ಟಿಸಿಲ್ಲ ಇದಕ್ಕೆ ಕಾರಣವೇನು ಎನ್ನುವುದನ್ನು ಮಾನ್ಯ ಸದಸ್ಯರನೇಕರು ತಿಳಿದುಕೊಂಡಿದ್ದಾರೆ. ನಮ್ಮ ದೇಶದಲ್ಲಿ ವಿದ್ಯಾಭ್ಯಾಸದ ಸೌಲಭ್ಯಗಳ ವಿಸ್ತರಣೆ ಎಷ್ಟು ವೇಗದಿಂದ ನಡೆದಿದೆ ಎನ್ನುವುದನ್ನು ಮುಂದೆ ತಿಳಿಸುತ್ತೇನೆ. ಹೀಗೆ ವೇಗವಾಗಿ ನಡೆಯುವಾಗ ಸಾವಿರಾರು ಸಂಖ್ಯೆಯಲ್ಲಿ ಉಪಾಧ್ಯಾಯರುಗಳನ್ನು ನೇಮಕ ಮಾಡಲಾಗಿದೆ. ಅದುದರಿಂದ ಎಲ್ಲ ಕಡೆಗಳಲ್ಲಿಯೂ

ಏಕಕಾಲಕ್ಕೆ ಕಟ್ಟಡಗಳನ್ನು ಕಟ್ಟಿಸುವುದು ವೈಜ್ಞಾನಿಕ ಉಪಕರಣಗಳನ್ನು ಒದಗಿಸುವುದು, ಪೀಠೋಪಕರಣಗಳನ್ನು ಒದಗಿಸುವುದು ಕಷ್ಟವಾಗಬಹುದು. ಎಲ್ಲೋ ಕೆಲವು ಕಡೆ ಈ ರೀತಿ ಇರಬಹುದು. ಆದರೆ ಮುಕ್ಕಾಲುಭಾಗ ಶಾಲೆಗಳಲ್ಲಿ ಇಂಥ ಅಭಾವವಿಲ್ಲ. ಆದುದರಿಂದ ಎಲ್ಲ ಶಾಲೆಗಳಲ್ಲಿ ಇಂತ ದುಸ್ಥಿತಿ ಇದೆ ಎಂದು ಹೇಳತಕ್ಕುದು ಸತ್ಯಕ್ಕೆ ದೂರವಾದ ಮಾತು.

ಕಳೆದ ಹತ್ತು ವರ್ಷಗಳಲ್ಲಿ ನಮ್ಮ ದೇಶದಲ್ಲಿ ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಏನು ಪ್ರಗತಿ ನಡೆದಿದೆ ಎನ್ನುವುದರ ಸೂಕ್ಷ್ಮ ಪರಿಚಯವನ್ನು ಸಭೆಗೆ ಮಾಡಿಕೊಡುವುದಕ್ಕೆ ಇಚ್ಛಿಪಡುತ್ತೇನೆ. ಕಳೆದ ಹತ್ತು ವರ್ಷಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಆಗಿರತಕ್ಕ ವಿಸ್ತರಣೆಯ ಕಾರ್ಯ ಅಸಾಧಾರಣವಾದುದು ಹಾಗೂ ಅಗಾಧವಾದುದು. ವಿದ್ಯಾರ್ಥಿಗಳ ಸಂಖ್ಯೆ ದೃಷ್ಟಿಯಿಂದ ಶಾಲಾ ಕಾಲೇಜುಗಳ ದೃಷ್ಟಿಯಿಂದ ವಿಸ್ತರಣೆ ಬಹಳ ದೊಡ್ಡ ಪ್ರಮಾಣದಲ್ಲಿ ಆಗಿದೆ. 1956-57ರಲ್ಲಿದ್ದ ಮಾಧ್ಯಮಿಕ ಶಾಲೆಗಳ ಸಂಖ್ಯೆ 4,369, 1966ಕ್ಕೆ 10,124 ಆಗಿದ್ದು ಇಲ್ಲಿಯವರೆಗೆ ತೆಗೆದುಕೊಂಡರೆ 12 ಸಾವಿರದವರೆಗೂ ಆಗುತ್ತದೆ. ಇವುಗಳಲ್ಲಿ ವ್ಯಾಸಂಗ ಮಾಡತಕ್ಕ ವಿದ್ಯಾರ್ಥಿಗಳ ಸಂಖ್ಯೆ 1956-57ರಲ್ಲಿ 4.3 ಲಕ್ಷ ಇದ್ದುದು 1966ರಲ್ಲಿ 7.8 ಲಕ್ಷಕ್ಕೆ ಏರಿದೆ. ಹಾಗೆಯೇ ಪ್ರೌಢಶಾಲೆಗಳ ಸಂಖ್ಯೆ 1956ರಲ್ಲಿ 535 ಮಾತ್ರ ಇತ್ತು 1966ರಲ್ಲಿ 1670ಕ್ಕೆ ಏರಿದೆ. ಇಂದು 1800 ಇದೆ. ವಿದ್ಯಾರ್ಥಿಗಳ ಸಂಖ್ಯೆ 1956ರಲ್ಲಿ 1.8 ಲಕ್ಷ ಇದ್ದುದು ಈಗ 4.4 ಲಕ್ಷ ಆಗಿದೆ. ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ಖರ್ಚು 1956ರಲ್ಲಿ 6.7 ಕೋಟಿ ರೂಪಾಯಿ ಇದ್ದುದು ಈಗ 21.8 ಕೋಟಿ ರೂಪಾಯಿ ಆಗಿದೆ. 1956ರಲ್ಲಿ ಕೇವಲ 49 ಕಾಲೇಜುಗಳು ಇದ್ದವು. ಈಗ 128 ಕಾಲೇಜುಗಳಿವೆ, ವಿಶ್ವವಿದ್ಯಾನಿಲಯಗಳು 1956ರಲ್ಲಿ 2 ಇದ್ದುವು, ಈಗ 4 ಆಗಿವೆ. ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುವವರ ಸಂಖ್ಯೆ 31 ಸಾವಿರದಿಂದ 83ಸಾವಿರಕ್ಕೆ ಏರಿದೆ. ಹೀಗೆ ಈ ವಿಸ್ತರಣಾ ಕಾರ್ಯ ಬಹಳ ಅಗಾಧ ಪ್ರಮಾಣದಲ್ಲಿ ನಡೆದಿದೆ. ಆದರೆ ಆ ವಿಸ್ತರಣೆ ಯಾವ ರೀತಿ ನಡೆಯಿತೋ ಅದಕ್ಕೆ ಹೊಂದಿಕೊಂಡು ಬಾಕಿ ವ್ಯವಸ್ಥೆ ಮಾಡಲು ಸ್ವಲ್ಪ ಮಟ್ಟಿಗೆ ತಾಪತ್ರಯವಾಗಿದೆ. ಇದಕ್ಕೆ ಹಣದ ಕೊರತೆಯೇ ಕಾರಣ.

ಇಲ್ಲಿ ಕೆಲವರು ಸೌಮ್ಯವಾಗಿ ಮಾತನಾಡಿದ್ದಾರೆ, ಮತ್ತೆ ಕೆಲವರು ಕಠಿಣವಾಗಿ ಮಾತನಾಡಿದ್ದಾರೆ. ಆದರೆ ಎಲ್ಲರಿಗೂ ಇರುವ ಕಾತರತೆ ಒಂದೇ. ಅವರ ಬೇಡಿಕೆ ಒಂದೇ, ನಮ್ಮ ಮಕ್ಕಳಿಗೆ ಕೊಡುವ ಶಿಕ್ಷಣ ಕಡ್ಡಾಯವಾಗಿರಬೇಕು. ವಿಧಾಯಕವಾದದ್ದಾಗಿರಬೇಕು, ನಮ್ಮ ಸಂಸ್ಕೃತಿಗನುಗುಣವಾಗಿರಬೇಕು, ನಮ್ಮ ಆಸೆಯನ್ನು ಈಡೇರಿಸುವಂಥಾದ್ದಾಗಿರಬೇಕು, ನಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಅಭಿವೃದ್ಧಿಯಾಗುವಂತಿರಬೇಕು ಎಂಬುದೇ ಅವರ ಹೆಬ್ಬಯಕೆ. ಅದನ್ನು ಸಾಧಿಸುವುದಕ್ಕೆ ಶಿಕ್ಷಣವನ್ನು ಧ್ಯೇಯಾತ್ಮಕವಾದ್ದು ವಿಧಾಯಕವಾದದ್ದು

ಹಾಗೂ ಸತ್ವಶಾಲಿಯಾದುದು ಆಗಿ ಮಾಡುವುದಕ್ಕೆ ಪ್ರಗತಿದಾಯಕವಾದ ಯೋಜನೆಗಳನ್ನು ಜಾರಿಗೆ ಕೊಡಲಾಗಿದೆ. ಇದರಲ್ಲಿ ಕೆಲವನ್ನು ಮಾತ್ರ ಸಭೆಯ ಗಮನಕ್ಕೆ ತರುತ್ತೇನೆ. ಫ್ರೀ ಪ್ರೈಮರಿ ಶಿಕ್ಷಣದ ಜವಾಬ್ದಾರಿಯನ್ನು ಈಗ ಹೆಚ್ಚಾಗಿ ಸರಕಾರ ವಹಿಸಿಲ್ಲ. ಏಕೆಂದರೆ ನಾವು ಕಡ್ಡಾಯ ಪ್ರಾಥಮಿಕ ಶಿಕ್ಷಣದ ಜವಾಬ್ದಾರಿಯನ್ನು ಮಾತ್ರ ಹೊತ್ತಿದ್ದೇವೆ. ಫ್ರೀ ಪ್ರೈಮರಿ ಮಟ್ಟದ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಕ್ಕೆ ಅಡ್ಡಿ ಆತಂಕವಿದೆ. ಹಣದ ಮುಗ್ಗಟ್ಟಿದೆ. ಆದರೂ ಅದನ್ನೂ ಸಹ ಮರೆತಿಲ್ಲ. ಫ್ರೀ ಪ್ರೈಮರಿ ಹಂತದಲ್ಲಿ ಒಂದು ಏಕರೂಪವಾದ ಪಠ್ಯಕ್ರಮವನ್ನು ಗೊತ್ತು ಮಾಡಲಾಗಿದೆ. ಮತ್ತು ಅಲ್ಲಿ ಶಿಕ್ಷಣವನ್ನು ಕೊಡುವ ಶಿಕ್ಷಕರಿಗೆ ಸರಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ತರಬೇತಿ ಕೊಡುತ್ತೇವೆ. ಇದಲ್ಲದೆ ಅವರಿಗೆ ಸರಕಾರದವರು ನಿಗದಿ ಮಾಡುವ ಸ್ಕೇಲುಗಳನ್ನು ಕೊಡಲಾಗಿದೆ. ಇದರ ಜೊತೆಗೆ ಫ್ರೀ ಪ್ರೈಮರಿ ಹಂತದ 4 ಲಕ್ಷ ಮಕ್ಕಳಿಗೆ ಮಧ್ಯಾಹ್ನ ಉಪಹಾರ ಕೊಡುವ ವ್ಯವಸ್ಥೆ ಮಾಡಲಾಗಿದೆ. ಇದೊಂದು ಮಹತ್ತರವಾದ ಸಾಧನೆ ಅಂದುಕೊಂಡಿದ್ದೇವೆ.

ಇನ್ನು ಪ್ರೈಮರಿ ಮತ್ತು ಪ್ರಾಥಮಿಕ ಮಟ್ಟದಲ್ಲಿ ಆಗಿರುವ ಸಾಧನೆಯ ಬಗ್ಗೆ ಅಂಕಿಸಂಖ್ಯೆಗಳು ಮಾನ್ಯ ಸದಸ್ಯರಿಗೆ ಗೊತ್ತಿದೆ. 1961 ರಲ್ಲಿ ಕಡ್ಡಾಯ ಉಚಿತ ಶಿಕ್ಷಣವನ್ನು ಜನರಿಗೆ ಕೊಡಲು ಆಕ್ಟ್‌ನ್ನು ಜಾರಿಗೆ ತರಲಾಗಿದೆ. ಅದರ ಪ್ರಕಾರ ಎನ್‌ರೋಲ್‌ಮೆಂಟ್ ಆಗಿರುವ ಸಂಖ್ಯೆ ಸುಮಾರು 37 ಲಕ್ಷ, ಎನ್‌ರೋಲ್ ಆಗಿರುವುದು ಸುಮಾರು 31 ಲಕ್ಷ. ಸುಮಾರು 25 ಲಕ್ಷ ಮಕ್ಕಳಿಗೆ ಪ್ರಾಥಮಿಕ ಉಚಿತ ಶಿಕ್ಷಣವನ್ನು ಕೊಡಲಾಗಿದೆ. ಎನ್‌ರೋಲ್ ಆಗಿರುವವರ ಪೈಕಿ ಶೇಕಡ 80ರಷ್ಟು ಮಕ್ಕಳು ಪಾಠಶಾಲೆಗಳಿಗೆ ಹೋಗುತ್ತಿದ್ದಾರೆ. ಇದಕ್ಕೆ ಕಾನೂನು ಮಾಡಿದ್ದರೂ ಕಾನೂನನ್ನು ಯಾವ ವಿಧವಾದ ಮಕ್ಕಳಿಗೆ ಅನ್ವಯಿಸಿದೆಯೋ ಅವರಿಗೆ ಕೆಲವು ವಿಶೇಷ ಸೌಲಭ್ಯಗಳನ್ನು ಕಲ್ಪಿಸಿ ಮಕ್ಕಳು ಪಾಠಶಾಲೆಗೆ ಬರುವಂತೆ ಆಕರ್ಷಿಸಲಾಗಿದೆ. ವಿಶೇಷ ಸೌಲಭ್ಯಗಳಲ್ಲಿ ಕೆಲವನ್ನು ಮಾತ್ರ ಈ ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ. ಮೊದಲನೆಯದು ಮಧ್ಯಾಹ್ನ ಉಪಹಾರ. ಸುಮಾರು 9 ಲಕ್ಷ ಮಕ್ಕಳಿಗೆ ಈ ವ್ಯವಸ್ಥೆ ಮಾಡಲಾಗಿದೆ. ಈ ಸಂದರ್ಭದಲ್ಲಿ ಬಂದಿರುವ ಟೀಕೆಗೆ ಉತ್ತರ ಕೊಡುತ್ತೇನೆ. ಇದಕ್ಕಾಗಿ ಕೊಡುತ್ತಿರುವ ಆಹಾರವೇನಿದೆ ಅದನ್ನು ಕದ್ದು ಮಾರುತ್ತಿದ್ದಾರೆ, ದುರುಪಯೋಗಪಡಿಸುತ್ತಿದ್ದಾರೆ ಎಂದು ಕೆಲವರು ಆಕ್ಷೇಪಣೆ ಮಾಡಿದರು. ಹಾಲಿನಪುಡಿ ದುರುಪಯೋಗವಗುತ್ತಿದೆ ಎಂದು ಹೇಳಿದರು. ಈಗ ಹಾಲಿನಪುಡಿ, ರವೆ, ತುಪ್ಪ ಬರುತ್ತಿಲ್ಲ, ಅದಕ್ಕೆ ಪ್ರತ್ಯೇಕ ಗುಳಿಗೆ ಮಾಡಿದ್ದಾರೆ ಅದು ಮಾತ್ರ ಬರುತ್ತಿದೆ. ಹಿಂದೆ ಹಾಲಿನ ಪುಡಿ ವಗೈರೆ ಬರುತ್ತಿದ್ದಾಗ ಅದನ್ನು ಎಲ್ಲೋ ಯಾವುದೋ ಮೂಲೆಯಲ್ಲಿ ಯಾರೋ ಕದ್ದು ಒಂದುಕಡೆ ದುರುಪಯೋಗಮಾಡಿರಬಹುದು. ಅದನ್ನು ಪತ್ತೆ ಹಚ್ಚಿ ಕ್ರಮ ಕೈಗೊಂಡಿದ್ದೇನೆ. ಈ ಉಪಹಾರ ವ್ಯವಸ್ಥೆ ಬಹಳ ಚೆನ್ನಾಗಿ ನಡೆಯುತ್ತಿದೆ. ಅತ್ಯುತ್ತಮವಾಗಿ ನಡೆಯುತ್ತಿದೆ ಎಂದು

ಹೊರದೇಶಗಳವರು ಕೂಡ ತಮ್ಮ ಮೆಚ್ಚಿಗೆ ಸೂಚಿಸಿದ್ದಾರೆ. ಹಾಗಿರುವಾಗ ಯಾವುದೊ ಒಂದು ಮೂಲೆಯಲ್ಲಾದ ಸಣ್ಣ ದುರುಪಯೋಗದ ವಿಚಾರವನ್ನು ದೊಡ್ಡದು ಮಾಡಿ ಅದಕ್ಕೆ ಬಣ್ಣ ಹಚ್ಚಿ ಹೇಳುವುದು ಯೋಗ್ಯವಲ್ಲ ಹಾಗೆ ಮಾಡುವುದಿಂದ ನಮ್ಮ ಗೌರವವನ್ನು ನಾವೇ ಕಳೆದುಕೊಂಡ ಹಾಗಾಗುತ್ತದೆ. ಶೇಕಡ 25 ಮಕ್ಕಳಿಗೆ ಉಚಿತವಗಿ ಪುಸ್ತಕಗಳನ್ನು ಕೊಡಲಾಗುತ್ತಿದೆ. ಸಮವಸ್ತ್ರ ಕೊಡಲಾಗುತ್ತಿದೆ. ಹೀಗೆ ಇಂಥ ಸೌಲಭ್ಯಗಳನ್ನು ಕೊಟ್ಟು ಪ್ರಾಥಮಿಕ ಶಾಲೆಗೆ ಮಕ್ಕಳು ಬರುವಂತೆ ಏರ್ಪಾಡು ಮಾಡಲಾಗಿದೆ. ಇದಲ್ಲದೆ ಪ್ರಾಥಮಿಕ ಶಾಲೆಗಳಲ್ಲಿ ಪಾಠ ಹೇಳುವ ಉಪಾಧ್ಯಾಯರ ಅರ್ಹತೆಯನ್ನು ಹೆಚ್ಚಿಸಲಾಗಿದೆ. ಮೊದಲು ಪ್ರಾಥಮಿಕ ಶಾಲೆಗಳಲ್ಲಿ ಹಿಂದೆ ಲೋಯರ್ ಸೆಕೆಂಡರಿ ಎಂದೇನು ಹೇಳುತ್ತಿದ್ದರು. ಆ ಪರೀಕ್ಷೆಯನ್ನು ಪಾಸು ಮಾಡಿದವರನ್ನು ನೇಮಕ ಮಾಡುತ್ತಿದ್ದೆವು. ಅದನ್ನು ತೆಗೆದು ಈಗ ಅಲ್ಲಿಗೆ ಎಸ್‌ಎಸ್‌ಎಲ್‌ಸಿ ಆದವರನ್ನು ಹಾಕುತ್ತಿದ್ದೇವೆ. ಇದಲ್ಲದೆ ಮೊದಲು ಟ್ರೈನಿಂಗು ಕೇವಲ ಒಂದು ವರ್ಷ ಮಾತ್ರ ಇತ್ತು, ಅದನ್ನು ಈಗ ಎರಡು ವರ್ಷ ಮಾಡಲಾಗಿದೆ. ಹೀಗೆ ಮಾಡಿ ಪ್ರಾಥಮಿಕ ಶಿಕ್ಷಣ ಯಶಸ್ವಿಯಾಗುವುದಕ್ಕೆ ಎಲ್ಲಾ ಕಾರ್ಯಕ್ರಮಗಳನ್ನೂ ತೆಗೆದುಕೊಂಡಿದ್ದೇವೆ. ಇದರಿಂದ ಸುಮಾರು 100ಕ್ಕೆ 87 ಜನ ಮಕ್ಕಳು ಪಾಠಶಾಲೆಗೆ ಬರುತ್ತಿದ್ದಾರೆ. ಅವರು ಇದರ ಉಪಯೋಗ ಪಡೆಯುತ್ತಿದ್ದಾರೆ. ಇದು ಸಂತೋಷವನ್ನುಂಟು ಮಾಡುವ ವಿಷಯ. ಟೀಚರ್ಸ್ ಟ್ರೈನಿಂಗ್ ಸಂಸ್ಥೆಯ ಮೇಲ್ವಿಚಾರಣೆ ನೋಡುವುದಕ್ಕೆ ಮತ್ತು ಪ್ರೈಮರಿ ವಿದ್ಯಾಭ್ಯಾಸವನ್ನು ಉತ್ತಮಪಡಿಸುವುದಕ್ಕೆ ಸ್ಟೇಟ್ ಇನ್‌ಸಿಟ್ಯೂಟ್ ಆಫ್ ಎಜುಕೇಷನ್ ಎಂಬ ಸಂಸ್ಥೆಯನ್ನು ಪ್ರಾರಂಬಿಸಲಾಗಿದೆ. ಅಲ್ಲದೆ 1959ರಲ್ಲಿ ಎಲ್ಲಾ ಪ್ರೈಮರಿ ಮತ್ತು ಸೆಕೆಂಡರಿ ಶಾಲೆಗಳಿಗೆ ಏಕ ರೀತಿಯ ಪಾಠಕ್ರಮ-ಸಿಲಬಸ್ ಗೊತ್ತು ಮಾಡಿದೆ. ಇದರ ಜೊತೆಗೆ ಇಂಗ್ಲೀಷ್ ಪಾಠ ಹೇಳುವ ವಿಧಾನವನ್ನು ಸುಧಾರಿಸಲಾಗಿದೆ. ಇದಕ್ಕೆ ಸೂಕ್ತ ತರಬೇತಿ ಕೊಡುವ ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲೀಷ್ ಎಂಬ ಒಂದು ಸಂಸ್ಥೆಯನ್ನು ಪ್ರಾರಂಭಿಸಿದೆ. ಅದು ಉತ್ತಮವಾದ ಕೆಲಸ ಮಾಡುತ್ತಿದೆ.

ಇಷ್ಟು ವಿಷಯ ಹೇಳಿ ಇನ್ನು ಮುಂದೆ ಪ್ರೌಢಶಾಲೆ ವಿಚಾರ ಹೇಳುತ್ತೇನೆ. ಪ್ರೌಢಶಾಲೆಯಲ್ಲಿ ಮಾನ್ಯ ಸದಸ್ಯರಿಗೆ ಗೊತ್ತಿರುವ ಹಾಗೆ ಶಿಕ್ಷಣ ಉಚಿತವಾಗಿದೆ. 1965-66ರಿಂದ ಉಚಿತ ಶಿಕ್ಷಣ ಕೊಡುವುದಕ್ಕೆ ಅವಕಾಶ ಮಾಡಿದೆ. ಬಹುಶಃ ಈಗ ಇದನ್ನು ಮಾಡಿರುವ ರಾಜ್ಯಗಳಲ್ಲಿ ಮೈಸೂರು ಪ್ರಥಮ ಸ್ಥಾನ ಪಡೆದಿದೆ ಎಂದು ಹೆಮ್ಮೆಯಿಂದ ಹೇಳುತ್ತೇನೆ.

ಶ್ರೀ ಎಚ್.ಎನ್. ನಂಜೇಗೌಡ- ಬಿಲ್ಡಿಂಗ್ ಫಂಡ್ ಮಾತ್ರ ಕೊಡಬೇಕಾಗಿದೆ.

ಶ್ರೀ ಕೆ.ವಿ. ಶಂಕರಗೌಡ- ಅದನ್ನೂ ಕೊಡುತ್ತಿದ್ದೇವೆ, ಮೈಂಟೆನೆನ್ಸ್ ಗ್ರಾಂಟನ್ನೂ ಕೊಡುತ್ತಿದ್ದೇವೆ.

ಶ್ರೀ ವಾಟಾಳ್ ನಾಗರಾಜ್– ಆದರೆ ಅದನ್ನು ವಸೂಲು ಮಾಡುತ್ತಿದ್ದಾರೆ.

ಶ್ರೀ ಕೆ.ವಿ. ಶಂಕರಗೌಡ– ಮಾಡಿದರೆ ಕ್ರಮ ತೆಗೆದುಕೊಳ್ಳುತ್ತೇವೆ. ಎಲ್ಲಾ ಸೆಕೆಂಡರಿ ಶಾಲೆಗಳಿಗೂ 1963ರಲ್ಲಿ ಏಕ ರೂಪದ ಗ್ರಾಂಟ್ ಇನ್ ಏಡ್ ಕೋಡನ್ನು ಜಾರಿಗೆ ತಂದಿದೆ. ಅದನ್ನು 1967ರಲ್ಲಿ ಲಿಬರಲೈಜ್ ಮಾಡಿದೆ. ಪ್ರೌಢಶಿಕ್ಷಣದ ಹಂತದಲ್ಲಿ ಮಾಡಿರುವ ಕೆಲವು ಹೆಚ್ಚು ಸುಧಾರಣೆಗಳೆಂದರೆ ಖಾಸಗಿ ಶಾಲೆಗಳಲ್ಲಿ ಇರುವ ಉಪಾಧ್ಯಾಯರಿಗೆ ಚೆಕ್ ಮೂಲಕ ಸಂಬಳ ಕೊಡುವ ವ್ಯವಸ್ಥೆ ಮಾಡಿದೆ. ಇದರಿಂದ ಪ್ರೌಢಶಾಲೆಯ ಉಪಾಧ್ಯಾಯರ ಗುಂಪಿಗೆ ಅನುಕೂಲವಾಗಿದೆ, ಉಪಯೋಗವಾಗಿದೆ. ಇವರಿಗೆ ಹಿಂದೆ ಸಂಬಳ ಸರಿಯಾಗಿ ಸಿಕ್ಕುತ್ತಿರಲಿಲ್ಲ ಎಂಬ ದೂರಿತ್ತು. ಈಗ ಅದನ್ನು ನಿರ್ಮೂಲನ ಮಾಡಲಾಗಿದೆ. ಪ್ರೈಮರಿ ಶಾಲೆಗಳಿಗೂ ಈ ಸೌಲಭ್ಯವನ್ನು ವಿಸ್ತರಿಸುವುದಕ್ಕೆ ವಿಚಾರ ಮಾಡುತ್ತಿದ್ದೇವೆ. ಪ್ರಾರಂಭಿಕವಾಗಿ ಬೆಂಗಳೂರು ಜಿಲ್ಲೆಯಲ್ಲಿ ಜಾರಿಗೆ ತಂದು ನಿಧಾನವಾಗಿ ಇಡೀ ರಾಜ್ಯದಲ್ಲಿ ಜನರಿಗೆ ತರಲು ಯೋಚನೆ ಮಾಡುತ್ತಿದ್ದೇವೆ. ಇದರ ಜೊತೆಗೆ ಪ್ರೌಢ ಶಾಲಾ ಶಿಕ್ಷಕರಿಗೆ ತರಬೇತಿ ಕೊಡಲು ಜಮಖಂಡಿ ಮತ್ತು ಬಿಜಾಪುರದಲ್ಲಿ ಹೊಸದಾಗಿ ಎರಡು ಕಾಲೇಜುಗಳನ್ನು ಪ್ರಾರಂಭಿಸಲಾಗಿದೆ.

ಈಗ ಆಧುನಿಕ ಜಗತ್ತಿನ ವಿಜ್ಞಾನಕ್ಕೆ ಹೆಚ್ಚಿನ ಪ್ರಾತಿನಿಧ್ಯ ಇದೆ. ವಿಜ್ಞಾನದಲ್ಲಿ ಆಗ ಬಹುದಾದಂತ ಸಂಶೋಧನೆಗಳು ನಡೆದಿವೆ. ಯಾವ ದೇಶ ವೈಜ್ಞಾನಿಕವಾಗಿ ಮುಂದುವರಿಯುವುದಿಲ್ಲವೊ ಆ ದೇಶ ಪ್ರಗತಿಯನ್ನು ಸಾಧಿಸುವುದು ಕಷ್ಟ. ಶೀಘ್ರವಾಗಿ ಕೈಗಾರಿಕೀಕರಣವಾಗಬೇಕಾದರೆ ವಿಜ್ಞಾನ ಮುಂದುವರಿದಿರಬೇಕು. ಆದ್ದರಿಂದ ನಮ್ಮಲ್ಲಿ ವಿಜ್ಞಾನಕ್ಕೆ ಹೆಚ್ಚು ಗಮನಕೊಟ್ಟು ಅದರ ಸೌಲಭ್ಯವನ್ನು ಹೆಚ್ಚು ಮಾಡುವುದಕ್ಕೂ ಮತ್ತು ವಿಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಯೋಚನೆ ಮಾಡಿ ಸೂಕ್ತವಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುವುದಕ್ಕೂ ಸ್ಟೇಟ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಎಂಬ ಒಂದು ಸಂಸ್ಥೆಯನ್ನು ಪ್ರಾರಂಭ ಮಾಡಿದ್ದೇವೆ. ಮತ್ತು ಈ ಸಂಸ್ಥೆ ದೇಶದಲ್ಲಿ ಇರತಕ್ಕ ಎಲ್ಲಾ ಶಾಲೆಗಳಿಗೂ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ವೈಜ್ಞಾನಿಕ ಉಪಕರಣಗಳನ್ನು ಕೊಂಡುಕೊಳ್ಳುವುದಕ್ಕೆ ಏರ್ಪಾಟು ಮಾಡಲಾಗಿದೆ ಶ್ರೀಮಾನ್ ಸಿದ್ದವೀರಪ್ಪನವರು, ವಿಸ್ತರಣೆ ಆಗಿದೆ, ಆದರೆ ಕ್ವಾಲಿಟಿ ಹೇಗೆ ಇದೆ ಅಂತ ಪ್ರಶ್ನೆ ಕೇಳಿದರು, ಈ ಸಂದರ್ಭದಲ್ಲಿ ಅದನ್ನು ಹೇಳುವುದಕ್ಕೆ ಇಚ್ಛಿಪಡುತ್ತೇನೆ. ಸೈನ್ಸ್ ಟ್ಯಾಲೆಂಟ್ಸ್ ಅಂತ ಹೇಳಿ ಆಲ್ ಇಂಡಿಯಾ ಕಾಂಪಿಟೇಷನ್ ಇದೆ ಯಾರು ವಿಜ್ಞಾನ ವಿಷಯದಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಾರೆಯೋ ಅವರನ್ನು ಆರಿಸಿ ಅವರಿಗೆ ಕಾಲೇಜಿನಲ್ಲಿ ವಿದ್ಯಾರ್ಥಿ ವೇತನವನ್ನು ಕೊಟ್ಟು ಶಿಕ್ಷಣಕ್ಕೆ ಏರ್ಪಾಡುಮಾಡತಕ್ಕ ಒಂದು ವ್ಯವಸ್ಥೆ ಜಾರಿಯಲ್ಲಿದೆ. ಈ ಪರೀಕ್ಷೆಗೆ ಕುಳಿತುಕೊಳ್ಳತಕ್ಕ ವಿದ್ಯಾರ್ಥಿಗಳಲ್ಲಿ ಇಬ್ಬರು ಸೆಕೆಂಡ್ ಅಂಡ್ ಥರ್ಡ್ ರ್‍ಯಾಂಕ್ ಪಡೆದಿದ್ದಾರೆ ಎಂದು ಹೇಳುವುದಕ್ಕೆ ಈ ಸಂದರ್ಭದಲ್ಲಿ ಹೆಮ್ಮೆಯಾಗುತ್ತದೆ. ಆದ್ದರಿಂದ ನಮ್ಮ ಗುಣ ಕೂಡ ಹೆಚ್ಚು ಮಟ್ಟಕ್ಕೆ

ಏರಿದೆ ಎಂದು ಹೇಳುವುದಕ್ಕಾಗುವುದಿಲ್ಲ, ಸಾಕಷ್ಟು ಆಗಿದೆ. ಆದರೆ ನಿರೀಕ್ಷಣೆ ಮಾಡಿದಷ್ಟು ಗುಣ ಹೆಚ್ಚು ಮಾಡಲಿಕ್ಕೆ ಆಗಿಲ್ಲ ಕಾರಣವೇನೆಂದರೆ ಒಂದು ವಿಷಯವನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಹಿಂದೆ ನಾವೆಲ್ಲರೂ ಶ್ರೀಮಾನ್ ಸಿದ್ದವೀರಪ್ಪನವರೂ ಕೂಡ ಬಹುಶಃ ವ್ಯಾಸಂಗ ಮಾಡುತ್ತಾ ಇದ್ದಾಗ ಯಾರು ವಂಶಪಾರಂಪರಯವಾಗಿ ವಿದ್ಯಾವಂತರಾಗಿದ್ದರೋ ಅಂತಹ ಮನೆಗಳಿಂದ ಬರತಕ್ಕ ಹುಡಗರೇ ವಿದ್ಯಾಭ್ಯಾಸಕ್ಕೆ ಶಾಲಾ ಕಾಲೇಜುಗಳಿಗೆ ಹೋಗುತ್ತಾ ಇದ್ದರು ಅಂತಹ ಪರಿಸ್ಥಿತಿ ಇದ್ದಾಗ್ಯೂ ಕೂಡಾ ನಾವು ಪರೀಕ್ಷೆಯಲ್ಲಿ ಪಾಸ್ ಮಾಡುತ್ತಾ ಇದ್ದೆವು, ನನಗೆ ಗೊತ್ತಿರುವ ಹಾಗೆ ನಾನು ಇಂಟರ್‌ಮಿಡಿಯೆಟ್ ಪರೀಕ್ಷೆಗೆ ಕುಳಿತಾಗ ನೂರು ಜನ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತರೆ 16 ಜನ 17 ಜನ ಪಾಸ್ ಆಗುತ್ತಾ ಇದ್ದೆವು ಅದರ ಮೇಲೆ ಆಗುತ್ತಾ ಇರಲಿಲ್ಲ ಇವತ್ತು ಮಾಸ್ ಎಜುಕೇಷನ್- ಸಾಮೂಹಿಕ ಶಿಕ್ಷಣ ಇದೆ. ಇದರಲ್ಲಿ ಯಾವ ಹಿನ್ನಲೆಯೂ ಇಲ್ಲದೆ ಇರುವ ಹುಡಗರು ಪಾಠಶಾಲೆಗೆ ಬರುತ್ತಾರೆ ಅವರಿಗೆ ಹೊಸ ವಿಷಯಗಳನ್ನು ತಿಳಿದುಕೊಳ್ಳುವುದು ಕಷ್ಟ. ಗ್ರಹಿಸುವುದು ಕಷ್ಟ, ಅದರಿಂದ ಪರೀಕ್ಷೆಗಳಲ್ಲಿ ಹೆಚ್ಚಿನ ಫೇಲ್ಯೂರ್ಸ್ ನೋಡಬೇಕಾಗಿದೆ. ಅಂದಮಾತ್ರಕ್ಕೆ ಗುಣ ಕಡಿಮೆಯಾಗಿದೆ ಎಂದು ವ್ಯಥೆಪಟ್ಟುಕೊಳ್ಳಬೇಕಾಗಿಲ್ಲ. ನಮ್ಮ ಇಂಜಿನಿಯರ್‌ಗಳು ಹೊರ ದೇಶಗಳಲ್ಲಿ ಹೆಸರುಗಳಿಸಿದ್ದಾರೆ. ನಮ್ಮ ವೈದ್ಯರು ಈ ದೇಶದಲ್ಲೇ ಅಲ್ಲ ಇಂಗ್ಲೆಂಡು ಅಮೇರಿಕಾ ದೇಶಗಳಿಗೆ ಹೋಗಿ ತಮ್ಮ ಹೆಸರನ್ನು ಸ್ಥಾಪನೆ ಮಾಡಿದ್ದಾರೆ. ಆದ್ದರಿಂದ ಗುಣ ಕಡಿಮೆಯಗಿಲ್ಲ. ಅದನ್ನು ಇನ್ನೂ ಹೆಚ್ಚು ಮಾಡಬೇಕಾದುದು ಅತ್ಯವಶ್ಯಕ, ಇದರಲ್ಲಿ ಎಲ್ಲರಿಗೂ ಒಂದು ಕಾತುರತೆ ಇದೆ ಎಂಬುದನ್ನು ಮನಗಂಡಿದ್ದೇವೆ. ಇನ್ನು ಮುಂದೆ ವಿಸ್ತರಣೆಯನ್ನು ಕ್ರೋಢೀಕರಿಸಿ ಗುಣವನ್ನು ಹೆಚ್ಚು ಮಾಡುವುದಕ್ಕೆ ಹೆಚ್ಚಿನ ಗಮನವನ್ನು ಕೊಡುವುದಕ್ಕೆ ಏರ್ಪಾಡು ಏರ್ಪಾಡುಮಾಡುತ್ತಾ ಇದ್ದೇವೆ.

ಇನ್ನು ಹೈಯರ್ ಸೆಕೆಂಡರಿ ವ್ಯವಸ್ಥೆಯನ್ನು ಜಾರಿಗೆ ತಂದು ಅನೇಕ ಸ್ಕೂಲುಗಳಲ್ಲಿ 11ನೇ ತರಗತಿಯನ್ನು ಪ್ರಾರಂಭಮಾಢಿದ್ದೇವೆ. ಸುಮಾರು ಈಗ ಇದುವರೆಗೂ 230-240 ಪ್ರೌಢಶಾಲೆಗಳಲ್ಲಿ 11ನೇ ತರಗತಿ ಇರಬಹುದು. ಇದರಿಂದ ಒಂದು ವಿಶೇಷ ಅನುಕೂಲತೆ ಏನಾಗಿದೆಯೆಂದರೆ ಗ್ರಾಮಾಂತರಗಳಲ್ಲಿರತಕ್ಕ ಮಕ್ಕಳಿಗೆ ವಿದ್ಯಾಭ್ಯಾಸದ ಸೌಲಭ್ಯ ಅವರವರ ಮನೆ ಬಾಗಿಲಿನಲ್ಲೇ ದೊರೆತಂತಾಗಿದೆ. ಇದು ಹೆಚ್ಚಿನ ಸಾಧನೆ. ಆದರೆ ಎಲ್ಲಾ ಶಾಲೆಗಳಿಗೂ ಕೂಡ 11ನೇ ತರಗತಿಯನ್ನು ಕೊಡುವುದಕ್ಕೆ ಬರುವುದಿಲ್ಲ. ಎಲ್ಲೆಲ್ಲಿ ಸ್ನಾತಕೋತ್ತರ ಶಿಕ್ಷಣ ಪಡೆದಂತ ಉಪಾಧ್ಯಾಯರು ಇದ್ದಾರೆ, ವೈಜ್ಞಾನಿಕ ಉಪಕರಣಗಳು ಇವೆ ಮತ್ತು ಕಟ್ಟಡ ಇದೆ, ಅಂತಹ ಕಡೆ ನೋಡಿಕೊಂಡು ಬಹಳ ಎಚ್ಚರಿಕೆಯಿಂದ ಈ ಕೆಲಸವನ್ನು ನಿರ್ವಹಿಸಬೇಕಾಗಿದೆ. ಅರ್ಜಿಗಳೇನೋ ನಮ್ಮ ಶಾಲೆಯಲ್ಲಿ 11ನೇ ಸ್ಟ್ಯಾಂಡರ್ಡ್ ಕೊಡಬೇಕು ಅಂತ ಹೇಳಿ ಹೆಚ್ಚಾಗಿ ಬರುತ್ತಿವೆ. ಆದರೆ ಎಲ್ಲಾ ಕಡೆಯೂ ಅವನ್ನು ಪ್ರಾರಂಭ ಮಾಡುವುದು

ಕಷ್ಟ. ಏಕೆಂದರೆ ಅಲ್ಲಿ ಗುಣಕ್ಕೆ ಊನವಾಗುತ್ತದೆ. ಆದ್ದರಿಂದ ಯಾವ ಯಾವ ಶಾಲೆಗಳಲ್ಲಿ ಸಾಕಾದಷ್ಟು ಉಪಾಧ್ಯಾಯರು ಇದ್ದಾರೆ. ಯಾವ ಯಾವ ವೈಜ್ಞಾನಿಕ ಉಪಕರಣಗಳು ಇವೆ ಅದನ್ನು ನೋಡಿಕೊಂಡು ಅಂತಹ ಕಡೆ ಮಾತ್ರ ಅಂತಹ ಸ್ಕೂಲುಗಳನ್ನು ಪ್ರಾರಂಭ ಮಾಡುವುದಕ್ಕೆ ಏರ್ಪಾಡು ಮಾಡಿದ್ದೇವೆ. ಮತ್ತು ಎಸ್.ಎಸ್.ಎಲ್.ಸಿ ಪರೀಕ್ಷೆ ನಡೆಸುವುದಕ್ಕೆ ಒಂದು ಸ್ಟ್ಯಾಚ್ಯುಟರಿ ಬೋರ್ಡ್ ಸ್ಥಾಪನೆ ಮಾಡಿದ್ದೇವೆ ಆ ಬೋರ್ಡು ಪರೀಕ್ಷೆಗಳನ್ನು ನಡೆಸುತ್ತಾ ಇದೆ. ಈಗ ಪರೀಕ್ಷೆ ಪದ್ಧತಿಯನ್ನೂ ಕೂಡ ಸುಧಾರಣೆ ಮಾಡುವುದಕ್ಕೆ ಇವ್ಯಾಲ್ಯುಯೇಷನ್ ಯೂನಿಟ್ ಅಂತ ಹೇಳಿ ಒಂದು ಯೂನಿಟ್ ಸ್ಥಾಪನೆ ಮಾಡಲಾಗಿದೆ. ಅದು ಕೆಲಸ ಮಾಡಿ ಆಗಾಗ್ಗೆ ಪರೀಕ್ಷೆಗಳಲ್ಲಿ ಏನು ಸುಧಾರಣೆ ತರಬಹುದು ಎಂಬ ಸೂಚನೆಯನ್ನು ಇಲಾಖೆಗೆ ಕೊಡುತ್ತಾ ಇದೆ. ಇದರ ಜೊತೆಗೆ ಎಜುಕೇಷನಲ್ ರಿಸರ್ಚ್ ಬ್ಯೂರೋ ಅಂಡ್ ಗೈಡೆನ್ಸ್ ಯೂನಿಟ್ ಅಂತ ಮಾಡಿದ್ದೇವೆ. ಶಿಕ್ಷಣದ ಮಟ್ಟವನ್ನು ಹೆಚ್ಚಿಸುವುದಕ್ಕೆ ಏನೇನು ಕಾರ್ಯಕ್ರಮ ತೆಗೆದುಕೊಳ್ಳಬೇಕೆಂಬ ವಿಚಾರದಲ್ಲಿ ಸಂಶೋಧನೆ ನಡೆಸಿ ಇಲಾಖೆಗೆ ಅದರ ಸಲಹೆಗಳು ಆಗಾಗ್ಗೆ ಬರುತ್ತಾ ಇವೆ. ಇಷ್ಟೆಲ್ಲಾ ಇದ್ದರೂ ಕೂಡ ನಮ್ಮ ಶಿಕ್ಷಣದ ಮಟ್ಟ ಹೆಚ್ಚಬೇಕಾದರೆ ಮುಖ್ಯವಾದಂತಹ ಮಾರ್ಗ ನಮ್ಮ ಉಪಾಧ್ಯಾಯರ, ಶಿಕ್ಷಕರ ಮಟ್ಟ ಹೆಚ್ಚಬೇಕು. ಅವರಲ್ಲಿ ಅರ್ಹತೆ ಹೆಚ್ಚಬೇಕು, ಯೋಗ್ಯರನ್ನು ಶಿಕ್ಷಣವೃತ್ತಿಗೆ ಆಕರ್ಷಿಸಬೇಕು. ಅನೇಕ ಜನರು ಹೇಳುತ್ತಾರೆ ಶಿಕ್ಷಕರಿಗೆ ಹೊಟ್ಟೆಗೆ ಆಹಾರ ಇಲ್ಲ, ಬಳಲುತ್ತಾ ಇದ್ದಾರೆ ಕೇವಲ 80 ರೂಪಾಯಿ ಸಿಕ್ಕುತ್ತದೆ ಶಿಕ್ಷಕರಿಗೆ ಕೊಡತಕ್ಕ ಸಂಬಳ ಇಷ್ಟೆ ಕೊಡಬೇಕು ಎಂಬ ವಾದಕ್ಕೆ ನಾನು ಹೋಗುವುದಿಲ್ಲ. ಅದು ಸಾಧಾರಣವಾಗಿ ತೃಪ್ತಿಕರವಾಗಿದೆ. ನಮ್ಮ ದೇಶದಲ್ಲಿರತಕ್ಕ ಸಾಮಾನ್ಯ ಆರ್ಥಿಕ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಆ ವಿಷಯವನ್ನು ಮಾತನಾಡುವಾಗ ವಿಚಾರಪರರಾಗಿ ಮಾತನಾಡಬೇಕು, ವಿಕಾರವಶರಾಗಬಾರದು ಶಿಕ್ಷಕರಿಗೆ ಕೊಡತಕ್ಕ ಸಂಬಳ ಬಹುಶಃ ಅಷ್ಟೇನೂ ಕಡಿಮೆ ಅಲ್ಲ ಅಂತ ನನ್ನ ಭಾವನೆ. ಇದಕ್ಕಿಂತಲೂ ನಿಕೃಷ್ಟಸ್ಥಿತಿಯಲ್ಲಿರತಕ್ಕ ಜನರು ಅನೇಕರಿದ್ದಾರೆ. ಅವರ ಸಂಬಳವನ್ನು ಎರಡು ಸಾರಿ ಪುನರ್ವಿಮರ್ಶೆ ಮಾಡಿದೆ. ಈಗ ಪುನಃ ಪುನಃ ವಿಮರ್ಶೆಯಾಗತಕ್ಕ ಸಂಭವ ಅದೆ. ಪೇ ಕಮಿಷನ್‌ಗೆ ಮುಂದೆ ಈ ಪ್ರಶ್ನೆ ಪರಿಶೀಲನೆಯಲ್ಲಿದೆ ಅವರು ಏನು ಶಿಫಾರಸ್ಸು ಮಾಡುತ್ತಾರೆ ಆ ಶಿಫಾರಸ್ಸಿನಂತೆ ನಾವು ಹೆಚ್ಚು ಕೆಲಸ ಮಾಡಬೇಕಾಗುತ್ತದೆ. ಆದ್ದರಿಂದ ಉಪಾಧ್ಯಾಯರ, ಶಿಕ್ಷಕರ ವೇತನವನ್ನು ಆಗಾಗ್ಗೆ ಹೆಚ್ಚು ಮಾಡಿದ್ದೇವೆ. ಇನ್ನೂ ಹೆಚ್ಚು ಮಾಡುವುದಕ್ಕೆ ಪ್ರಯತ್ನ ಮಾಡುತ್ತೇನೆ. ಅದು ಸಾಲದೇ ಇರಬಹುದು, ಅದನ್ನು ಹೆಚ್ಚು ಮಾಡುವುದಕ್ಕೆ ಸರ್ಕಾರ ಆದಷ್ಟು ಜಾಗ್ರತೆ ಪ್ರಯತ್ನ ಮಾಡುತ್ತದೆ. ಇದರ ಜೊತೆಗೆ ತ್ರಿವಿಧ ಸೌಲಭ್ಯವನ್ನು ಜಾರಿಗೆ ತರಲಾಗಿದೆ ಅನೇಕ ಸರ್ಕಾರಿ ಶಾಲೆಗಳಲ್ಲಿರತಕ್ಕ ಉಪಾಧ್ಯಾಯರುಗಳಿಗೆ ಪೆನ್‌ಷನ್ ಮುಂತಾದವುಗಳನ್ನು ಏನು ಕೊಟ್ಟಿದೆ ಅದೇ ರೀತಿ ಖಾಸಗಿ ಶಾಲೆಯಲ್ಲಿರತಕ್ಕ ಉಪಾಧ್ಯಾಯರುಗಳಿಗೆ ಪೆನ್‌ಷನ್ ಮೊದಲಾದ

ಸೌಲಭ್ಯ ಇರಲಿಲ್ಲ. ಆ ಕುಂದುಕೊರತೆಯನ್ನು ನಿವಾರಣೆ ಮಾಡುವುದಕ್ಕೆ ತ್ರಿವಿಧಸೌಲಭ್ಯವನ್ನು ಈಗ ಜಾರಿಗೆ ತರಲಾಗಿದೆ. ಇದರಿಂದ ಖಾಸಗಿ ಶಾಲೆಯಲ್ಲಿರತಕ್ಕ ಉಪಧ್ಯಾಯರುಗಳಿಗೂ ಕೂಡ ಸರ್ಕಾರಿ ಶಾಲೆಗಳಲ್ಲಿರತಕ್ಕ ಉಪಾಧ್ಯಾಯರುಗಳಿಗೆ ಕೊಡತಕ್ಕ ಪೆನ್‌ಷನ್ ಮೊದಲಾದ ಸೌಲಭ್ಯ ದೊರೆಯುತ್ತದೆ. ಇದರ ಜೊತೆಗೆ ಟೀಚರ್ಸ್ ವೆಲ್‌ಫೇರ್ ಪಂಡ್ ಅಂತ ಹೇಳಿ ಒಂದು ನಿಧಿಯನ್ನು ಕೂಡ ಸ್ಥಾಪನೆ ಮಾಡಿದ್ದೇವೆ. ಕೇಂದ್ರದ ಮಟ್ಟದಲ್ಲಿ ನ್ಯಾಷನಲ್ ಫಂಡ್ ಫಾರ್ ಟೀಚರ್ಸ್ ಅಂತ ಹೇಳಿ ಒಂದು ನಿಧಿ ಇದೆ. ಅದರ ಜೊತೆಗೆ ರಾಜ್ಯದ ಮಟ್ಟದಲ್ಲಿ ಟೀಚರ್ಸ್ ವೆಲ್‌ಫೇರ್ ಫಂಡ್ ಅಂತ ಹೇಳಿ ಒಂದು ನಿಧಿಯನ್ನು ಪ್ರಾರಂಭ ಮಾಡಿದ್ದೇವೆ. ಕಷ್ಟದಲ್ಲಿರತಕ್ಕ ಉಪಾಧ್ಯಾಯರುಗಳಿಗೆ ಈ ನಿಧಿಯಿಂದ ಆಗಾಗ್ಗೆ ಸಹಾಯವನ್ನು ಮಾಡಲಾಗುತ್ತದೆ.

ಇನ್ನು ಟೆಕ್ಸ್ಟ್‌ಬುಕ್ಸ್ ವಿಚಾರದಲ್ಲಿ ಎರಡು ಮಾತುಗಳನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಈಗ ಸಾಧಾರಣವಾಗಿ 7ನೇ ಸ್ಟ್ಯಾಂಡರ್ಡ್‌ವರೆಗೂ ಎಲ್ಲಾ ಪುಸ್ತಕಗಳನ್ನು ರಾಷ್ಟ್ರೀಕರಣ ಮಾಡಲಾಗಿದೆ. ಅಲ್ಲಿಂದ ಮುಂದೆ 10ನೇ ಸ್ಟ್ಯಾಂಡರ್ಡ್‌ವರೆಗೆ ರಾಜ್ಯವನ್ನು ವಿವಿಧ ವಲಯಗಳನ್ನಾಗಿ ಮಾಡಿ ಒಂದೊಂದು ವಲಯಕ್ಕೆ ಒಂದೊಂದು ವಿಷಯದಲ್ಲಿ ಒಂದೊಂದು ಪಠ್ಯಪುಸ್ತಕವನ್ನು ನೇಮಕ ಮಾಡತಕ್ಕ ಪದ್ಧತಿ ಇತ್ತು. ಇದರಿಂದ ಎರಡು ದೊಡ್ಡ ತೊಂದರೆಗಳು ಆಗುತ್ತಾ ಇದ್ದವು. ಒಂದು ಏಕರೂಪವಾಗಿ ಪಠ್ಯಪುಸ್ತಕ ಇಲ್ಲದೆ ಇರುವುದರಿಂದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಜನರು ವರ್ಗಾಯಿಸಲ್ಪಟ್ಟು ಹೋದಾಗ ಅವರ ಮಕ್ಕಳಿಗೆ ತೊಂದರೆಯಗುತ್ತಾ ಇತ್ತು. ಇವೆರಡನ್ನು ನಿವಾರಣೆ ಮಾಡುವುದಕ್ಕೆ ಈ ವಲಯಗಳನ್ನು ತೆಗೆದು ಹಾಕಿ ಈಗ ಇಡೀ ರಾಜ್ಯವನ್ನು ಒಂದೇ ವಲಯವನ್ನಾಗಿ ಮಾಡಿ ಪ್ರತಿಯೊಂದೂ ವಿಷಯದಲ್ಲೂ ಒಂದೇ ಒಂದು ವಿಧವಾದ ಪಠ್ಯಪುಸ್ತಕವನ್ನು ದೊರಕಿಸಲು 1968-69ರಿಂದ ವ್ಯವಸ್ಥೆ ಮಾಡಲಾಗಿದೆ. ಇದು ಒಂದು ಮಹತ್ ಕಾರ್ಯ ಎಂದು ಈ ಸಭೆಗೆ ತಿಳಿಸುವುದಕ್ಕೆ ಇಚ್ಛಿಪಡುತ್ತೇನೆ.

ಶ್ರೀ ಎಚ್.ಸಿದ್ದವೀರಪ್ಪ- ಅದರ ಜೊತೆಗೆ ಒಮ್ಮೆ ಪಠ್ಯಪುಸ್ತಕವನ್ನು ಇಟ್ಟಮೇಲೆ ಕನಿಷ್ಟ ಪಕ್ಷ 10 ವರ್ಷಗಳಾದರು ಬದಲಾಯಿಸಬಾರದೆಂದು ನನ್ನ ಅಭಿಪ್ರಾಯ.

ಶ್ರೀ ಕೆ.ವಿ. ಶಂಕರಗೌಡ- 5 ವರ್ಷಗಳು ಎಂದು ಮಾಡಬಹುದು ಈ ಪಠ್ಯ ಪುಸ್ತಕಗಳ ವಿಚಾರವಾಗಿ ಮಾತನಾಡುವಾಗ ಮಾನ್ಯ ಶ್ರೀ ಬಂಗಾರಪ್ಪನವರು ಎತ್ತಿದ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಡುತ್ತೇನೆ. ಅವರು ಕೆಲವು ಪುಸ್ತಕಗಳನ್ನು ಎತ್ತಿ ತೋರಿಸಿದರು. ಅವು ಸರ್ಕಾರದಿಂದ ಅಚ್ಚು ಆಗಲ್ಲ. ಅದು ಕೃತಿಚೌರ್ಯಕ್ಕೆ ಸಂಬಂಧಪಟ್ಟವಿಷಯ. ಸರ್ಕಾರದಿಂದ ಅಂತಹ ಪುಸ್ತಕಗಳನ್ನು ಪ್ರಿಂಟ್ ಮಾಡಿಲ್ಲ. ಇನ್ನು ಲೈಬ್ರರಿ ಆಕ್ಟ್ ಜಾರಿಗೆ ಕೊಟ್ಟಿರುವ ಬಗ್ಗೆ ಮಾನ್ಯ ಶ್ರೀ ಸಿದ್ದವೀರಪ್ಪನವರು ಕೆಲವು ವಿಚಾರಗಳನ್ನು ಎತ್ತಿದ್ದಾರೆ. ಸೆಸ್‌ಗಳನ್ನು ವಸೂಲು

ಮಾಡುವುದು ಮುನಿಸಿಪಾಲಿಟಿಗಳಿಗೆ ಸಂಬಂದಪಟ್ಟ ವಿಷಯ. ಕೆಲವು ತಾನುಗಳು ಬಹಳ ಕಷ್ಟವಾಗಿದ್ದುದರಿಂದ ಅವನ್ನು ಅವರು ಮಾಡಲಿಕ್ಕಾಗಲಿಲ್ಲ. ಕಾನೂನು ಇಲಾಖೆಯವರು ಅದೇನು ಎಂಬುದನ್ನು ನೋಡಿ ವಿಚಾರ ಮಾಡುತ್ತಾರೆ. ಈಗ ಪ್ರತಿಯೊಂದು ಜಿಲ್ಲೆಯಲ್ಲಿಯೂ ಲೋಕಲ್ ಲೈಬ್ರರಿ ಅಥಾರಿಟಿ ಎಂಬುದಾಗಿ ರಚನೆ ಮಾಡಿದ್ದಾರೆ ಅದರಿಂದ ದೇಶದ ಮೂಲೆ ಮೂಲೆಗಳಲ್ಲಿಯೂ ಗ್ರಂಥ ಭಂಡಾರಗಳನ್ನು ರಚನೆ ಮಾಡುವುದಕ್ಕೆ ಅನುಕೂಲವಾಗುತ್ತದೆ.

ಇನ್ನು ಫಿಜಿಕಲ್ ಎಜುಕೇಷನ್ ವಿಚಾರದಲ್ಲಿ ಸಾಕಷ್ಟು ಆಸಕ್ತಿಯನ್ನು ಸರ್ಕಾರ ವಹಿಸಿರುವುದಾಗಿದೆ. ಇದಕ್ಕಾಗಿ ಒಂದು ಕಾಲೇಜನ್ನು ಪ್ರಾರಂಭ ಮಾಡಿದೆ. ಎಲ್ಲಾ ಹೈಸ್ಕೂಲುಗಳಲ್ಲಿಯೂ ಫಿಸಿಕಲ್ ಎಜುಕೇಷನ್ ಬಗ್ಗೆ ಮಕ್ಕಳು ಭಾಗವಹಿಸಬೇಕೆಂಬ ನಿಯಮವನ್ನು ವಿಧಿಸಿದ್ದೇವೆ. ಈಗ ಫಿಸಿಕಲ್ ಎಜುಕೇಷನ್ ಕಾಲೇಜು ಏನಿದೆಯೋ ಅದರಲ್ಲಿ ಡಿಗ್ರಿ ತರಗತಿಗಳನ್ನು ಸಹ ಪ್ರಾರಂಭಮಾಡುವುದನ್ನು ಸರ್ಕಾರ ಯೋಚನೆ ಮಾಡುತ್ತಿದೆ.

ಇನ್ನು ಡಿಪಾರ್ಟ್‌ಮೆಂಟ್ ಆಫ್ ಕೊಲಿಜಿಯೇಟ್ ಎಜುಕೇಷನ್ 1960ನೇ ಇಸವಿಯಲ್ಲಿ ಪ್ರಾರಂಭವಾಯಿತು. 1965ನೇ ಇಸವಿಯಲ್ಲಿ ಎಲ್ಲಾ ಕಾಲೇಜುಗಳಿಗೂ ಅನ್ವಯವಾಗುವಂತೆ ಏಕರೂಪವಾದ ಕಾನೂನನ್ನು ಜಾರಿಗೆ ಕೊಟ್ಟು ಎಲ್ಲಾ ಕಾಲೇಜುಗಳಲ್ಲಿ ಓದತಕ್ಕ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ವಿದ್ಯಾರ್ಥಿವೇತನಗಳನ್ನು ಕೊಡುವುದನ್ನು ಏರ್ಪಾಡು ಮಾಡಲಾಗಿದೆ. ಕಾಲೇಜುಗಳಲ್ಲಿ ಓದತಕ್ಕ ವಿದ್ಯಾರ್ಥಿಗಳ ಪೈಕಿ ಶೇಕಡ 30 ರಷ್ಟು ಭಾಗಕ್ಕೆ ಅಸೌಕರ್ಯವನ್ನು ಕೊಟ್ಟಿದೆ. ಶೇಕಡ 50 ಭಾಗಕ್ಕೆ ಅವರ ಆದಾಯ 2,400 ರೂಪಾಯಿಗಳಿಗೆ ಕಡಿಮೆ ಇದ್ದರೆ, ಅಂತಹವರು ಟ್ಯೂಷನ್ ಫೀಜ್ ಕೊಡಬೇಕಾಗಿಲ್ಲವೆಂದು ವಿನಾಯಿತಿ ಕೊಟ್ಟಿದೆ ಅದರ ಜೊತೆಗೆ ಕೇಂದ್ರ ಸರ್ಕಾರದ ಸ್ಕಾಲರ್‌ಷಿಪ್ ರಾಜ್ಯಸರ್ಕಾರದ ಸರ್ಕಾರದ ಸ್ಕಾಲರ್‌ಷಿಪ್ ಕೊಡುವ ಏರ್ಪಾಡು ಮಾಡಿರುವುದರಿಂದ ಅನೇಕ ಜನ ವಿದ್ಯಾರ್ಥಿಗಳಿಗೆ ಇದರಿಂದ ಅನುಕೂಲವಾಗಿದೆ. ಆದರೆ ಈ ಕಾಲೇಜುಗಳಿಗೆ ಇತ್ತೀಚೆಗೆ ಬಹು ಹೆಚ್ಚಿನಸಂಖ್ಯೆಯಲ್ಲಿ ವಿದ್ಯಾರ್ಥಿಗಳು ನುಗ್ಗುತ್ತಿದ್ದಾರೆ, ಅದನ್ನು ಈಗ ತಪ್ಪಿಸಬೇಕಾದುದು ಬಹಳ ಮುಖ್ಯವಾದ ಕೆಲಸ. ಇದು ಅಷ್ಟು ಸುಲಭವಾಗಿ ಆಗುತ್ತದೆಂದು ನನಗನ್ನಿಸುವುದಿಲ್ಲ. ಮೂಲಭೂತವಾಗಿ ನಾವು ಅನುಸರಿಸುತ್ತಾ ಇರತಕ್ಕ ಪದ್ಧತಿಯಲ್ಲಿ ದೋಷವಿದೆ. ವಿದ್ಯಾರ್ಥಿಗಳ ಪ್ರವೃತ್ತಿ, ಅರ್ಹತೆ, ಮತ್ತು ಅವಶ್ಯಕತೆ, ಮ್ಯಾನ್‌ಪವರ್ ರಿಕ್ಯುರ್‌ಮೆಂಟ್ಸ್- ಇವುಗಳ ಆಧಾರದಮೇಲೆ ವಿವಿಧ ಬಾಬುಗಳಿಗೆ ನಾವು ವಿದ್ಯಾರ್ಥಿಗಳನ್ನು ಚುನಾಯಿಸು ಪದ್ಧತಿಯನ್ನು ಇನ್ನೂ ಜಾರಿಗೆ ತಂದಿಲ್ಲ. ಇದನ್ನು ಜಾರಿಗೆ ತರುವುದಕ್ಕೂ ಕೂಡ ಮುಂದೆ ಅನೇಕ ಮಾನ್ಯ ಸದಸ್ಯರ ವಿರೋಧ ಬರುತ್ತದೆಂಬುದಾಗಿ ನಾನು ತಿಳಿದುಕೊಂಡಿದ್ದೇನೆ. ಇದನ್ನು ಜಾರಿಗೆ ಕೊಟ್ಟಾಗ ಸಮಾಜದಲ್ಲಿ ಹಿಂದುಳಿದಂಥ

ಪಂಗಡಗಳಿಗೆ ತುಂಬಾ ಅನ್ಯಾಯವಾಗುತ್ತದೆಂಬ ಕೂಗು ಕೇಳಿ ಬರುತ್ತಿದೆ ಹೀಗೆ ಅನೇಕ ತೊಂದರೆಗಳಿವೆ. ಈ ಒಂದು ಪ್ರವೃತ್ತಿ, ಅರ್ಹತೆ ಅವಶ್ಯಕತೆ ಆಧಾರದ ಮೇಲೆ ವಿದ್ಯಾರ್ಥಿಗಳನ್ನು ಚುನಾಯಿಸಬೇಕಾಗುತ್ತದೆ. ಇದರಿಂದ ಸರ್ಕಾರದ ಕೆಲಸಕ್ಕಾಗಿ ಬಿ.ಎ. ಬಿ.ಎಸ್.ಸಿ. ಪಾಸ್ ಮಾಡಿರಬೇಕೆಂದು ಕೆಲವರು ಆಸೆಪಡುತ್ತಾರೆ. ಅದನ್ನು ಸಾಧ್ಯವಾದಷ್ಟು ಮಟ್ಟಿಗೆ ತಡೆಗಟ್ಟಬೇಕಾದುದು ಅವಶ್ಯಕ. ಇದನ್ನು ತಡೆಗಟ್ಟಬೇಕದರೆ ಬೇರೆ ವಿಧವಾದ ಉಪಯುಕ್ತವಾದ ಕೋರ್ಸುಗಳನ್ನು ಪ್ರಾರಂಭಮಾಡುವುದು ಅವಶ್ಯಕ. ಈ ದೇಶದಲ್ಲಿ ಸರ್ಕಾರ ಈಗ ಅದನ್ನೆ ಯೋಚನೆ ಮಾಡುತ್ತಿದೆ. ಆ ರೀತಿಯಾಗಿ ಯೋಚನೆ ಮಾಡಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸಾದ ಮೇಲೆ ಸೆಕ್ರೆಟರಿಯಲ್ ಪ್ರಾ ಕ್ಟೀಸ್, ಆಟೋಮೊಬೈಲ್ಸ್, ಎಲೆಕ್ಟ್ರಿಫಿಕೇಷ್, ಅಗ್ರಿಕಲ್‌ಚರ್, ಇಂಜನಿಯರಿಂಗ್- ಅಂತಹ ವಿವಿಧವಾದ ಕೋರ್ಸುಗಳಿಗೆ ಪ್ರತ್ಯೇಕವಾಗಿ ವಿದ್ಯಾರ್ಥಿಗಳನ್ನು ಕಳುಹಿಸಿ, ಕಾಲೇಜುಗಳಲ್ಲಿರತಕ್ಕ ನೂಕು ನುಗ್ಗಲುಗಳನ್ನು ತಪ್ಪಿಸಬೇಕೆಂಬ ಆಸೆ ಸರ್ಕಾರಕ್ಕೆ ಮೂಡಿದೆ. ಅದನ್ನು ಅತಿ ಶೀಘ್ರವಾಗಿ ಜಾರಿಗೆ ತರುತ್ತಿದ್ದೇವೆ. ಆದ್ದರಿಂದ ಇದನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಒಂದು ಕಮರ್ಷಿಯಲ್ ಪ್ರಾಕ್ಟೀಸ್ ಎಂದು ಪ್ರಾರಂಭಮಾಡುವುದಕ್ಕೆ ಸೆಕ್ರೆಟೇರಿಯಲ್ ಪ್ರಾಕ್ಟೀಸ್ ಮತ್ತು ಇತರ ಕೋರ್ಸುಗಳನ್ನು ಈಗ ಬೆಂಗಳೂರಿನಲ್ಲಿ ಪ್ರಾರಂಭಮಾಡಬೇಕೆಂದು ಆಸೆ ಇಟ್ಟುಕೊಂಡಿದ್ದಾರೆ. ಇನ್ನು ಈ ದೇಶದಲ್ಲಿ ಇರತಕ್ಕ ವಿಶ್ವವಿದ್ಯಾನಿಲಯಗಳು ಬಹಳ ಚೆನ್ನಾಗಿ ಬೆಳೆದಿವೆ. ಅನೇಕ ಹೊಸ ಹೊಸ ಫ್ಯಾಕಲ್ಟಿಗಳನ್ನು ಪ್ರಾರಂಭಮಾಡಿದ್ದೇವೆ. ಕಾಲೇಜಿನ ಅಧ್ಯಾಪಕರಿಗೆ 4ನೇ ಪಂಚವಾರ್ಷಿಕ ಯೋಜನೆಯಲ್ಲಿ ಯುಜಿಸಿ ಸಂಬಳವನ್ನು ಕೊಡುವುದಕ್ಕೂ ಕೆಲವು ವಿಷಯಗಳಲ್ಲಿ ಬೇಧಭಾವ ಇತ್ತು. ಅದನ್ನು ಮನವರಿಕೆ ಮಾಡಿದ ಮೇಲೆ ನಮ್ಮ ಸೂಚನೆಗೆ ಅವರು ಈಗ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಖಾಸಗಿ ಕಾಲೇಜಿನವರಿಗೆ ಮತ್ತು ಸರ್ಕಾರಿ ಕಾಲೇಜಿನವರಿಗೆ 1966ನೇ ಇಸವಿಯಿಂದ ಯು.ಜಿ.ಸಿ. 4ನೇ ಪಂಚವಾರ್ಷಿಕ ಯೋಜನೆಯ ಸಂಬಳಗಳನ್ನು ಕೊಡುವುದಕ್ಕೆ ತೀರ್ಮಾನ ಮಾಡಿದೆ. ಅದರಂತೆ ಅವರಿಗೆ ಕೊಡಲಾಗುತ್ತದೆ.

ಇನ್ನು ತಾಂತ್ರಿಕ ಶಿಕ್ಷಣದ ಬಗ್ಗೆ ಎರಡು ಮಾತುಗಳನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಇದು ಗೊತ್ತುಗುರಿ ಇಲ್ಲದೆ ನಡೆಯುತ್ತಿದೆ. ಇದರಲ್ಲಿ ಶಿಕ್ಷಣವನ್ನು ಪಡೆದಂತ ವಿದ್ಯಾರ್ಥಿಗಳು ಅನೇಕ ಜನರು ನಿರುದ್ಯೋಗಿಗಳಾಗಿದ್ದಾರೆನ್ನುವ ವಾದವನ್ನು ಅನೇಕ ಜನ ಮಾನ್ಯ ಸದಸ್ಯರು ಮುಂದೂಡಿ ತಾಂತ್ರಿಕ ಶಿಕ್ಷಣಶಾಲೆಗಳನ್ನು ಮುಚ್ಚಿಬಿಡಬೇಕು ಎನ್ನುವವರೆಗೂ ಅವರು ಹೋಗಿದ್ದಾರೆ. ಈ ಸಂದರ್ಭದಲ್ಲಿ ಈ ರೀತಿ ಯೋಚನೆ ಮಾಡತಕ್ಕದ್ದು ಸರಿಯಲ್ಲ. ನಮ್ಮ ದೇಶ ತೀವ್ರಗತಿಯಲ್ಲಿ ಕೈಗಾರಿಕಾ ಪ್ರಗತಿಯನ್ನು ಸಾಧಿಸುತ್ತಾ ಇದೆ. ಇಂತಹ ಸಂದರ್ಭದಲ್ಲಿ ತಾಂತ್ರಿಕ ಶಿಕ್ಷಣವನ್ನು ಪಡೆದಂತ ಜನರ ಅವಶ್ಯಕತೆ ನಮಗೆ ಬಹಳ ಹೆಚ್ಚಾಗಿದೆ. ಈಗ ಬಂದಿರತಕ್ಕ ನಿರುದ್ಯೋಗವೇನಿದೆ ಇದು ತಾತ್ಕಾಲಿಕವಾದ ವ್ಯವಸ್ಥೆ. ಇದು ಹೀಗೆಯೇ ಮುಂದುವರಿಯುತ್ತದೆ ಎಂಬುದಾಗಿ ಹೇಳಿ ನಾವು ಭಾವಿಸುವುದು ತಪ್ಪಾಗುತ್ತದೆ. ಆದ್ದರಿಂದ

ಇವನ್ನು ಮುಚ್ಚುವುದಕ್ಕೆ ಬದಲಾಗಿ ಬೇರೆ ಯಾವ್ಯಾವ ಕೋರ್ಸುಗಳನ್ನು ಪ್ರಾರಂಭ ಮಾಡಬಹುದು ಎಂಬುದನ್ನು ನಾವು ಈಗ ಯೋಚನೆ ಮಾಡಬೇಕಾಗಿದೆ. ಅದಕ್ಕಾಗಿ ಡೈರೆಕ್ಟರ್ ಆಪ್ ಟೆಕ್ನಿಕಲ್ ಎಜುಕೇಷನ್ ಅವರು ಇದ್ದಾರೆ. ನಾವು ಅವರ ಒಂದು ನೇತೃತ್ವದಲ್ಲಿ ಒಂದು ಸಣ್ಣ ಕಮಿಟಿಯನ್ನು ಮಾಡಿ ಆ ವಿಚಾರದಲ್ಲಿ ಸೂಕ್ತ ಸಲಹೆಗಳನ್ನು ಕೊಡಬೇಕೆಂದು ಹೇಳಿದ್ದೇವೆ. ಯಾವ್ಯಾವ ಹೊಸ ಕೋರ್ಸುಗಳಿಂದ ವಿದ್ಯಾರ್ಥಿಗಳನ್ನು ಸ್ವಾವಲಂಭಿಗಳಾಗಿ ಮಾಡಬಹುದು. ಯಾವ್ಯಾವ ಕೋರ್ಸುಗಳನ್ನು ಅದಕ್ಕಾಗಿ ಹೊಸದಾಗಿ ಪ್ರಾರಂಭಮಾಡಬಹುದು ಎಂಬ ಬಗ್ಗೆ ಅವರು ಶಿಫಾರಸ್ಸುಗಳನ್ನು ಮಾಡಬೇಕೆಂದು ಕೇಳಿದ್ದೇವೆ. ಹಾಗೆಯೇ ಅವರೂ ಕೂಡ ಶೀಘ್ರವಾಗಿ ಅದರ ಬಗ್ಗೆ ಶಿಫಾರಸ್ಸುಗಳನ್ನು ಮಾಡುತ್ತಾರೆ. ಕೆಲವು ತಾಂತ್ರಿಕ ಶಾಲೆಗಳನ್ನು ಹಾಗೆಯೇ ಇಟ್ಟುಕೊಳ್ಳಬೇಕೆಂಬುದು ನನ್ನ ಆಸೆ. ಏಕೆಂದರೆ ಎಸ್.ಎಸ್.ಎಲ್.ಸಿ. ಪಾಸ್ ಮಾಡಬೇಕಧರೆ 15 ವರ್ಷಗಳಾಗಿರುತ್ತದೆ. ಆಮೇಲೆ ಕೆಲಸಕ್ಕೆ ಹೋಗಬೇಕಾದರೆ 18 ವರ್ಷಗಳಾಗಿರಬೇಕು. ಮಧ್ಯೆ ಈ ಮೂರು ವರ್ಷಗಳ ಕಾಲದಲ್ಲಿ ಅವರಿಗೆ ಏನಾದರೂ ಸ್ವಾವಲಂಬಿಯಗಿ ಜೀವಿಸುವುದಕ್ಕೆ ಒಂದು ಮಾರ್ಗವನ್ನು ತೋರಿಸಬೇಕು. ಇಲ್ಲದಿದ್ದರೆ ಅವರೆಲ್ಲರೂ ಕಾಲೇಜಿಗೆ ಹೋಗಲು ಇಚ್ಛಿಪಡುತ್ತರೆ. ಆಗ ಕಾಲೇಜಿನಲ್ಲಿ ನೂಕುನುಗ್ಗಲು ಜಾಸ್ತಿಯಾಗುತ್ತದೆ. ಆದ್ದರಿಂದ ಈಗ ತಾಂತ್ರಿಕ ಶಿಕ್ಷಣ ಶಾಲೆಗಳಲ್ಲಿ ಕೊಡುವ ಕೋರ್ಸುಗಳನ್ನು ಬದಲಾವಣೆ ಮಾಡಿ ಅವರನ್ನು ತಾಂತ್ರಿಕ ಶಿಕ್ಷಣ ಶಾಲೆಗಳಿಗೆ ಕಳುಹಿಸುವುದು ಸೂಕ್ತವೆಂದು ಸರ್ಕಾರದವರು ಪರಿಶೀಲನೆ ಮಾಡುತ್ತಿದ್ದಾರೆ. ಈಗ ಅಲ್ಲಿರತಕ್ಕ ಕೋರ್ಸುಗಳನ್ನು ಬದಲಾವಣೆ ಮಾಡುವುದಕ್ಕೆ ಏರ್ಪಾಡು ಮಾಡುತ್ತಿದ್ದೇವೆ. ಆ ರೀತಿಯಲ್ಲಿ ಬದಲಾವಣೆ ಮಾಡುವುದಕ್ಕೋಸ್ಕರ ಇನ್‌ಸ್ಟಿಟ್ಯೂಟ್ ಆಫ್ ಫುಡ್‌ಕ್ರಾಫ್ಟ್ ಕೇಟರಿಂಗ್ ಟೆಕ್ನಾಲಜಿಗಳನ್ನು ಪ್ರಾರಂಭಮಾಡಿದ್ದೇವೆ. ಆಗ್ರಿಕಲ್‌ಚರಲ್ ಮೆಕಾನಿಕ್ ಮುಂತಾದ ಬಗ್ಗೆ ಕೋರ್ಸುಗಳನ್ನು ಪ್ರಾರಂಭ ಮಾಡುವುದಕ್ಕೆ ಏಪಾಡು ಮಾಡುತ್ತಿದ್ದೇವೆ.

ಶ್ರೀ ಕೆ.ಎಚ್. ರಂಗನಾಥ್- ಕೈಗಾರಿಕೆಗಳನ್ನು ನೋಡಿಕೊಂಡು ಎಲ್ಲಿ ಏನು ಅವಶ್ಯಕತೆ ಇದೆ ಅದನ್ನು ಮಾಡಬೇಕು. ಎಲ್ಲರೂ ಎಲೆಕ್ಟ್ರಿಕಲ್, ಮೆಕಾನಿಕಲ್ ಇಂಜನಿಯರ್‌ಗಳು ಆಗುತ್ತಿದ್ದಾರೆ.

ಶ್ರೀ ಕೆ.ವಿ. ಶಂಕರಗೌಡ- ಅದನ್ನು ಬದಲಾವಣೆ ಮಾಡಿ ಬೇರೆ ಕೋರ್ಸುಗಳಿಗೆ ಕಳುಹಿಸಬೇಕು.

ಶ್ರೀ ಕೆ.ಹೆಚ್. ರಂಗನಾಥ್- ತಜ್ಞರ ಕಮಿಟಿಯ ಅಭಿಪ್ರಾಯ ತೆಗೆದುಕೊಳ್ಳುವುದು ಸೂಕ್ತ.

ಶ್ರೀ ಕೆ.ವಿ. ಶಂಕರಗೌಡ- ಮಾನ್ಯ ಸದಸ್ಯರು ಕನ್ನಡವನ್ನು ಆಡಳಿತ ಭಾಷೆ ಮಾಡುವುದರಲ್ಲಿ ಸಾಕಾದಷ್ಟು ಕಾರ್ಯಕ್ರಮವನ್ನು ಸರ್ಕಾರ ತೆಗೆದುಕೊಂಡಿಲ್ಲ ಎಂದು

ಆರೋಪಣೆ ಮಾಡಿದರು. ಆದರಲ್ಲಿ ಸರ್ಕಾರ ಬಹಳ ತೀವ್ರ ಆಸಕ್ತಿಯನ್ನು ವಹಿಸಿದೆ ಎಂದು ಬಿಚ್ಚು ಮನಸ್ಸಿನಿಂದ ಹೇಳಬೇಕಾಗಿದೆ. ಇದುವರೆಗೆ ನಡೆದ ಪ್ರಯತ್ನ ಅತೃಪ್ತಕರವಾಗಿದೆ.

ಇಷ್ಟರೊಳಗೆ ಆಡಳಿತ ಭಾಷೆ ಪ್ರಾಂತೀಯ ಭಾಷೆಯಲ್ಲಿ ಬರಬೇಕಾಗಿತ್ತು. ಈ ರೀತಿ ಆದುದ್ದು ದೊಡ್ಡ ದೋಷ. ಆದಷ್ಟು ಜಾಗ್ರತೆ ಕನ್ನಡವನ್ನು ಆಡಳಿತ ಭಾಷೆ ಮಾಡುವುದಕ್ಕೆ ಎಲ್ಲಾ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುತ್ತೇವೆ. ಮುಖ್ಯಮಂತ್ರಿಗಳು ಫೈಲ್ಸ್‌ಗಳ ಮೇಲೆ ಕನ್ನಡದಲ್ಲಿ ಟಿಪ್ಪಣಿಗಳನ್ನು ಬರೆಯುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಶ್ರೀ ರಾಮಕೃಷ್ಣ ಹೆಗ್ಗಡೆಯವರು ಅದೇ ರೀತಿ ಮಾಡುವುದಕ್ಕೆ ಪ್ರಾರಂಭಮಾಡಿದ್ದಾರೆ. ಕನ್ನಡವನ್ನು ಮಾಧ್ಯಮ ಭಾಷೆಯನ್ನಾಗಿ ಮಾಡುವುದಕ್ಕೆ ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಂಡಿದ್ದೇವೆ. ಈ ದೃಷ್ಟಿ ಇಟ್ಟುಕೊಂಡು ಕನ್ನಡ ಟೈಪರೇಟಿಂಗ್ ಎಕ್ಸಾಮಿನೇಷನ್ 1967ನೇ ಇಸವಿ ನವಂಬರ್‌ನಿಂದ ನಡೆಸಿದ್ದೇವೆ. ಕನ್ನಡ ಟೈಪರೇಟಿಂಗ್‌ನಲ್ಲಿ ಪರಿಣತರಾದವರಿಗೆ ಅಲೋಯನ್ಸ್ ಕೊಡುವ ಪದ್ಧತಿಯನ್ನು ಜಾರಿಗೆ ತಂದಿದ್ದೇವೆ. ಆದಷ್ಟು ಜಾಗ್ರತೆ ಕನ್ನಡ ಆಡಳಿತ ಭಾಷೆ ಆಗದ ಹೊರತು ಬೋಧನ ಕ್ರಮ ಮಾಧ್ಯಮ ಕನ್ನಡ ಆಗುವುದು ಕಷ್ಟ. ಈ ದೃಷ್ಟಿಯನ್ನು ಇಟ್ಟುಕೊಂಡು ಆದಷ್ಟು ಜಾಗ್ರತೆ ಕನ್ನಡ ಆಡಳಿತ ಭಾಷೆ ಮಾಡುವುದು ಅಗತ್ಯ. ಎನ್‌ಸೈಕ್ಲೋಪೀಡಿಯಾ ಕೆಲಸವನ್ನು ಒಂದು ಕಮಿಟಿ ನೆರವೇರಿಸುತ್ತಿತ್ತು. ಆ ಕೆಲಸ ತೃಪ್ತಿಕರವಾಗಿ ನಡೆದಿರಲಿಲ್ಲ ಈ ಕೆಲಸವನ್ನು ಪೂರೈಸಬೇಕಾಗಿ ಮೈಸೂರು ಯೂನಿವರ್ಸಿಟಿಯವರು ವಹಿಸಿಕೊಂಡಿರುವುದಕ್ಕೆ ತುಂಬಾ ಸಂತೋಷವಾಗುತ್ತದೆ. 5 ವರ್ಷದೊಳಗೆ ಈ ಕೆಲಸವನ್ನು ಮುಗಿಸುವ ಆಶ್ವಾಸನೆ ಕೊಟ್ಟಿರುತ್ತಾರೆ. 5 ವರ್ಷದೊಳಗೆ ಕನ್ನಡ ವಿಶ್ವಕೋಶ ಹೊರಗಡೆ ಬರುತ್ತದೆ ಎನ್ನುವ ಆಸೆಯನ್ನು ಇಟ್ಟುಕೊಳ್ಳಬಹುದು.

ಇನ್ನು ಅಡಲ್ಟ್ ಎಜುಕೇಷನ್ ವಿಷಯವಾಗಿ ಎರಡು ಮಾತುಗಳನ್ನು ಹೇಳಲು ಇಚ್ಛಿಪಡುತ್ತೇನೆ. ಅಡಲ್ಟ್ ಎಜುಕೇಷನ್ ಕೌನ್ಸಿಲ್ ಏನು ಇದೆ ಅದು ಹಿಂದೆ ನಮ್ಮ ರಾಜ್ಯದಲ್ಲಿ ಬಹಳ ಕೆಲಸ ಮಾಡಿದೆ ಮತ್ತು ಅಲ್ಲಿ ಕೆಲಸ ಮಾಡಿದಂತಹ ಅನೇಕ ಜನ ಹೊರಗೆ ಹೋಗಿ ಹೆಸರು ಪಡೆದಿದ್ದಾರೆ. ಉತ್ತಮ ಕೆಲಸವನ್ನು ವಯಸ್ಕರ ಶಿಕ್ಷಣಕ್ಕಾಗಿ ಮಾಡಿದ್ದಾರೆ. ಅದಕ್ಕೆ ಒಂದು ಕಾನೂನು ಸ್ವರೂಪ ;ಕೊಡಬೇಕು ಎನ್ನುವ ಆಸೆ ಇಟ್ಟುಕೊಂಡು ಇದನ್ನು ಒಂದು ಸ್ಟಾಚೂಟರಿ ಬಾಡಿ ಮಾಢಬೇಕು ಎಂದು ಯೋಚನೆ ಮಾಡಿದ್ದೇವೆ. ಅದಕ್ಕಾಗಿ ಬಿಲ್ ತಯಾರಾಗುತ್ತಾ ಇದೆ. ಆದಷ್ಟು ಜಾಗ್ರತೆ ಆ ಸ್ಟಾಚೂಟರಿ ಬಾಡಿಯ ಕಾರ್ಯವ್ಯಾಪ್ತಿ ಇಡೀ ವಿಷಯ ರಾಜ್ಯಕ್ಕೆ ಅನ್ವಯವಾಗುವುದರಿಂದ ಹೆಚ್ಚಿನ ಕೆಲಸವನ್ನು ನಿರೀಕ್ಷಿಬಸಹುದಾಗಿದೆ. ಇಷ್ಟು ವಿಷಯ ಹೇಳಿ ಮಾನ್ಯ ಸದಸ್ಯರು ಹೇಳಿದಂತ ಕೆಲವು ವಿಷಯಗಳಿಗೆ ನನ್ನ ಉತ್ತರವನ್ನು ಸಂಕ್ಷೇಪವಾಗಿ ಕೊಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಮೊಟ್ಟ ಮೊದಲನೆಯದಾಗಿ ಈ ಸಭೆಯಲ್ಲಿ ಚರ್ಚೆಗೆ ಬಂದಿರತಕ್ಕಂಥಾದ್ದು ತ್ರಿಭಾಷಾ ಸೂತ್ರ. ವಿರೋಧ ಪಕ್ಷದ ನಾಯಕರಾದ ಮಾನ್ಯ ಶಿವಪ್ಪನವರು ಕಳೆದ ಆಯವ್ಯಯದ ಅಧಿವೇಶನದಲ್ಲಿ ಮಾತನಾಡುತ್ತಾ ತ್ರಿಭಾಷಾ ಸೂತ್ರ ಕಟ್ಟುನಿಟ್ಟಾಗಿ ಜಾರಿಗೆ ಕೊಡಬೇಕು ಎಂದು ಆಗ್ರಹಪೂರ್ವಕವಾಗಿ ಒತ್ತಾಯ ಮಾಡಿದರು. ಈ ವರ್ಷ ಮಾತನಾಡುವಾಗ ಅಷ್ಟು ಆಗ್ರಹ ತೋರಿಸಲಿಲ್ಲ. ಆದರೆ, ಅವರ ಭಾಷಣವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿದ್ದೇನೆ. ಅವರು ತ್ರಿಭಾಷಾ ಸೂತ್ರಕ್ಕೆ ವ್ಯತಿರಿಕ್ತವಾಗಿದ್ದಾರೆಂದು ಅರ್ಥವಾಗಲಿಲ್ಲ, ಪರವಾಗಿದ್ದಾರೆ. ಆದರೆ, ಒಂದು ಬದಲಾವಣೆ ಮಾಡಿಕೊಂಡಿದ್ದಾರೆ. ಕನ್ನಡ ಪ್ರಾದೇಶಿಕ ಭಾಷೆ ಕಡ್ಡಾಯವಾಗಲಿ ಉಳಿದ ಇಂಗ್ಲೀಷ್ ಅಥವಾ ಹಿಂದಿಯನ್ನು ಇಚ್ಛೆಪಟ್ಟರೆ ಕಲಿಯಲಿ ಅಥವಾ ಬಿಡಲಿ ಎಂದು ಹೇಳಿದ್ದಾರೆ. ಈ ವಾದ ಅಷ್ಟು ಸರಿಹೋಗಲಾರದು ಎಂದು ನನಗೆ ಅನಿಸುತ್ತದೆ. ಈ ತ್ರಿಭಾಷಾ ಸೂತ್ರವನ್ನು ಕೈಬಿಟ್ಟರೆ ರಾಷ್ಟ್ರಕ್ಕೆ ಭವಿಷ್ಯವೂ ಇಲ್ಲ ಎಂದು ತಿಳಿದುಕೊಂಡಿರುವವರಲ್ಲಿ ನಾನೂ ಒಬ್ಬ. ರಾಷ್ಟ್ರಕ್ಕೆ ಅವಶ್ಯಕವಾಗಿ ಬೇಕಾಗಿರುವುದು ತ್ರಿಭಾಷಾ ಸೂತ್ರ.

ಶ್ರೀ ಹೆಚ್. ಸಿದ್ದವೀರಪ್ಪ- ರಾಷ್ಟ್ರಕ್ಕೆ ಬೇಕಾಗಿರುವುದು ಬಾಷೆಯ ವಿಚಾರ ಅನೇಕ ವರ್ಷಗಳ ಕಾಲ ಮಾತನಾಡದೇ ಇರತಕ್ಕದ್ದು.

ಶ್ರೀ ಕೆ.ವಿ. ಶಂಕರೇಗೌಡ- ಭಾಷೆ, ಜಾತಿ, ಪ್ರಾಂತ್ಯ ಈ ಮೂರೂ ಸೂಕ್ಷ್ಮವಾದ ವಿಷಯಗಳು. ಈ ಮೂರು ಕೂಡ ನಮ್ಮ ಭಾವನೆಗಳನ್ನು ಉದ್ರೇಕಗೊಳಿಸತಕ್ಕ ವಿಷಯಗಳು. ಆದ್ದರಿಂದ ಅದರ ವಿಚಾರವಾಗಿ ಮಾತನಾಡುವಾಗ ಬಹಳ ದೀರ್ಘವಾಗಿ ಆಲೋಚನೆ ಮಾಡಿ ಮಾತನಾಡಬೇಕು. ವಿಚಾರಪರರಾಗಿರಬೇಕು, ವಿಕಾರವಶರಾಗಿರಬಾರದು. ದೀರ್ಘವಾಗಿ ಆಲೋಚನೆ ಮಾಡಿದರೆ ನಮ್ಮ ರಾಷ್ಟ್ರಕ್ಕೆ ಬೇಕಾಗಿರುವುದು ತ್ರಿಭಾಷಾ ಸೂತ್ರ. ಯಾವ ರಾಜ್ಯವೇ ಆಗಲಿ ಇದನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು. ಇದನ್ನು ಅನೇಕ ರಾಜ್ಯಗಳವರು ಒಪ್ಪಿಕೊಂಡಿದ್ದಾರೆ. ನಮ್ಮ ರಾಜ್ಯವು 10-15 ವರ್ಷದಿಂದಲೂ ಈ ತ್ರಿಭಾಷಾ ಸೂತ್ರವನ್ನು ಜಾರಿಗೆ ತಂದಿದೆ. ಅದು ಈ ಗೊಂದಲ ಉಂಟಾಗಿರುವುದಕ್ಕೆ ಕಾರಣಕರ್ತರು ಹಿಂದೀ ಮಾತನಾಡತಕ್ಕಂಥ ಪ್ರದೇಶದ ಜನಗಳು ಎಂದು ವಿಷಾದದಿಂದ ಹೇಳಬೇಕಾಗಿದೆ. ಅವರ ಸ್ವಾರ್ಥದಿಂದ ಅವರ ಸಂಕುಚಿತ ಬುದ್ಧಿಯಿಂದ ಈ ಒಂದು ಪರಿಸ್ಥಿತಿ ಉದ್ಭವವಾಗಿದೆ. ಮೊನ್ನೆ ಲೋಕಸಭೆಯಲ್ಲೂ ಈ ಭಾಷೆಗೆ ಸಂಬಂಧಪಟ್ಟ ಹಾಗೆ ಒಂದು ಆಕ್ಟನ್ನು ಸ್ವೀಕರಿಸಿದರು. ಅದಕ್ಕೆ ಅನುಸಂಗಿಕವಾಗಿ ಒಂದು ಠರಾವನ್ನು ಸ್ವೀಕಾರ ಮಾಡತಕ್ಕ ಪದ್ಧತಿ ಪ್ರಜಾಪ್ರಭುತ್ವದಲ್ಲಿ ತೀರಾ ಹೊಸದು. ಅದು ಯಾವ ರೀತಿ ನಡೆಯಿತೋ ನನಗೆ ಗೊತ್ತಾಗಲಿಲ್ಲ. ಈ ಠರಾವಿನಲ್ಲಿ ಕೇಂದ್ರದ ಹುದ್ದೆಗಳಿಗೆ ಸೇರತಕ್ಕವರಿಗೆ ಹಿಂದೀ ಅಥವಾ ಇಂಗ್ಲೀಷ್ ಜ್ಞಾನವಿರಬೇಕು ಎಂದು ಇದೆ. ಅದರ ವಿಚಾರವಾಗಿ ಒಂದು ಗೊಂದಲ ಉಂಟಾಯಿತು. ಹಿಂದೀ ಮಾತನಾಡತಕ್ಕ

ಜನ ಕೇವಲ ಹಿಂದಿ ಕಲಿತರೆ ಸಾಕು, ಬೇರೆ ಪ್ರದೇಶದ ಜನ ಹಿಂದಿ ಕಲಿಯಬೇಕು. ಇಂಗ್ಲೀಷ್ ಕಲಿಯಬೇಕು, ಜೊತೆಗೆ ಪ್ರಾದೇಶಿಕ ಭಾಷೆ ಕಲಿಯಬೇಕು. ನಾವು ಮೂರು ಭಾಷೆಯನ್ನು ಕಲಿಯಬೇಕು ಎಂದು ಇದೆ. ಇದರಿಂದ ಹೊರೆ ಅಸಮಾನವಾಗುತ್ತದೆ. ಇದು ಸರಿಯಲ್ಲ, ಇದನ್ನು ತಿಳಿದು ಯೋಚನೆ ಮಾಡಿ ವಿದ್ಯಾರ್ಥಿಗಳು ಆಂದೋಳನ ನಡೆಸಿದರು. ಮತ್ತು ಗೊಂದಲವನ್ನು ಉಂಟು ಮಾಡಿದರು. ಈ ರೀತಿ ಗೊಂದಲ ಉಂಟಾಗುವುದಕ್ಕೆ ಲೋಕಸಭೆಯೇ ಕಾರಣ. ಲೋಕಸಭೆ ಈ ರೀತಿ ಅವರ ಮೇಲೆ ಒತ್ತಾಯದ ಹೊರೆಯನ್ನು ಹೊರಿಸಿದರು. ಹಿಂದಿ ಮಾತನಾಡತಕ್ಕ ಜನಗಳ ಸ್ವಾರ್ಥ ಮತ್ತು ಸಂಕುಚಿತ ಭಾವನೆ ಕೆಲವರ ಅಸಮಧಾನಕ್ಕೆ ಕಾರಣವಾಯಿತು ಎಂದು ಹೇಳಬೇಕಾಗಿದೆ. ಕೇಂದ್ರ ಸರ್ಕಾರಕ್ಕೆ ಈ ಸಭೆಯ ಮೂಲಕ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಪಾರ್ಲಿಮೆಂಟಿನವರು ಏನು ನಿರ್ಣಯ ಮಾಡಿದ್ದರೋ ಅದನ್ನು ವಾಪಸ್ಸು ತೆಗೆದುಕೊಳ್ಳಬೇಕು. ಕೇಂದ್ರದ ಹುದ್ದೆಗಳಿಗೆ ಸೇರುವ ಪ್ರತಿಯೊಬ್ಬರಿಗೂ ಕೂಡ ಮೂರು ಭಾಷೆಯಲ್ಲಿ ಜ್ಞಾನವಿರಬೇಕು ಎಂದು ವಿಧಾಯಕ ಮಾಡಬೇಕು. ಯಾವನಿಗೇ ಆಗಲಿ ಪ್ರಾದೇಶಿಕ ಭಾಷೆ, ಹಿಂದಿ ಮತ್ತು ಇಂಗ್ಲೀಷ್ ಈ ಮೂರು ಭಾಷೆಗಳ ಜ್ಞಾನ ಇರಬೇಕು.

ಶ್ರೀ ಎಸ್. ಶಿವಪ್ಪ (ಶ್ರವಣಬೆಳಗೊಳ)- ಈ ವಾದಕ್ಕೆ ಕೇಂದ್ರ ಸರ್ಕಾರದವರು ಒಪ್ಪದೇ ಹೋದರೆ ಏನು ಮಾಡುತ್ತೀರಿ?

ಶ್ರೀ ಕೆ.ವಿ. ಶಂಕರಗೌಡ- ದೇಶಾಭಿಮಾನ ಇರತಕ್ಕ ಯಾರಾದರೂ ಒಪ್ಪಲೇಬೇಕು. ದೇಶದ ಭವಿಷ್ಯವನ್ನು ಉಜ್ವಲ ಮಾಡಬೇಕಾದರೆ, ಸ್ವಾತಂತ್ರ್ಯ ಉಳಿಯಬೇಕಾದರೆ ಸಂಕುಚಿತ ಭಾವನೆಯನ್ನು ಬದಿಗೊತ್ತಬೇಕಾದುದು ಅತ್ಯಾವಶ್ಯಕ. ಈ ರೀತಿ ಎಲ್ಲರೂ ಮಾಡುತ್ತಾರೆ ಎನ್ನುವ ಆಸೆ ಇಟ್ಟುಕೊಂಡಿದ್ದೇನೆ. ನಮ್ಮ ಕಾನ್‌ಸ್ಟಿಟ್ಯೂಷನ್‌ನಲ್ಲಿ ಹಿಂದಿ ಸಂಪರ್ಕ ಭಾಷೆಯಾಗಿ ಇರಬೇಕು ಎಂದು ವಿಧಾಯಕ ಮಾಡಲಾಗಿದೆ. ಹಿಂದಿಯನ್ನು ಬಿಟ್ಟುಬಿಡಿ ಎಂದು ಹೇಳತಕ್ಕದ್ದು ವಿವೇಕತನದ ಮಾರ್ಗವಲ್ಲ; ವಿವೇಕದಿಂದ ಕೂಡಿದ ಯೋಚನೆ ಅಲ್ಲ. ಹಿಂದಿ ಭಾಷೆ ಸಾಧ್ಯವಿಲ್ಲ. ಬೇರೆ ಯಾವುದಾದರೂ ಸಂಪರ್ಕ ಭಾಷೆ ಆಗಬೇಕು ಎಂದು ಇಚ್ಛಿಪಡುವುದಾದರೆ ಅದು ಮೂರ್ಖತನದ ಪರಮಾವಧಿ ಎಂದು ಘಂಟಾಘೋಷವಾಗಿ ಹೇಳುತ್ತೇನೆ. ಇಂಗ್ಲೀಷ್ ಈ ದೇಶದಲ್ಲಿ ಎಂದೆಂದಿಗೂ ಸಂಪರ್ಕ ಭಾಷೆಯಾಗಿರುವುದಕ್ಕೆ ಸಾಧ್ಯವಿಲ್ಲ. ಅದು ದಾಸ್ಯದ ಕುರುಹು ಆದೀತು. ಹೆಚ್ಚಿನ ಜನ ಮಾತನಾಡತಕ್ಕ ಭಾಷೆ ಸಂಪರ್ಕ ಭಾಷೆ ಆಗಬೇಕಾದರೆ, ನಮ್ಮ ರಾಷ್ಟ್ರದಲ್ಲಿ ಹೆಚ್ಚಿನ ಜನ ಮಾತನಾಡತಕ್ಕ ಭಾಷೆ ಸಂಪರ್ಕ ;ಭಾಷೆಯಾಗುವುದೇ ಹೊರತು ಬೇರೆ ಭಾಷೆ ಅಲ್ಲ. ಹಿಂದಿಗೆ ಒಂದು ಅನುಕೂಲತೆ ಇದೆ. ಹಿಂದಿಯಲ್ಲಿ 100ಕ್ಕೆ 50 ಪದಗಳು ಸಂಸ್ಕೃತ ಪದಗಳು; ಇತರ ಭಾಷೆಗಳಲ್ಲೂ ಕೂಡ ಸಾಧಾರಣವಾಗಿ ಕಂಡುಬರುವಂಥ ಪದಗಳು, ಹಿಂದಿಯನ್ನು ಸಂಪರ್ಕ ಭಾಷೆಯಾಗಿ ಒಪ್ಪಿಕೊಳ್ಳಲೇಬೇಕು.

ಪ್ರಪಂಚದ ವ್ಯವಹಾರವನ್ನು ತಿಳಿದುಕೊಳ್ಳುವುದಕ್ಕಗಿ ಇಂಗ್ಲೀಷ್ ಇರಬೇಕಾದ್ದು ಅವಶ್ಯಕ. ನಮ್ಮ ಮಕ್ಕಳು ವ್ಯಕ್ತಿತ್ವ ಪೂರ್ಣವಾಗಿ ವಿಕಾಸವಾಗಬೇಕಾದರೆ ಅವರ ಶಿಕ್ಷಣ ಅವರ ಮಾತೃಭಾಷೆಯಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಇರಬೇಕಾದುದು ಅತ್ಯವಶ್ಯಕ. ಇದರಿಂದ ಪ್ರಾದೇಶಿಕ ಭಾಷೆ ಇರಬೇಕು. ಈ ರೀತಿ ಮೂರು ಭಾಷೆಗಳು ಕಲಿಯಬೇಕಾದುದು ಅನಿವಾರ್ಯ. ಅದಕ್ಕಾಗಿ ಯೋಚನೆ ಮಾಡಿ ಸೂಕ್ತ ಪರಿಹಾರ ಕಂಡುಹಿಡಿಯಬೇಕು ಎಂದು ನಾನು ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಶ್ರೀ ಎಚ್. ಸಿದ್ದವೀರಪ್ಪ- ನಿಮಗೆ ಭಾಷೆ ವಿಚಾರದಲ್ಲಿ ಎಷ್ಟು ಅಭಿಮಾನವಿದೆ ಎಂಬುದು ವರ್ತನೆಗಳಿಂದಲೆ ಅದು ವ್ಯಕ್ತವಾಗುತ್ತದೆ. ಈಗಾಗಲೆ ಅನೇಕ ರಾಜ್ಯ ಸರ್ಕಾರಗಳು ಭಾಷಾ ವಿಚಾರದಲ್ಲಿ ಏನೊಂದು ದೋರಣೆಯನ್ನು ತಾಳಬೇಕು ಎನ್ನತಕ್ಕ ವಿಚಾರದಲ್ಲಿ ಒಂದು ನಿರ್ಧಾರಕ್ಕೆ ಬರಲು ಅಲ್ಲಿನ ಶಾಸನ ಸಭೆಗಳನ್ನು ಕರೆದು ಅನೇಕ ಕಡೆ ಅವು ತಮ್ಮ ಅಖೈರು ತೀರ್ಮಾನವನ್ನು ತೆಗೆದುಕೊಂಡಿದ್ದರು ಇಲ್ಲಿ ನಮ್ಮ ಸರ್ಕಾರ ಇನ್ನೂ ತೂಕಡಿಸುತ್ತಿದೆ ಅದ್ದರಿಂದ ಇವರಿಗೆ ಭಾಷಾ ವಿಚಾರದಲ್ಲಿ ಎಷ್ಟು ಅಭಿಮಾನವಿದೆ ಎಂಬುದು ಇದರಿಂದ ವ್ಯಕ್ತವಾಗುವುದಿಲ್ಲವೆ?

ಶ್ರೀ ಕೆ.ವಿ. ಶಂಕರಗೌಡ- ಇನ್ನು ನಮ್ಮ ವಿದ್ಯಾಭ್ಯಾಸದಲ್ಲಿ ಸುಧಾರಣೆಗಳನ್ನು ಜಾರಿಗೆ ಕೊಡತಕ್ಕ ವಿಚಾರವಾಗಿ ಕೆಲವರು ಕೆಲವು ಮಾತುಗಳನ್ನಾಡಿದ್ದಾರೆ. ಈ ವಿಚಾರದಲ್ಲಿ ಕೊಠಾರಿ ಕಮಿಷನ್ನಿನವರು ಕೊಟ್ಟಿರತಕ್ಕ ಸುಧಾರಣೆಗಳಲ್ಲಿ ಕೆಲವನ್ನು ನಾವು ಜಾರಿಗೆ ತಂದರೆ ಅದರಿಂದ ನಮ್ಮ ವಿದ್ಯಾಭ್ಯಾಸದಲ್ಲಿ ಬಹುಮಟ್ಟಿಗೆ ಸುಧಾರಣೆಯಾಗಬಹುದೆಂದು ನನಗನ್ನಿಸುತ್ತಿದೆ. ಅದುದರಿಂದ ಅವುಗಳಲ್ಲಿ ಕೆಲವು ಮುಖ್ಯವಾದವುಗಳನ್ನು ಇಲ್ಲಿ ಜಾರಿಗೆ ತರಬೇಕೆಂಬ ಪ್ರಯತ್ನದಲ್ಲಿ ಇದ್ದೇವೆ. ನಾವು ಈ ವಿಚಾರದಲ್ಲಿ ಯಾರೂ ಸಂಶಯಪಡಬೇಕಾಗಿಲ್ಲ ಇಷ್ಟು ಮಾತನ್ನು ಈ ಸಂದರ್ಭದಲ್ಲಿ ತಿಳಿಸುವುದಕ್ಕೆ ಇಷ್ಟಪಡುತ್ತೇನೆ.

ಇನ್ನು ಕೆಲವರು ಶಾಲೆಗಳಲ್ಲಿ ಬೆಟರ್‌ಮೆಂಟ್ ಫೀಜನ್ನು ಕಲೆಕ್ಟ್ ಮಾಡುತ್ತಿದ್ದಾರೆ. ಅದರಿಂದ ಅನೇಕ ವಿದ್ಯಾರ್ಥಿಗಳಿಗೆ ತೊಂದರೆಯಾಗಿದೆ ಎಂದು ಹೇಳಿದ್ದಾರೆ ಅಂಥಾ ಹುಡುಗರಿಗಾಗಿ ಈಗ ಸಹಾಯ ಮಾಡುವುದಕ್ಕಾಗಿ ಸ್ಟೂಡೆಂಟ್ಸ್ ವೆಲ್ ಫೇರ್ ಫಂಡ್ ಎಂಬ ಒಂದು ಫಂಡನ್ನು ಮಾಡಿದೆ. ಯಾರು ಅಂಥ ಒಂದು ಅನಾನುಕೂಲ ಪರಿಸ್ಥಿತಿಯಲ್ಲಿದ್ದಾರೋ ಅವರು ಆ ಫಂಡಿಗೆ ಒಂದು ಅರ್ಜಿಯನ್ನು ಹಾಕಿಕೊಂಡರೆ ಅದರಿಂದ ಅವರಿಗೆ ಸಹಾಯ ಸಿಕ್ಕುತ್ತದೆ. ಇನ್ನು ಮುಂದಕ್ಕೆ ಅವರಿಗೆ ತೊಂದರೆಯಿರುವುದಿಲ್ಲ ಎಂದು ನಾನು ಈ ಸಂದರ್ಭದಲ್ಲಿ ತಿಳಿಸುವುದಕ್ಕೆ ಇಷ್ಟಪಡುತ್ತೇನೆ. ಇನ್ನು ಶ್ರೀಮಾನ್ ಸಿದ್ದವೀರಪ್ಪನವರು ಕಾಲೇಜಿನಲ್ಲಿ ಕೆಲಸ ಮಾಡುತ್ತಿರುವ ಕೆಲವು ಲೆಕ್ಚರರ್‌ಗಳ ಸರ್ವೀಸ್‌ನನ್ನು ರೆಗ್ಯುಲರೈಜ್ ಮಾಡತಕ್ಕ ವಿಚಾರ ಪ್ರಸ್ತಾಪ ಮಾಡಿದ್ದಾರೆ. ಆದರೆ ಆಗ ಯಾರನ್ನು ಆ ಕೆಲಸಗಳಿಗೆ ನೇಮಕ

ಮಾಡಿಕೊಳ್ಳಲಾಗಿತ್ತೋ ಅವರುಗಳಿಗೆ ಅಗತ್ಯವಾಗಿ ಬೇಕಾಗಿದ್ದ ಕ್ವಾಲಿಫಿಕೇಷನ್ ಇರಲಿಲ್ಲ. ಇನ್ನು ಕೆಲವರಿಗೆ ವಯಸ್ಸಾಗಿತ್ತು. ಈ ಬಗ್ಗೆ ಎಗ್ಸಾಮಿನ್ ಮಾಡಲು ಅವ್ಯವಹಾರವನ್ನು ಲಾ ಇಲಾಖೆಗೆ ಕಳುಹಿಸಲಾಗಿತ್ತು. ಅದನ್ನೆಲ್ಲಾ ಅವರು ಪರಿಶೀಲನೆ ಮಾಡಿ ಅವರು ಹಾಗೆ ರೆಗ್ಯುಲರೈಜ್ ಮಾಡುವುದಕ್ಕೆ ಬರುವುದಿಲ್ಲ ಎಂದು ಅಭಿಪ್ರಾಯವನ್ನು ಕೊಟ್ಟಿದ್ದಾರೆ.

ಶ್ರೀ ಎಚ್.ಸಿದ್ದವೀರಪ್ಪ- ಯಾವಾಗ ಅವರನ್ನು ಕೆಲಸಕ್ಕೆ ನೇಮಕ ಮಾಡಿಕೊಂಡರೋ ಆಗಲೇ ಅವರಿಗೆ ತಿಳಿಸಬೇಕಾಗಿತ್ತು. ಹಿಂದೇನೋ ಹಾಗೆ ನಡೆಯಿತು. ಆದರೆ ಈಗ ತಾವು ಹೊರಡಿಸಿರತಕ್ಕ ಆಜ್ಞೆಯಲ್ಲಿ ಏನು ಹೇಳಿದ್ದೀರಿ ಎಂದರೆ

"There is also no need now to go their age and qualifications at this length of time as it is presumed that the University looked into these points before their appointment"

ನೀವು ಈ ಪ್ರಶ್ನೆಯನ್ನು ಮಾನವೀಯ ದೃಷ್ಟಿಯಿಂದ ನೋಡಬೇಕಾದದ್ದು ಬಹು ಮುಖ್ಯವಾದ ವಿಷಯ.

ಶ್ರೀ ಕೆ.ವಿ. ಶಂಕರಗೌಢ- ಇದನ್ನು ಮಾನವೀಯತೆ ದೃಷ್ಟಿಯಿಂದ ನೋಡಬೇಕೆಂಬ ವಿಚಾರದಲ್ಲಿ ಸರ್ಕಾರದವರಿಗೂ ಮಾನ್ಯ ಸದಸ್ಯರಿಗೂ ಅಭಿಪ್ರಾಯಗಳಲ್ಲಿ ವ್ಯತ್ಯಾಸವಿಲ್ಲ. ಅದಾಗ್ಯೂ.....

**Sri H. Siddaveerappa-** I request you to direct your director to withdraw the order issued on 2nd April 1968. ಇಲ್ಲಿಯತನಕ ಅವರ ಸರ್ವೀಸ್ ಬೇಕಾಗಿಲ್ಲ. ಅಲ್ಲಿರತಕ್ಕವರೆಲ್ಲಾ ಅಮ್ಮಾಮ್ಮ ಎಂದರೆ 30- 40 ಜನಗಳಿದ್ದರೆ ಹೆಚ್ಚಾಯಿತು. ಇಂಥ ಶಂಕರಗೌಡರು ವಿದ್ಯಾಮಂತ್ರಿಗಳಾಗಿದ್ದ ಕಾಲದಲ್ಲಿ ನಮಗೆಲ್ಲಾ ಹೀಗಾಯಿತು ಎಂದು ಅವರು ನೊಂದುಕೊಂಡರೆ ಖಂಡಿತವಾಗಿ ನೀವು ರೌರವ ನರಕಕ್ಕೆ ಹೋಗಬೇಕದೀತು.

ಶ್ರೀ ಕೆ.ವಿ. ಶಂಕರಗೌಡ- ನಾನು ಲಾ ಇಲಾಖೆಯವರ ಸಲಹೆಯನ್ನು ಧಿಕ್ಕರಿಸಿ ಕೆಲಸ ಮಾಡಿದರೆ ಇದರಲ್ಲಿ ಇವರಿಗೇನೋ.........

**Sri H. Siddaveerappa-** If your Law Department is stupid, you must tell them to behave better.

**Sri S.R. Kanthi-** I wantto solve this question. that is why. I am saying, let my friend Sri Shankaragowda, sit with the law Secretary and Education Secretary and solve the problem.

ಶ್ರೀ ಕೆ.ವಿ. ಶಂಕರಗೌಡ- ಒಂದು ವೇಸ್ಟೆಡ್ ಇಂಟ್ರೆಸ್ಟಿದೆ ಎಂದು ಆಗಲೂ ಇಲ್ಲಿ ಕೆಲವರು ಆ ಬಗ್ಗೆಯೂ ಟೀಕೆ ಮಾಡಬಹುದು.

ಶ್ರೀ ಎಚ್.ಸಿದ್ಧವೀರಪ್ಪ- ಲಾ ಇಲಾಖೆಯವರು ತಿಳಿಸತಕ್ಕದ್ದು ಅವರ ಒಂದು ಅಭಿಪ್ರಾಯ ಮಾತ್ರ ಆದರೆ ಆಜ್ಞೆ ಮಾಡತಕ್ಕವರು ನೀವು.

you will have to do things which are human and proper in the circumstances of the case.

**Sri K.V. Shankara Gowda-** We will examine that question and explore the possibality of withdrawing this order.

ಇನ್ನು ಬೆಂಗಳೂರು ವಿಶ್ವವಿದ್ಯಾಲಯದ ಬಗ್ಗೆ ಮಾನ್ಯ ಶ್ರೀ ನಂಜೇಗೌಡರು ಕೆಲವು ಮಾತುಗಳನ್ನಾಡಿದ್ದಾರೆ. ಆದರೆ ಅವರು ಹೇಳಿರತಕ್ಕದನ್ನೆಲ್ಲಾ ಪೂರ್ತಿಯಾಗಿ ನಾನು ಸರಿಯಾಗಿದೆ ಎಂದು ಹೇಳಲಾರೆ. ಹಾಗೂ ಒಪ್ಪಲಾರೆ. ನಮ್ಮ ಇಡೀ ದೇಶಕ್ಕೆ ಬಹಳ ಪ್ರಖ್ಯಾತರಾದಂಥ ಒಬ್ಬ ಮೇಧಾವಿಗಳೂ ದಕ್ಷರೂ ಆದ ಉಪಕುಲಪತಿಗಳು ಅಲ್ಲಿಯ ಆಡಳಿತ ಮತ್ತು ಇತರೆ ಕೆಲಸ ಕಾರ್ಯಗಳನ್ನು ಬಹಳ ಚೆನ್ನಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲಿ ಯಾವ ಒಂದು ಹುದ್ದೆಯನ್ನು ಭರ್ತಿ ಮಾಡಬೇಕಾಗಿದ್ದರೂ ಅಲ್ಲಿ ಬೆಂಗಳೂರು ಯೂನಿವರ್ಸಿಟಿ ಆ್ಯಕ್ಟ್ ಎಂದು ಒಂದು ಆ್ಯಕ್ಟಿದೆ. ಅದರ ನಿಯಮಗಳನ್ನು ಅನುಸರಿಸಿ ಅಲ್ಲಿ ಅಪಾಯಿಂಟ್‌ಮೆಂಟುಗಳನ್ನು ಮಾಡಲಾಗುತ್ತದೆ. ಅಲ್ಲಿ ಒಂದು ಅಪಾಯಿಂಟ್‌ಮೆಂಟ್ ಬೋರ್ಡ್ ಎಂತಲೆ ಇದೆ. ಆ ಬೋರ್ಡಿನವರು ಬಹಳ ಎಚ್ಚರಿಕೆಯಿಂದ ಕೆಲಸಗಳನ್ನು ಮಾಡುತ್ತಿದ್ದಾರೆ. ಆ ವಿಚಾರದಲ್ಲಿ ಆಖೈರು ಒಪ್ಪಿಗೆಯನ್ನು ಕೊಡುವುದು ಬಿಡುವುದು ಸಿಂಡಿಕೇಟಿಗೆ ಸೇರಿದ್ದು. ಆದುದರಿಂದ ಅಲ್ಲಿ ನೇಮಕಮಾಡಿರತಕ್ಕದ್ದೆಲ್ಲಾ ಕಾನೂನು ಬದ್ಧವಾಗೇ ಇರುತ್ತದೆ ಎಂದು ನಾನು ತಿಳಿಸಲಿಕ್ಕೆ ಇಚ್ಛೆಪಡುತ್ತೇನೆ.

ಶ್ರೀ ಎಚ್.ಎನ್. ನಂಜೇಗೌಡ- ನಾನು ತಮ್ಮ ಛೇಂಬರಿಗೆ ಬಂದು ತಮಗೆ ಮನವರಿಕೆಯಾಗುವಂತೆ ಹೇಳಿದರೆ ಆಗಲಾದರೂ ತಾವು ಒಪ್ಪುತ್ತೀರಾ?

ಶ್ರೀ ಕೆ.ವಿ. ಶಂಕರಗೌಡ- ಅವರು ರೂಲ್ಸನ್ನು ಬಿಟ್ಟು ಅಪಾಯಿಂಟ್ ಮಾಡಿದ್ದಾರೆಂಬುದನ್ನು ನೀವು ರುಜುವಾತು ಮಾಡಿಕೊಟ್ಟರೆ, ದೃಡಪಡಿಸಿದರೆ ನಾನು ಅವರ ಬಗ್ಗೆ ಉಗ್ರಕ್ರಮಗಳನ್ನು ಕೈಗೊಳ್ಳುತ್ತೇನೆ.

ಇನ್ನು ಜನಪದ ಸಾಹಿತ್ಯ ಅಕಾಡಮಿ ವಿಚಾರದಲ್ಲಿ ಅನೇಕರು ಮಾತನಾಡಿದ್ದಾರೆ. ಸ್ವಾಮಿ ಅಧ್ಯಕ್ಷರೇ - ನಮ್ಮಲ್ಲಿ ಶೀಲ ಯಾವುದು? ಅಶ್ಲೀಲ ಯಾವುದು? ಎನ್ನತಕ್ಕ ಬಗ್ಗೆ ಅದನ್ನು ಇಲ್ಲಿಯವರೆಗೂ ತೀರ್ಮಾನ ಮಾಡುವುದಕ್ಕಾಗಿಲ್ಲ. ಕಾರಣ ಇದು ಅಂಥಾ ಒಂದು ಕಠಿಣವಾದ ಪ್ರಶ್ನೆ. ಈ ವಿಚಾರದಲ್ಲಿ ಆ ತಜ್ಞರಲ್ಲಿ ಕೂಡ ಇನ್ನೂ ಭಿನ್ನಾಭಿಪ್ರಾಯಗಳಿದ್ದೇ

ಇವೆ. ಹೀಗಾಗಿ ಇದು ಇನ್ನೂ ಹಾಗೇ ಒಂದು ಯಕ್ಷ ಪ್ರಶ್ನೆಯಾಗೇ ಉಳಿದಿದೆ ಆದುದರಿಂದ ಇದನ್ನು ತೀರ್ಮಾನ ಮಾಡುವುದು ಬಹಳ ಕಷ್ಟ. ಈ ದಿವಸ ಬೇಲೂರು ಹಳೇಬೀಡುಗಳಲ್ಲಿರುವ ಶಿಲಾ ಪ್ರತಿಮೆಗಳನ್ನು ನೋಡಿದಾಗ ಅವುಗಳನ್ನು ನಾವು ಅಶ್ಲೀಲ ಎಂದು ಹೇಳುವುದಾದರೆ ಅವೇಕೆ ಈ ದಿವಸ ಇಡೀ ಜಗದ್ವಿಖ್ಯಾತ ಶಿಲ್ಪಕಲಾ ಶಾಸ್ತ್ರಗಳು ಎಂದು ಹೆಸರು ಪಡೆದಿವೆ? ಅವುಗಳನ್ನು ನಾವು ಈ ದಿವಸ ಅಶ್ಲೀಲ ಎಂದು ಅಳಿಸುವುದಕ್ಕೆ ಸಾಧ್ಯವೇ? ಇದನ್ನು ಯಾರು ತಾನೆ ಒಪ್ಪುತ್ತಾರೆ? ನಮ್ಮ ಕ.ರಾ.ಕೃ ಅವರು ಬಹಳ ಶ್ರಮವಹಿಸಿ ಅನೇಕ ಹಳ್ಳಿಹಳ್ಳಿಗಳನ್ನು ತಿರುಗಿ ಈ ಕ್ಷೇತ್ರದಲ್ಲಿ ಬಹಳ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದ್ದಾರೆ. ನಮ್ಮ ನಾಡಿನ ಮಕ್ಕಳು ಕಂಡ ಕಹಿ ಸಿಹಿಗಳನ್ನು ನೇರವಾಗಿ ಹೃದಯದಿಂದ ಹೃದಯಕ್ಕೆ ಒಯ್ಯುತಕ್ಕಂಥ ಒಂದು ಅಪೂರ್ವ ಸಾಹಿತ್ಯ ಇದು. ಇಂಥಾ ಅಪೂರ್ವ ಸಾಹಿತ್ಯವನ್ನು ಕಾಪಾಡಿಕೊಂಡು ಬರಬೇಕಾದ್ದು ನಮ್ಮ ಆದ್ಯ ಕರ್ತವ್ಯ.

ಕ.ರಾ.ಕೃ ಅವರು ಹಳ್ಳಿ ಹಳ್ಳಿಗೂ ಹೋಗಿ ಜನರ ಹತ್ತಿರ ಅವರ ಸಂಪರ್ಕ ಬೆಳೆಸಿ ಈ ಕವನಗಳನ್ನು ಸಂಗ್ರಹಿಸಿದ್ದಾರೆ. ಹೀಗೆ ಬಹಳ ಶ್ರಮವಹಿಸಿ ಆ ಅಕಾಡೆಮಿಯವರು ಒಂದು ಸ್ತುತ್ಯವಾದ ಕೆಲಸಗಳನ್ನು ಮಾಡಿದ್ದಾರೆ. ಆದರೆ ಅವರ ಎರಡು ಪುಸ್ತಕಗಳಲ್ಲಿ ಮಾತ್ರ ಕೊಟ್ಟಿರತಕ್ಕ ಚಿತ್ರಗಳು ಅವು ಶೀಲವೋ- ಅಶ್ಲೀಲವೋ ಆ ವಿಚಾರ ಬೇರೆ ಇರಲಿ. ಆದರೆ ಆ ಚಿತ್ರಗಳನ್ನು ಆ ಪುಸ್ತಕಗಳಲ್ಲಿ ಕೊಡತಕ್ಕ ಅಗತ್ಯವಿರಲಿಲ್ಲ. ಎಂಬುದಾಗಿ ಒಂದು ಅಭಿಪ್ರಾಯವನ್ನು ಪಟ್ಟ ಕಾರಣ ಆ ಎರಡು ಪುಸ್ತಕಗಳನ್ನು ತಡೆಯಿಡಿಯಲಾಗಿತ್ತು. ಆ ಬಗ್ಗೆ ಇನ್ನೊಮ್ಮೆ ಸೂಕ್ತ ಪರಿಶೀಲನೆ ಮಾಡಿ ಅವುಗಳನ್ನು ಎಲ್ಲ ಲೈಬ್ರರಿಗಳೂ ಕೊಳ್ಳುವಂತೆ ಏರ್ಪಾಡನ್ನು ಮಾಡಲು ಪ್ರಯತ್ನಿಸಲಾಗುತ್ತದೆ.

ಇನ್ನು ಮಿಲ್ಕ್ ಪೌಡರ್ ಸಪ್ಲೈ ವಿಚಾರಕ್ಕೆ ಬಂದರೆ ಬಗ್ಗೆ ನಾನಾಗಲೇ ಸಾಕಷ್ಟು ವಿಚಾರಗಳನ್ನು ತಿಳಿಸಿರುವುದರಿಂದ ಇದರ ಬಗ್ಗೆ ನಾನಿನ್ನು ಹೆಚ್ಚು ಹೇಳುವುದಕ್ಕೆ ಇಷ್ಟಪಡುವುದಿಲ್ಲ.

ಶ್ರೀ ಡೆಮೂಲೋರವರು ಆಂಗ್ಲೋ ಇಂಡಿಯನ್ ಸ್ಕೂಲ್‌ಗಳ ಬಗ್ಗೆ ಒಂದು ವಿಚಾರವನ್ನು ಪ್ರಸ್ತಾಪಮಾಡಿದ್ದಾರೆ. ಆದರೆ ಆ ಸ್ಕೂಲುಗಳು ಆ ಗ್ರಾಂಟ್ ಇನ್ ಏಯಿಡ್ ಕೋಡಿನ ವ್ಯಾಪ್ತಿಗೆ ಒಳಪಟ್ಟಿಲ್ಲ. ಒಳಪಡದಿದ್ದರೆ ಆ ಗ್ರಾಂಟ್ ಬರುವುದಿಲ್ಲ. ಅದರ ವಿಚಾರ ಇಷ್ಟೆ. ನಾನು ಇಲ್ಲಿಯವರೆಗೂ ಮಾನ್ಯ ಸದಸ್ಯರುಗಳು ಏನೇನು ಪ್ರಶ್ನೆಗಳನೆತ್ತಿದ್ದರೋ ಅವುಗಳೆಲ್ಲ ಸಾಕಷ್ಟು ಸವಿಸ್ತಾರವಾಗಿ ಉತ್ತರಗಳನ್ನು ನೀಡಿದ್ದೇನೆ. ಎಲ್ಲಾ ಮಾನ್ಯ ಸದಸ್ಯರುಗಳೂ ಇಲ್ಲಿಯತನಕ ಇಷ್ಟು ಸಾವಧಾನದಿಂದ ನನ್ನ ಭಾಷಣವನ್ನು ಕೇಳಿದ್ದಕ್ಕಾಗಿ ಅವರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳನ್ನರ್ಪಿಸುತ್ತೇನೆ. ನಮ್ಮ ವಿರೋಧಪಕ್ಷದವರೂ ಕೂಡ ನನ್ನ ಮಾತುಗಳನ್ನು ಕೇಳಿ ಅದರಿಂದ ಅವರಿಗೂ ಸಾಕಷ್ಟು ತೃಪ್ತಿಯಾಗಿರುವುದರಿಂದ ಅವರೂ ಕೂಡ ಈಗ ಸಭೆಯ ಮುಂದೆ ಮಂಡಿಸಿರತಕ್ಕ ಡಿಮ್ಯಾಂಡುಗಳನ್ನು ಸರ್ವರೂ ಸರ್ವಾನುಮತಿಯಿಂದ ಅಂಗೀಕರಿಸಬೇಕೆಂದು ಪ್ರಾರ್ಥಿಸಿ ನಾನು ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಸಂಸತ್ತಿನಲ್ಲಿ ಕೆ.ವಿ. ಶಂಕರೇಗೌಡರು

(ಶಂಕರಗೌಡರಿಗೆ ದೆಹಲಿಗಿಂತ ಹಳ್ಳಿಗಳ ಬಗೆಗೆ ಹೆಚ್ಚು ಕಾಳಜಿ. ಅವರು ಸಂಸತ್ ಸದಸ್ಯರಾಗಿದ್ದಾಗ ತಮ್ಮ ಇಳಿವಯಸ್ಸಿನಲ್ಲಿ ಅನಾರೋಗ್ಯದಿಂದ ದೆಹಲಿಯ ವಾತಾವರಣಕ್ಕೆ ಹೊಂದಿಕೊಳ್ಳಲಾದೆ, ಬಹುತೇಕ ಅಧಿವೇಶನಗಳಲ್ಲಿ ಪಾಲ್ಗೊಳ್ಳುತ್ತಿರಲಿಲ್ಲ. ಯಾರಾದರೂ ಇನ್ನೂ ಅಧಿವೇಶನಕ್ಕೆ ಏಕೆ ಹೋಗಿಲ್ಲ ಎಂದು ಪ್ರಶ್ನಿಸಿದರೆ, ನಾನಲ್ಲಿ ಹೋಗಿ ಏನು ಮಾಡುವುದು? ಪ್ರತಿ ದಿನ 2-3 ಗಂಟೆಗಳ ಕಾಲ ಸದನದಲ್ಲಿ ಕಾಲ ಕಳೆಯಬಹುದು ಎಂದು ಉತ್ತರಿಸುತ್ತಿದ್ದರು. ನನಗೆ ದಿಲ್ಲಿಗಿಂತ ಹಳ್ಳಿಗಳೇ ನನಗೆ ಪ್ರಾಣ. ಹಳ್ಳಿಗರ ಸುಖ-ದುಃಖಗಳು ನನ್ನ ಸುಖ-ದುಖಃಗಳು ಎನ್ನುತ್ತಿದ್ದರು)

**ದಿನಾಂಕ 18-4-85 ರಂದು ಕೈಗಾರಿಕಾ ಇಲಾಖೆ ಬೇಡಿಕೆಗಳ ಮೇಲೆ ಕುರಿತು ಮಾಡಿದ ಭಾಷಣ**

**ಘನವೆತ್ತ ಸಭಾಧ್ಯಕ್ಷಿಣಿಯರೆ,**

ಬೃಹತ್ ಕೈಗಾರಿಕೆಗಳು ನನ್ನ ದೃಷ್ಟಿಯಲ್ಲಿ ಪೆಡಂಭೂತಗಳು. ಆ ಪೆಡಂಭೂತಗಳು ಮಾನವ ಭಕ್ಷಕರೆಂದು ಕೇಳಿದ್ದೇನೆ. ಅವು ವಾಸ್ತವವಾಗಿ ಅಸ್ತಿತ್ವದಲ್ಲಿದ್ದವೋ ಅಥವಾ ಕವಿ ಕಲ್ಪನೆಯ ಪ್ರಾಣಿಗಳೊ ಗೊತ್ತಿಲ್ಲ. ಅದೇನೆ ಇರಲಿ, ಅವು 20ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿವೆ ಎಂಬುದಂತು ನಿಜ. ಅವು ಮನುಷ್ಯ ರೂಪದಲಿಲ್ಲ. ಬೃಹತ್ ಕೈಗಾರಿಕೆಗಳ ರೂಪದಲ್ಲಿವೆ ಎಂದು ನಾವು ಬಲ್ಲವರಾಗಿದ್ದೇವೆ.

ಈ ಪೆಡಂಭೂತಗಳು ರಾಷ್ಟ್ರ ಶಕ್ತಿಯನ್ನು ಒದಗಿಸುತ್ತವೆ. ಈ ರಾಷ್ಟ್ರದ ಕೋಟ್ಯಾಂತರ ಜನ ಸಾಮಾನ್ಯರನ್ನು ನಿತ್ಯನುಂಕಾ ನೋಣೆಯುತ್ತಿವೆ. ಅಂತ ಸಾಮಾನ್ಯ ಜನ ವಿಶೇಷವಾಗಿ ಹಳ್ಳಿಗಾಡಿನಲ್ಲಿ, ಅಲ್ಪಪ್ರಮಾಣದಲ್ಲಿ ನಗರಗಳ ಕೊಳಚೆ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಸಮಾಜದ ಅವಶ್ಯಕತೆಗನುಗುಣವಾಗಿ ರಾಷ್ಟ್ರದ ಕೈಗಾರಿಕಾ ನೀತಿಯನ್ನು ರೂಪಿಸಬೇಕೆ ಹೊರತು, ಯಾವೊಬ್ಬ ವ್ಯಕ್ತಿಯ ಅಥವಾ ವ್ಯಕ್ತಿಗಳ ಗುಂಪಿನ ಚಾಪಲ್ಯಗಳನ್ನಾಗಲೀ, ಬಹುಭಕ್ಷಿತ್ವವನ್ನಾಗಲಿ ಇಂಗಿಸಲಿಲ್ಲವೆಂಬ ಗಾಂಧೀಜಿಯ ಅಮೃತವಾಣಿಯನ್ನು ಮಾನ್ಯ ಮಂತ್ರಿಗಳ ಗಮನಕ್ಕೆ ತರಲಿಚ್ಛಿಸುತ್ತೇನೆ. ಆ ವಾಣಿಯ ಅರ್ಥವನ್ನು ಸಂಪೂರ್ಣವಾಗಿ ಗ್ರಹಿಸಿದಾಗ, ದುಂದು ವೆಚ್ಚದ ಯೋಜನೆಗಳ ಬಗ್ಗೆ ಮಂತ್ರಿಗಳು ಪುನರಾಲೋಚನೆ ನಡೆಸಿಯಾರೆಂದು ನಂಬಿದ್ದೇನೆ. ಸರ್ಕಾರಿ ಹಾಗೂ ಖಾಸಗಿ ವಲಯದ ಬೃಹತ್ ಕೈಗಾರಿಕೆಗಳು, ನಮ್ಮ ಸಮಾಜದ ಉಳಿವಿಗೆ ಅವಶ್ಯಕವೆಂದು ಅಂಃಕರಣಪೂರಕವಾಗಿ ನಾನಿಂದು ಸ್ಪಷ್ಟಪಡಿಸುತ್ತಿದ್ದೇನೆ. ಭೋಗ ವಸ್ತುಗಳ ಉತ್ಪಾದನೆಯೇ ಹಲವು ಕೈಗಾರಿಕೆಗಳ ಗುರಿಯಗಿದೆ. ಆ ವಸ್ತುಗಳಂತು ಜನ ಸಾಮಾನ್ಯರಿಗೆ ಎಟಕುವಂತಿಲ್ಲ. ಅವು ಅವರಿಗೆ ಬೇಕಾಗಿಯೂ ಇಲ್ಲ. ಬಡವರ ಅವಶ್ಯಕತೆಗಳನ್ನು ನಿರ್ಲಕ್ಷಿಸಿ

ಶೇ. 20 ಭಾಗ ಜನರ ಭೋಗ ವಿಲಾಸಕ್ಕೋಸ್ಕರ ಅವುಗಳನ್ನು ಬಳಸಲಾಗುತ್ತಿದೆ. ಈ ಬಡ ದೇಶದಲ್ಲಿ ಅಂತಹ ಶೋಕಿಯ ಯೋಜನೆಗಳಿಗೆ ಖರ್ಚಾಗುತ್ತಿರುವ ಸಹಸ್ರ-ಸಹಸ್ರ ಕೋಟಿ ರೂಪಾಯಿಗಳು ವ್ಯರ್ಥವೆಂದೇ ; ಹೇಳಬೇಕಾಗಿದೆ. ಕೋಟಿ-ಕೋಟಿ ಜನ ಹಸಿವಿನಿಂದ ಸಾಯುತ್ತಿರುವಾಗ ಇಡೀ ಮಂದಿ ಭೋಗ ಜೀವನ ನಡೆಸುವುದು ಸರಿಯೇ? ಧರ್ಮ ಸಮ್ಮತವೇ? ದೇಶದಲ್ಲಿ ಅಜ್ಞಾನ ದಾರಿದ್ರ್ಯಗಳು ತಾಂಡವವಾಡುತ್ತಿರುವಾಗ ಸೌಂದರ್ಯ ವರ್ಧಕಗಳ ಅಥವಾ ಬಣ್ಣದ ದೂರದರ್ಶಕಗಳ ತಯಾರಿಕೆ ಸಾಧುವೆ?

ಸಾಮಾನ್ಯ ಜನರ ದೃಷ್ಟಿಯಿಂದ ತುರ್ತಾಗಿ ಕೈಗೊಳ್ಳಬೇಕಾದ ;ಆದ್ಯತೆಗಳನ್ನು ನಿರ್ಲಕ್ಷಿಸಿ, ದುಂದು ವೆಚ್ಚದಲ್ಲಿ ಆಸಕ್ತಿ ವಹಿಸುವುದು ತರವೇ?

ಮಾನ್ಯ ಮಂತ್ರಿಗಳು ಕೋಟ್ಯಾಂತರ ರೂಪಾಯಿ ಯೋಜನೆಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಅದರಲ್ಲೆಷ್ಟು ಪಾಲು ನತದೃಷ್ಟರ ಕಲ್ಯಾಣ ಯೋಜನೆಗಾಗಿ ಬಳಸಲಾಗುತ್ತದೆ? ಆ ಯೋಜನೆಗಳನ್ನು ಕಾರ್ಯಗತಗೊಳಿಸುವವರು ಯಾರು? ನನಗೆ ತಿಳಿದ ಮಟ್ಟಿಗೆ ಕೇಂದ್ರ ಖಾದಿ ಆಯೋಗವಿದೆ. ರಾಜ್ಯ ಮಟ್ಟದ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಗೆ ಕೇವಲ ಸಾಲದ ರೂಪದಲ್ಲಿ ವಿತರಣೆ ಮಾಡುವ ಸಲುವಾಗಿ 82 ಕೋಟಿ ರೂಪಾಯಿಗಳನ್ನು ಮಾತ್ರ ಕಾಯ್ದಿರಿಸುವಂತೆ ತೋರುತ್ತದೆ. ಬಡ್ಡಿಗೆ ಪ್ರತಿಯಾಗಿ 42 ಕೊಟಿ ರೂಪಾಯಿಗಳ ಸಹಾಯ ದ್ರವ್ಯವನ್ನು ಸಹ ಒದಗಿಸಲಾಗಿದೆ. ಸಂಬಳ ಸಾರಿಗೆಗಳಿಗಾಗಿ ಬೇರೊಂದು ಲೆಕ್ಕವು ಇದೆ. ಈ ಅಲ್ಪಧನದಿಂದ ಎಷ್ಟು ಬಡವರಿಗೆ ಅನುಕೂಲವಾಗುತ್ತದೆ. ಹೆಚ್ಚು ಹಣ ಒದಗಿಸದಿದ್ದರೆ, ಈ ಮಂಡಳಿಗಳು ಕುಂಟಿಕೊಂಡೇ ಸಾಗಬೇಕಾಗುತ್ತದೆ. ಸ್ವಂತ ಉದ್ಯೋಗದ ಯೋಜನೆಗಾಗಿ 65 ಕೊಟಿ ರೂಪಾಯಿಗಳನ್ನು ಪ್ರತ್ಯೇಕವಾಗಿ ತೆಗೆದಿಡಲಾಗಿದೆ. ಈ ಯೋಜನೆ ಎಸ್.ಎಸ್.ಎಲ್.ಸಿ ಯಲ್ಲಿ ತೇರ್ಗಡೆ ಹೊಂದಿದ ವಿದ್ಯಾಂವತ ನಿರುದ್ಯೋಗಿಗಳಿಗೆ ಮಾತ್ರ ಅನ್ವಯವಾಗಿದೆ. ಅವಿದ್ಯಾವಂತ ನಿರುದ್ಯೋಗಿಗಳ ಗತಿ ಏನು? ವಿದ್ಯಾವಂತರು ಅವಿದ್ಯಾವಂತರಿಗಿಂತ ಮೇಲೆನ್ನುವ ತಾರತಮ್ಯ ಭಾವನೆ ಹೇಯವಾದದ್ದು. ವಿದ್ಯಾವಂತರು ಸ್ವರ್ಗದಿಂದ, ಅವಿದ್ಯಾವಂತರು ನರಕದಿಂದ ಬಂದವರೆಂದು ತಿಳಿಯಲಾಗಿದೆಯೇ? ಹಳ್ಳಿಗಾಡಿನ ದರಿದ್ರರಿಗೂ ಅನುಕೂಲವಾಗುವಂತಹ ರೀತಿಯಲ್ಲಿ ಯೋಜನೆಗಳನ್ನು ತಯಾರಿಸಿ, ಅವುಗಳ ಅನುಷ್ಠಾನ ಕಾರ್ಯಗಳನ್ನು ಖಾದಿ ಮಂಡಳಿಗಳಿಗೆ ಒಪ್ಪಿಸಬೇಕೆಂದು ನನ್ನ ಸಲಹೆ.

ಖಾದಿ ಮತ್ತು ಗಾಂಧಿ ಸಮಾನಾರ್ಥದ ಪದಗಳು. ಒಂದನ್ನು ಬಿಟ್ಟು ಮತ್ತೊಂದಿಲ್ಲ. ಗಾಂಧೀಜಿ ಚರಕದಿಂದ ನೂಲದಿದ್ದ ದಿನವೇ ಇಲ್ಲ. ಅವರ ಪಾಲಿಗೆ ಅದು ಪೂಜೆಯಾಗಿತ್ತೆ ಹೊರತು ತಮಾಷೆಯಾಗಿರಲಿಲ್ಲ. ಚರಕ ನಿರುದ್ಯೋಗಹಾರಿ, ದಾರಿದ್ರ್ಯ ನಿರ್ಮೂಲನದ ದಾರಿ ಎಂಬ ಸತ್ಯ ಅವರಿಗೆ ಗೊತ್ತಿತ್ತು. ಅದು ಬದುಕಿನ ಪವಿತ್ರ ಸಂಕೇತ. ಹಿಂಸೆ, ಅಸತ್ಯ, ಅಜ್ಞಾನ, ದಾರಿದ್ರ್ಯಗಳನ್ನು ನಾಶಗೊಳಿಸುವ ಉಪಕರಣ. ಖಾದಿ, ಚರಕಗಳನ್ನು ಮರೆತಾಗ ದೇಶ ಅಪಾಯಕ್ಕೀಡಾಗುತ್ತದೆಂಬ ಸಂಗತಿಯನ್ನು ಈ ಸದನ ಮರೆಯಬಾರದು.

ಇಂದಿನ ದಿನಗಳಲ್ಲಿ ಚರಕದಿಂದ ನೂಲು ತೆಗೆಯುವ ಹುಡುಗಿ ದಿನಕ್ಕೆ ನಾಲ್ಕು ರೂಪಾಯಿಗಳಿಸುತ್ತಾಳೆ. ಈ ತುಟ್ಟಿಯ ದಿನಗಳಲ್ಲಿ ಆ ಹಣದಿಂದ ಅವಳು ತನ್ನ ಕನಿಷ್ಠ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾಧ್ಯವೇ? ಆಕಾಶವನ್ನು ಗೆಲ್ಲಲು ಹೊರಟಿರುವ ನಮ್ಮ ವಿಜ್ಞಾನಿಗಳು ಚರಕದ ಸಾಮರ್ಥ್ಯವನ್ನು ಹೆಚ್ಚಿಸಬಾರದೇಕೆ? ಚರಕ ನಮ್ಮ ಹಣದ ಚೀಲವನ್ನು ಕತ್ತರಿಸುವ ಸಂಭವವಿರುವುದರಿಂದ ಈ ದಿಶೆಯಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಅಡ್ಡ ಬರುತ್ತವೆಂದು ತೋರುತ್ತದೆ. ಅದೇನೆ ಇರಲಿ, ಈ ಸಮಸ್ಯೆಯನ್ನು ವ್ಯವಹಾರದ ದೃಷ್ಟಿಯಿಂದಲೂ ಪರೀಕ್ಷಿಸಬೇಕಾಗಿದೆ. ಬಾಳಿಕೆ ಹಾಗೂ ಆಕರ್ಷಣೆಯ ದೃಷ್ಟಿಯಿಂದ ಹತ್ತಿಯ ನೂಲಿನೊಡನೆ ಪಾಲಿಸ್ಟರ್ ನೂಲನ್ನು ಸೇರಿಸಿ ಖಾದಿಯ ರೂಪ-ಸ್ವರೂಪಗಳನ್ನು ಬದಲಾಯಿಸಬಹುದೆಂದು ತೋರುತ್ತದೆ. ಇಂತಹ ವ್ಯತ್ಯಾಸಗಳಿಗೆ ಗಾಂಧೀಜಿ ಸಹ ವಿರೋಧ ವ್ಯಕ್ತಪಡಿಸುತ್ತಿರಲಿಲ್ಲವೆಂದು ಅವರ ವಾದವನ್ನು ಗ್ರಹಿಸಿದವರಿಗೆ ಮನದಟ್ಟಾಗುತ್ತದೆ. ಅವರು ಹಠಮಾರಿಯಲ್ಲ, ಅವರು ತತ್ವವನ್ನು ನೀರುಗೊಳಿಸುತ್ತಿರಲಿಲ್ಲವೇ ಹೊರತು ಸಣ್ಣ ಪುಟ್ಟ ಹೊಂದಾಣಿಕೆಗಳು ಬೇಡವೆಂದವರಲ್ಲ. ಕಾಲಕ್ಕೆ ತಕ್ಕಂತೆ ವ್ಯತ್ಯಾಸಗಳು ಅನಿವಾರ್ಯತೆಯೆಂಬುದನ್ನವರು ಬಲ್ಲವರಾಗಿದ್ದರು. ಆದ್ದರಿಂದ ನಾನು ಸೂಚಿಸಿರುವ ಬದಲಾವಣೆ ಗಾಂಧಿ ಸಿದ್ಧಾಂತಕ್ಕೆ ವ್ಯತಿರಿಕ್ತವಲ್ಲವೆಂದೇ ನನ್ನ ನಂಬಿಕೆ. ಈ ಬದಲಾವಣೆಯಿಂದ ನೂಲುವ ಹುಡುಗಿಯರಿಗೆ ದಿನಕ್ಕೆ 10-12 ರೂಪಾಯಿ ಕೂಲಿ ಸಿಗುತ್ತದೆ. ಮಂಡಳಿಗಳು ನಿರಂತರವಾದ ಸಂಶೋಧನೆಯಲ್ಲಿ ತೊಡಗಿ, ಮೇಲಿಂದ ಮೇಲೆ ಖಾದಿ ತಂತ್ರವನ್ನು ನವೀಕರಿಸುತ್ತಾ, ಅನ್ಯದಿಕ್ಕುಗಳಿಂದ ಬರುವ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಅವು ಸಾಲ ಕೊಡುವ ಮೇಳಗಳಾಗದೆ, ಜನರ ನಿರುದ್ಯೋಗವನ್ನು ನಿರ್ಮೂಲನ ಮಾಡಿ ಬಡತನವನ್ನು ತೊಡೆಯುವ ಸಶಕ್ತ ಸಾಧನಗಳಾಗಬೇಕು. ತ್ಯಾಗ ಮತ್ತು ಸಮರ್ಪಣಾ ಮನೋಭಾವಗಳಿಂದ ಮಾತ್ರ ಇಂತಹ ಕ್ರಾಂತಿಕಾರಕ ಕಾರ್ಯ ಸಾಧನೆ ಸಾಧ್ಯ. ಸಾಕ್ಷರೀಕರಣಕ್ಕೂ ಖಾದಿ ಯೋಜನೆಯನ್ನು ಬಳಸಿಕೊಳ್ಳಬಹುದಾಗಿದೆ. ಸೇವಾಮನೋಭಾವದ ಯುವಕರು ಅಲ್ಪ ಸಂಭಾವನೆಯನ್ನು ಪಡೆದು, ಖಾದಿ ಕೆಲಸಗಾರರೊಡನೆ ಮಿಳಿತವಾಗಿ ಅವರಿಗೆ ಜ್ಞಾನ-ದಾನ ಮಾಡಬಹುದು.

ಹತ್ತಿ-ಪಾಲಿಸ್ಟರ್ ಮಿಶ್ರಣದಿಂದ ತಯಾರಾದ ಬಟ್ಟೆ ನಗರದ ಜನರಿಗೂ ಹಿಡಿಸುತ್ತವೆ ಎಂದು ನನ್ನ ನಂಬಿದೆ. ನೊಂದ ಹೃದಯದಿಂದ ಖಾದಿಯ ಬಗ್ಗೆ ಈ ಮಟ್ಟಿಗೆ ವಾದಿಸಬೇಕಾಗಿದೆ. ಮಾನ್ಯಮಂತ್ರಿಗಳು ಗಾಂಧೀಜಿಯ ಹೆಸರಿನಲ್ಲಿ ನನ್ನ ಮಾತಿಗೆ ಬೆಲೆ ಕೊಡುತ್ತಾರೆಂದು ನಂಬಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# 1986ರ ಪಾರ್ಲಿಮೆಂಟ್ ಬಜೆಟ್ ಅಧಿವೇಶನದಲ್ಲಿ ಹೊಸ ಶಿಕ್ಷಣ ನೀತಿ ಕುರಿತು ಮಾಡಿದ ಭಾಷಣ

ಮಾನ್ಯ ಸಭಾಧ್ಯಕ್ಷರೆ,

ಹೊಸ ಶಿಕ್ಷಣ ನೀತಿಯು ಬಗ್ಗೆ ಸರ್ಕಾರ ಮಂಡಿಸಿರುವ ದಾಖಲೆಗಳು ಸಮಂಜಸವಾಗಿದೆ. ಆದರೆ ಅವುಗಳಲ್ಲಿ ಕೆಲವು ದೋಷಗಳಿವೆ ಎಂಬುದನ್ನು ತಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ, ಸ್ವಾತಂತ್ರ್ಯಾನಂತರ ಶಿಕ್ಷಣ ಕ್ಷೇತ್ರದಲ್ಲಿ ಗಮನಾರ್ಹ ಪ್ರಗತಿ ಆಗಿಲ್ಲ. ಪ್ರಮಾಣದ ದೃಷ್ಟಿಯಿಂದ ಪ್ರಗತಿ ಕಾಣುವುದಾದರೂ, ಗುಣದ ದೃಷ್ಟಿಯಿಂದ ಯಾರಿಗಾದರೂ ಅತೃಪ್ತಿಯಾಗುವುದರಲ್ಲಿ ಸಂಶಯವಿಲ್ಲ.

ಹಿಂದೆ ನಾಲ್ಕು ವರ್ಷಗಳ ಪ್ರಾಥಮಿಕ ಶಿಕ್ಷಣ ಮತ್ತು 3 ವರ್ಷಗಳ ಲೋಯರ್ ಸೆಕೆಂಡರಿ ಶಿಕ್ಷಣ ಇರುತ್ತಿತ್ತು. ಈ ದಾಖಲೆಯಲ್ಲಿ 5 ವರ್ಷಗಳ ಪ್ರಾಥಮಿಕ ಶಿಕ್ಷಣ ಮತ್ತು 3 ವರ್ಷಗಳ ಲೋಯರ್ ಸೆಕೆಂಡರಿ ಶಿಕ್ಷಣದಿಂದ ಒಂದು ವರ್ಷವನ್ನು ತೆಗೆದು ಹಾಕಿದ್ದಾರೆ. ಇದನ್ನು ನಾನು ಮೆಚ್ಚಲಾರೆ. ಆದ್ದರಿಂದ ಈಗಿರುವಂತೆ 3 ವರ್ಷಗಳ ಹೈಯರ್ ಸೆಕೆಂಡರಿ ಶಿಕ್ಷಣವನ್ನು ಉಳಿಸಿಕೊಳ್ಳಬೇಕೆಂದು ನಾನು ನರಸಿಂಹರಾವ್‌ರವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಹೈಯರ್ ಸೆಕೆಂಡರಿ ಶಿಕ್ಷಣ ಹಂತದಲ್ಲಿ ಶಾಲೆ ಬಿಡುವವರ ಶೇಕಡ ಪ್ರಮಾಣ ಅತಿ ಹೆಚ್ಚು. ಆದ್ದರಿಂದ 3 ವರ್ಷಗಳ ಹೈಯರ್ ಸೆಕೆಂಡರಿ ಶಿಕ್ಷಣ ಬರುವುದು ಉತ್ತಮ. ಆ ಶಿಕ್ಷಣದ ಅವಧಿ 3 ವರ್ಷಗಳೇ ಇರಲಿ. ಇಂದು ನಮ್ಮ ದೇಶಕ್ಕೆ ಬೇಕಾಗಿರುವುದು ಔಪಚಾರಿಕ ಶಿಕ್ಷಣವಲ್ಲ, ಯುವಜನರು ಉತ್ತಮ ಬದುಕಿನ ಕಲೆಯನ್ನು ಕಲಿಯಬೇಕು. ವ್ಯಕ್ತಿಯು ಮಾನವೀಯ ಗುಣಗಳನ್ನು ಅನುಸರಿಸುತ್ತಿರುವಂತಾಗಬೇಕು. ಆತ ಕಲಿಯುವುದು ನನಗಾಗಿ ಮಾತ್ರವಲ್ಲ, ದೇಶಕ್ಕೆ ಮತ್ತು ಇಡೀ ಜಗತ್ತಿಗೆ ಎಂದಾಗಬೇಕು. ಆಧ್ಯಾತ್ಮಿಕ ಶಿಕ್ಷಣ ಅಗತ್ಯ ನಿಜ. ಆದರೆ ಅದನ್ನು ಸಾಧಿಸುವುದು ಸುಲಭ ಸಾಧ್ಯವೇನಲ್ಲ ಎಂದೆ ನನ್ನ ಅಭಿಪ್ರಾಯ.

1968ರಲ್ಲಿ ತ್ರಿಭಾಷಾ ಸೂತ್ರವನ್ನು ಪ್ರಕಟಿಸಲಾಯಿತು. ಕೆಲವು ರಾಜ್ಯಗಳಷ್ಟೇ ಈ ಸೂತ್ರಗಳನ್ನು ಪ್ರಾಮಾಣಿಕವಾಗಿ ಅನುಸರಿಸಿದವು. ಉಳಿದವು ಇದನ್ನು ಅನುಸರಿಸಲಿಲ್ಲ. ಈ ತ್ರಿಭಾಷಾ ಸೂತ್ರವನ್ನು ಅಳವಡಿಸಿಕೊಳ್ಳುವಲ್ಲಿ ಏಕರೂಪತೆ ಇರಲಿಲ್ಲವೆಂದು ಹೇಳಲು ನನಗೆ ವಿಷಾಧವಾಗುತ್ತದೆ. ಎಲ್ಲಾ ರಾಜ್ಯಗಳು ಈ ಸೂತ್ರವನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಮಾಡಲು ಭಾರತ ಸರ್ಕಾರ ವಿಶೇಷ ಕ್ರಮ ಕೈಗೊಳ್ಳಬೇಕಾಗಿತ್ತು. ಆದರೆ ಅದು ಹಾಗೆ ಮಾಡಲಿಲ್ಲ. ನನ್ನ ದೃಷ್ಟಿಯಲ್ಲಿ ಇದು ಕೇಂದ್ರ ಸರ್ಕಾರದ ಗಂಭೀರ ವೈಫಲ್ಯ. ಇಡೀ ರಾಷ್ಟ್ರಕ್ಕೆ ಅನ್ವಯಿಸುವ ನೀತಿಯಂತಹ ಮಹತ್ವದ ವಿಷಯದಲ್ಲಿ ಇನ್ನು ಮುಂದಾದರೂ ಭಾರತ ಸರ್ಕಾರ ತೀವ್ರ ಎಚ್ಚರಿಕೆ ವಹಿಸುವುದೆಂದು ನಾನು ಆಶಿಸುವೆ.

ರಾಜ್ಯ ಭಾಷೆ ಮೂಲಕವೇ ಶಿಕ್ಷಣ ನೀಡಬೇಕೆಂದು ನಾನು ಕೇಂದ್ರ ಸರ್ಕಾರವನ್ನು ಪ್ರಾರ್ಥಿಸುತ್ತೇನೆ. ವಿದೇಶಿ ಭಾಷೆಯಲ್ಲಿ ಶಿಕ್ಷಣ ನೀಡುವುದು ಸರಿಯಲ್ಲ. ಅದನ್ನು ಇನ್ನು ಮುಂದೆ ಪ್ರೋತ್ಸಾಹಿಸಬಾರದು. ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಉಳಿಸಿಕೊಳ್ಳಲು ಕೆಲವೊಂದು ಪಟ್ಟಭದ್ರ ಹಿತಾಸಕ್ತಿಗಳು ಪ್ರಯತ್ನಿಸುತ್ತಲೇ ಇವೆ. ಇದೇ ಧೋರಣೆ ಮುಂದುವರೆದಲ್ಲಿ ನಮ್ಮ ದೇಶದ 5 ಲಕ್ಷ ಹಳ್ಳಿಗಳಲ್ಲಿನ ಮಕ್ಕಳ ಭವಿಷ್ಯ ಭಯಂಕರವಾಗುವುದಷ್ಟೇ ಅಲ್ಲ, ಅದು ಅವರನ್ನು ಸಂಪೂರ್ಣ ಅವನತಿಯತ್ತ ಒಯ್ಯುತ್ತದೆ. ಅವರ ಜೀವನ ಕೃತಕವಾಗಿ ನಿರುಪಯುಕ್ತವಾಗುತ್ತದೆ. ಗ್ರಾಮೀಣ ಮಕ್ಕಳು ಸೇರಿದಂತೆ ಸಮಾಜದ ಎಲ್ಲಾ ವರ್ಗಗಳ ಮಕ್ಕಳ ಉಜ್ವಲ ಭವಿಷ್ಯದ ಬಗ್ಗೆ ಕೇಂದ್ರಕ್ಕೆ ಏನಾದರೂ ಆಸಕ್ತಿ ಇದ್ದಲ್ಲಿ, ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿ ರಾಜ್ಯ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕೆಂದು ನಾನು ಪುನರುಚ್ಚರಿಸುತ್ತೇನೆ. ಇದರಿಂದ ಜನರನ್ನು ಸಂಪರ್ಕಿಸುವ ವಿಧಾನ ಸುಲಭವಷ್ಟೇ ಅಲ್ಲ ಅನುಕೂಲಕರವು ಹೌದು. ನಮ್ಮ ದೇಶದಲ್ಲಿ ಎಲ್ಲಾ ಕಾಲಕ್ಕೂ ಇಂಗ್ಲೀಷ್ ಭಾಷೆಯನ್ನು ಬಳಸಬಾರದು. ಬ್ರಿಟೀಷರ ನಿರ್ಗಮನದ ನಂತರವೂ ಇಂಗ್ಲೀಷ್ ಭಾಷೆ ನಮ್ಮೊಡನೆ ಇರುವುದು ಖಂಡನೀಯ. ಇಂಗ್ಲೀಷ್ ಭಾಷೆಯನ್ನು ಒಂದು ಐಚ್ಛಿಕ ಭಾಷೆಯನ್ನಾಗಿ ಅಧ್ಯಯನ ಮಾಡಬಹುದು. ಆದರೆ ಶಿಕ್ಷಣ ಕ್ಷೇತ್ರದಲ್ಲಿ ಎಂದೆಂದಿಗೂ ಅದನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸಬಾರದು. ಹಿಂದಿ ನಮ್ಮ ದೇಶದ ರಾಷ್ಟ್ರೀಯ ಹಾಗೂ ಸಂಪರ್ಕ ಭಾಷೆಯಾಗಬಹುದು. ಅದು ಸಂಪರ್ಕ ಭಾಷೆಯಾಗುವುದಕ್ಕೆ ದೇಶದ ಕೆಲವು ಭಾಗಗಳಲ್ಲಿ ವಿರೋಧವಿದೆ. ಹಿಂದಿ ಸಂಪರ್ಕ ಭಾಷೆಯಾದರೆ ಅಲ್ಲಿ ಸಮಾನ ಅವಕಾಶಗಳಿರುವುದಿಲ್ಲ ಎಂದೇ ಅವರ ಭಾವನೆ. ಇದಕ್ಕೆ ಉತ್ತರ ಭಾರತದ ಕೆಲವೊಂದು ಹಿಂದಿ ಅಂಧಾಭಿಮಾನಿಗಳೇ ಕಾರಣ. ಅವರು ಹಿಂದಿಯನ್ನು ಇತರರ ಮೇಲೆ ಹೇರ ಬಯಸುತ್ತಾರೆ. ಇದು ಸರಿಯಾದ ನೀತಿಯಲ್ಲ, ಪರಸ್ಪರ ತಿಳುವಳಿಕೆಯಿಂದ ರಚನಾತ್ಮಕ ಧೋರಣೆ ತಳೆದಲ್ಲಿ ಹಿಂದಿ ನಮ್ಮ ದೇಶದ ಅಧಿಕೃತ ಸಂಪರ್ಕ ಭಾಷೆಯಾಗಿ ಅಭಿವೃದ್ಧಿ ಹೊಂದಲು ಮತ್ತು ಮುಂದುವರಿಯಲು ಯಾವುದೇ ತೊಂದರೆ ಇಲ್ಲ ಎಂಬುದೇ ನನ್ನ ಅಭಿಪ್ರಾಯ. ಇಷ್ಟು ಹೇಳಿ ನನಗೆ ಮಾತನಾಡಲು ಅವಕಾಶ ನೀಡಿದ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣ ಮುಗಿಸುತ್ತೇನೆ.

# ಭಾಗ - 3

## ಸದನದಲ್ಲಿ ಶ್ರದ್ಧಾಂಜಲಿ

## ಶಂಕರಗೌಡ: ಕೆಲವು ಅಭಿಪ್ರಾಯಗಳು

## ಭಾವ ಚಿತ್ರ ಸಂಪುಟ

# ಕೆ.ವಿ. ಶಂಕರಗೌಡರಿಗೆ ಸದನದಲ್ಲಿ ಶ್ರದ್ಧಾಂಜಲಿ

15-3-1990

ಅಧ್ಯಕ್ಷರು :- (ಶ್ರೀ ಎಸ್.ಎಂ. ಕೃಷ್ಣ) ಅವರ ಪೀಠದಲ್ಲಿದ್ದರು.

2. ಸದಸ್ಯರಿಂದ ಪ್ರಮಾಣ ವಚನ ಅಥವಾ ಪ್ರತಿಜ್ಞಾ ವಚನ ಸ್ವೀಕಾರ

1. ಪ್ರೊ. ಎಂ.ಡಿ. ನಂಜುಂಡಸ್ವಾಮಿ.

2. ಶ್ರೀ ರಾಮಲಿಂಗರೆಡ್ಡಿ.

3. ಶ್ರೀ ಕೆ.ಹೆಚ್. ಕುರುಡಗಿ,

ಮೇಲ್ಕಾಣಿಸಿದ ಸದಸ್ಯರು ಪ್ರಮಾಣವಚನ ಸ್ವೀಕರಿಸಿದರು)

ಸಂತಾಪ ಸೂಚಕ ನಿರ್ಣಯ

ಅಧ್ಯಕ್ಷರು :- ವಿಧಾನ ಸಭೆಯ ಮಾಜಿ ಸದಸ್ಯರೂ ವಿದ್ಯಾ ಸಚಿವರೂ ಆಗಿದ್ದ ಶ್ರೀ ಕೆ.ವಿ. ಗೌಡ ಅವರು ಇದೇ ಮಾರ್ಚ್ 4 ರಂದು ನಿಧನರಾದ ಸುದ್ದಿಯನ್ನು ಸಭೆಯ ಗಮನ್ನಕ ಅತ್ಯಂತ ವಿಷಾದದಿಂದ ತರುತ್ತಿದ್ದೇನೆ. ಶ್ರೀಯುತ ಶಂಕರಗೌಡರು1949 ರಿಂದ 1950ರ ವರೆಗೆ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರಾಗಿ, 1950 ರಿಂದ 53 ರವರೆಗೆ ಮೊದಲನೇಯ ವಿಧಾನ ಸಭೆಯ ಸದಸ್ಯರಾಗಿ ಸಲ್ಲಿಸಿದ ಸೇವೆ ಅವಿಸ್ಮರಣೀಯ. ಶ್ರೀಯುತರು 1966ರ ವರೆಗೆ ಮೇಲ್ಮನೆಯ ಸದಸ್ಯರಾಗಿಯೂ, ಶಿಕ್ಷಣ ಸಚಿವರಾಗಿಯೂ ರಾಜ್ಯಕ್ಕೆ ಸಲ್ಲಿಸಿದ ಸೇವೆ ಮಹತ್ತರವಾದದ್ದು. 8ನೇ ಲೋಕ ಸಭೆಯ ಸದಸ್ಯರೂ ಆಗಿದ್ದ ಮಾನ್ಯರು ಶಿಕ್ಷಣ ತಜ್ಞರು, ಸಾಹಿತ್ಯಾಭಿಮಾನಿಗಳೂ ಆಗಿದ್ದುದೇ ಅಲ್ಲದೇ ಮಂಡ್ಯ ಜಿಲ್ಲೆಗೆ ಅವರು ಮಾಡಿರುವ ಸೇವೆ ಚಿರವಾಗಿ ನಿಲ್ಲುವಂತಾದ್ದು.

ವಿಧಾನ ಸಭೆಯ ಮಾಜಿ ಸದಸ್ಯ ಗ್ರೇಸ್ ಥಕ್ಕರ್ ಅವರು 28ನೇ ಜನವರಿ 1990 ರಂದು ನಿಧನರಾದುದನ್ನು ಅತ್ಯಂತ ವಿಷಾದದಿಂದ ತಿಳಿಸುತ್ತೇನೆ. ಶ್ರೀಮತಿಯವರು ಎರಡನೆಯ ಹಾಗೂ ಮೂರನೇಯ ವಿಧಾನ ಸಭೆಯ ಸದಸ್ಯೆಯಾಗಿಯೂ ಉಪ ಶಿಕ್ಷಣ ಸಚಿವೆಯಾಗಿಯೂ ಮಹತ್ತರ ಸೇವೆಯನ್ನು ಸಲ್ಲಿಸಿರುತ್ತಾರೆ.

ವಿಧಾನ ಸಭೆಯ ಮಾಜಿ ಸದಸ್ಯ ವಯೋವೃದ್ಧರಾದ ಶ್ರೀ ಎಂ.ಆರ್. ಪಟ್ಟಣಶೆಟ್ಟಿಯವರು ಫೆಬ್ರವರಿ 14ನೇ ದಿನಾಂಕದಂದು ನಿಧನರಾದರೆಂದು ತಿಳಿಸಲು ವಿಷಾಧಿಸುತ್ತೇನೆ. ಶ್ರೀಯುತರು ಮುಂಬೈ ವಿಧಾನ ಸಭೆಯ ಸದಸ್ಯರಾಗಿದ್ದುದು ಅಲ್ಲದೇ

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ದಿವಂಗತರು ಮೊದಲನೆಯ, ಎರಡನೆಯ ಹಾಗೂ ಮೂರನೆಯ ವಿಧಾನ ಸಭೆಯ ಸದಸ್ಯರಾಗಿ ಮಹತ್ತರ ಸೇವೆಯನ್ನು ಸಲ್ಲಿಸಿರುತ್ತಾರೆ.

ಕಡೆಯದಾಗಿ ರಾಜ್ಯ ವಾಯು ಯಾನದ ಇತಿಹಾಸದಲ್ಲೇ ಫೆಬ್ರವರಿ 14 ಅತ್ಯಂತ ಕರಾಳ ದಿನ. ಈ ದುರಂತದಲ್ಲಿ ಮೃತರಾದವರ ಕುಟುಂಬಗಳಿಗೆ ಸದನ ತನ್ನ ತೀವ್ರ ಅನುತಾಪವನ್ನು ವ್ಯಕ್ತಪಡಿಸುತ್ತದೆ.

ಶ್ರೀ ವೀರೇಂದ್ರ ಪಾಟೀಲ್ (ಮುಖ್ಯ ಮಂತ್ರಿಗಳು) :– ಮಾನ್ಯ ಸಭಾಧ್ಯಕ್ಷರೆ, ದಿವಂಗತ ಕೆ.ವಿ. ಶಂಕರಗೌಡರು ನನ್ನ ಹಳೆಯ ಗೆಳೆಯರು. ಶ್ರೀಮಾನ್ ನಿಜಲಿಂಗಪ್ಪನವರ ಮುಂತ್ರಿಮಂಡಲದಲ್ಲಿ ನಾವೀಬ್ಬರು ಮಂತ್ರಿಗಳಾಗಿ ಒಂದೇ ಕಡೆ ಕೆಲಸ ಮಾಡಿದ್ದೇವೆ. ನಮ್ಮ ಮನೆಗಳು ಅಂದರೆ ನಿವಾಸ ಸ್ಥಳಗಳು ಕೂಡ ಒಂದೇ ಕಡೆ ಇದ್ದವು, ಅವರು ಮಹಡಿಯ ಮೇಲ್ಮನೆಯಲ್ಲಿದ್ದರೆ, ನಾನು ಕೆಳಗಡೆಯ ಮನೆಯಲ್ಲಿ ವಾಸವಾಗಿದ್ದೆ. ನಂತರ, 1968ರಲ್ಲಿ ನಾನು ಮುಖ್ಯ ಮಂತ್ರಿಯಾದ ಮೇಲೆ ಅವರು ನನ್ನ ಮಂತ್ರಿ ಮಂಡಲದಲ್ಲಿ ಶಿಕ್ಷಣ ಖಾತೆಯ ಮಂತ್ರಿಗಳಾಗಿ ಮುಂದುವರೆದರು. ದಿವಂಗತ ಶಂಕರಗೌಡರ ಬಗ್ಗೆ ಎಷ್ಟು ಹೇಳಿದರೂ ಕಡಿಮೆ ಎಂದು ನಾನು ತಿಳಿದುಕೊಂಡಿದ್ದೇನೆ. ಅವರು ಒಳ್ಳೆಯ ಸಾಹಿತಿಗಳು, ಒಳ್ಳೆಯ ವಾಗ್ಮಿಗಳು ಮತ್ತು ವಿಶೇಷವಾಗಿ ಸಹಕಾರಿ ಕ್ಷೇತ್ರದಲ್ಲಿ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಅಪ್ರತಿಮವಾದ ಸೇವೆಯನ್ನು ಸಲ್ಲಿಸಿದ್ದಾರೆ. ಹೆಚ್ಚಾಗಿ ಮಂಡ್ಯ ಜಿಲ್ಲೆಯಲ್ಲಿ ಪ್ರತಿಯೊಬ್ಬರೂ ಸ್ಮರಿಸುವಂಥ ಸೇವೆಯನ್ನು ಮಾಡಿದ್ದಾರೆ. ಇನ್ನು ಅವರ ಸ್ವಭಾವ ಎಂದರೆ ಅವರು ಬಹಳ ನಿಷ್ಠುರ ವಾದಿಗಳು. ಇದ್ದುದನ್ನು ಖಂಡಿತವಾಗಿ ಹೇಳುತ್ತಿದ್ದರು. ಅವರ ಮನಸ್ಸಿಗೆ ಯಾವುದಾದರೂ ಒಂದು ವಿಷಯ ಹಿಡಿಸದೇ ಹೋದರೆ ಅವರು ಯಾವುದೇ ಪಾರ್ಟಿ, ಪಕ್ಷ, ಆ ದೃಷ್ಟಿಯಿಂದ ಹೋಗುತ್ತಾ ಇರಲಿಲ್ಲ. ಅವರು ಸ್ಪಷ್ಟವಾಗಿ ತಮ್ಮ ವಿಚಾರವನ್ನು ಹೇಳುತ್ತಿದ್ದರು. ತಮ್ಮ ನಿಲುವು ಏನು ಎಂದು ಸ್ಪಷ್ಟ ಮಾಡುತ್ತಿದ್ದರು. ಮತ್ತು ಅದೇ ಸಮಯದಲ್ಲಿ ಪಕ್ಷದ ಶಿಸ್ತಿಗೂ ಕೂಡ ಅಷ್ಟೇ ಕಿಮ್ಮತ್ತು ಕೊಡುತ್ತಿದ್ದರು. ಅವರು ಕರ್ನಾಟಕ ಏಕೀಕರಣಕ್ಕೆ ಮತ್ತು ಕರ್ನಾಟಕದ ಏಕೀಕರಣದ ನಂತರ ವಿವಿಧ ಕ್ಷೇತ್ರಗಳಲ್ಲಿ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಇವೊತ್ತು ದುರ್ದೈವ ಅವರು ನಮ್ಮ ಮಧ್ಯೆ ಇಲ್ಲ. ಅವರ ನಿಧನಕ್ಕಿಂತಲೂ 8-10 ದಿವಸಗಳ ಮೊದಲು ಬೆಂಗಳೂರಿನಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ನಾನು ಅವರ ಮನೆಗೆ ಹೋಗಿದ್ದೆ. ನಾನು ಅವರ ಮನೆಗೆ ಹೋಗಿ ಅವರನ್ನು ನೋಡಿದ ಮೇಲೆ ಗೊತ್ತಾಯಿತು. ಅವರು ಬಹಳ ದಿವಸ ಇರಲಿಕ್ಕಿಲ್ಲ ಎಂದು. ನಾನು ಅವರ ಆರೋಗ್ಯ ವಿಚಾರಿಸುವುದಕ್ಕೆ ಹೋಗಿದ್ದರೆ ಅಂತಹ ಪರಿಸ್ಥಿತಿಯಲ್ಲೂ ಕೂಡ ಅವರು ನಿಮ್ಮ ಸಮಸ್ಯೆಗಳು ಏನು, ಕರ್ನಾಟಕದ ಸಮಸ್ಯೆಗಳು ಏನು, ಈಗ ಏನು ನಡೆಯುತ್ತಿದೆ ಇದೆಲ್ಲಾ ಅವರ ತಲೆಯಲ್ಲಿ ಇತ್ತೇ ಹೊರತು ಬೇರೆ

ಏನೂ ಇರಲಿಲ್ಲ. ಅವರ ಕೊನೆಯ ಉಸಿರು ಇರುವವರೆಗೂ ಕರ್ನಾಟಕ, ರಾಷ್ಟ್ರದ ಜನತೆ, ರಾಷ್ಟ್ರದ ಅಭಿವೃದ್ಧಿ ರಾಷ್ಟ್ರದ ಸಮಸ್ಯೆಗಳು ಇದರ ಬಗ್ಗೆ ಅವರು ಚಿಂತನೆ ಮಾಡುತ್ತಿದ್ದರು. ಒಂದು ವಿಚಾರವನ್ನು ನಾನು ಇಲ್ಲಿ ಹೇಳಿದರೆ ಬಹುಶಃ ಕೆಲವರಿಗೆ ಆಶ್ಚರ್ಯವಾಗಬಹುದು. ನನ್ನ ಅವರ ಪರಿಚಯ 1957 ರಿಂದ ಅಂದರೆ ಕರ್ನಾಟಕ ಏಕೀಕರಣ ಆದ ಮೇಲೆ. ತಮ್ಮೆಲ್ಲರಿಗೂ ಗೊತ್ತಿರತಕ್ಕದ್ದು ನಾನು ಈಗಾಗಲೇ ಹೇಳಿದ ಹಾಗೆ ಅವರು ಒಂದು ತರಹ ನಿಷ್ಠೂರಿ, ಹಠವಾದಿಗಳು ಕೂಡ ಆಗಿದ್ದರು. 1925 ರಿಂದ 56 ರವರೆಗೆ ಅವರು ಅಸೆಂಬ್ಲಿ ಮೆಂಬರ್ ಆಗಿದ್ದರು. ಆ ವೇಳೆಯಲ್ಲಿ ಅವರ ಮನಸ್ಸಿಗೆ ಯಾವುದೂ ಸರಿಹೋಗದೆ ನನಗೆ ಅಧಿಕಾರ ಬೇಕಾಗಿಲ್ಲವೆಂದು ರಾಜೀನಾಮೆ ಕೊಟ್ಟರು. ನಂತರ ಅವರು ವಿಧಾನ ಸಭಾ ಚುನಾವಣೆಗೆ ನಿಲ್ಲಲಿಲ್ಲ. ಕನಿಷ್ಠ ವಿಧಾನ ಪರಿಷತ್ತಿನ ಚುನಾವಣೆಗೆ ನಿಲ್ಲಲೆಂದು ಎಲ್ಲರ ಆಸೆಯಾಗಿತ್ತು. 1956 ರಿಂದ ನನಗೂ ಅವರಿಗೆ ಸಂಪರ್ಕ ಬಂದಮೇಲೆ ಎಷ್ಟು ಹೇಳಿದರೂ ಅವರು ಕೇಳಲಿಲ್ಲ, ನನಗೆ ಅಸೆಂಬ್ಲಿ ಬೇಡ, ಕೌನ್ಸಿಲ್ ಬೇಡವೆಂದು ಹೇಳಿದರು. 1972ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ ನನಗೆ ಒಂದು ಆಸೆ ಇತ್ತು. ಅದೇನೆಂದರೆ ಇವರನ್ನು ಕೌನ್ಸಿಲ್ಲಿಗೆ ಆರಿಸಬೇಕೆಂದು, ಆದರೆ ಎಷ್ಟು ಪ್ರಯತ್ನ ಮಾಡಿದರೂ ಅವರು ಒಪ್ಪಲಿಲ್ಲ. ನಾನು ಬರುವ ಹಾಗೆ ಇಲ್ಲ ನನಗೆ ಅದಾವುದೂ ಬೇಕಾಗಿಲ್ಲವೆಂದು ಹೇಳಿದರು. ನಾನು ಇದನ್ನು ಏತಕ್ಕೆ ಹೇಳುತ್ತಿದ್ದೇನೆಂದರೆ ಇಂದಿನ ರಾಜಕೀಯ ಕ್ಷೇತ್ರದಲ್ಲಿ ಯಾವ ತರಹ ಅಧಿಕಾರದ ಹಂಬಲ ಇದೆ ಮತ್ತು ಅವರು ಯಾವ ತರಹ ರಾಜಕೀಯದಲ್ಲಿ ಇದ್ದರು. ಎಂಬುದನ್ನು ಅರಿತುಕೊಳ್ಳುವುದಕ್ಕೋಸ್ಕರ ಈ ಮಾತನ್ನು ಹೇಳುತ್ತಿದ್ದೇನೆ. ಅವರು ಯಾವ ರೀತಿ ರಾಜಕೀಯದಿಂದ ನಿರ್ಲಿಪ್ತರಾಗಿದ್ದರು ಎಂಬುದಕ್ಕೆ ಅವರು ಯಾವ ರೀತಿ ನಡೆದುಕೊಂಡರು ಎನ್ನುವುದೇ ಸಾಕ್ಷಿಯಾಗಿದೆ ಎಂದು ನಾನು ತಿಳಿದುಕೊಂಡೆ. ಅವರು ಬೇಕಾದಷ್ಟು ಸೇವೆ ಮಾಡಿದ್ದಾರೆ. ಅವರು ಗತಿಸಿಹೋಗಿದ್ದುದು ವೈಯುಕ್ತಿಯವಾಗಿ ನನಗೆ ಒಂದು ಪರ್ಸ್ನಲ್ ಲಾಸ್ ಎಂದು ನಾನು ತಿಳಿದುಕೊಂಡಿದ್ದೇನೆ. ಅವರು ಪಕ್ಷದಲ್ಲಿಯೇ ಇರಲಿ, ಹಾಗೂ ನಾನು ಯಾವ ಪಕ್ಷದಲ್ಲಿ ಇರಲಿ ಆ ಪಕ್ಷಗಳ ಭೇದಭಾವವಿಲ್ಲದೆ ಯಾವಾಗಲೂ ನಾನು ಮಂಡ್ಯ ಮುಖಾಂತರ ಹೋದರೆ ಮಂತ್ರಿಯಾಗಿ ಹೋಗಲಿ, ಅಥವಾ ಅಧಿಕಾರ ಇಲ್ಲದೆ ಇದ್ದಾಗಲೂ ಹೋದಾಗ ನಾನು ಅವರ ಮನೆಗೆ ಹೋಗದೆ ಇರುತ್ತಿರಲಿಲ್ಲ. ಅವರು ಯಾವಾಗ ಇಲ್ಲಿಗೆ ಬಂದರೂ ನನ್ನನ್ನು ಭೇಟಿಯಾಗುತ್ತಿದ್ದರು. ನಾನು ಅವರು ಸಮಾಲೋಚನೆ ಮಾಡುತ್ತಿದ್ದೆವು. ಚರ್ಚೆ ಮಾಡುತ್ತಿದ್ದೆವು. ಪಕ್ಷ ಬೇರೆ ಇದ್ದರೂ ಕೂಡ ನಮ್ಮ ವಿಚಾರಧಾರೆಯಲ್ಲಿ ಯಾವುದೇ ರೀತಿಯ ಬದಲಾವಣೆ ಇರುತ್ತಿರಲಿಲ್ಲ. ಅಂತಹ ಒಬ್ಬ ಯೋಗ್ಯ ವ್ಯಕ್ತಿ ಇವತ್ತು ನಮ್ಮ ಮಧ್ಯದಲ್ಲಿ ಇಲ್ಲ. ಇದು ನಿಜವಾಗಿಯೂ ಕರ್ನಾಟಕಕ್ಕೆ ತುಂಬಲಾರದ ಒಂದು ದೊಡ್ಡ ಕೊರತೆಯಾಗಿದೆ ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಮೃತ್ಯುವಿಗೆ ಯಾವುದೂ ಉಪಾಯವಿಲ್ಲ. ಅವರು ನಮ್ಮನ್ನು ಅಗಲಿ ಹೋಗಿದ್ದಾರೆ. ನಾವು ಅವರ ಕೆಲಸಗಳನ್ನು

ಅರ್ಥಮಾಡಿಕೊಂಡು ಅವರ ಅನೇಕ ವಿಚಾರಗಳನ್ನು ಯೋಜನೆಗಳನ್ನು ಕಾರ್ಯಕ್ರಮಗಳನ್ನು ಪೂರ್ತಿಗೊಳಿಸುವುದಕ್ಕೆ ಪ್ರಯತ್ನ ಮಾಡಬೇಕು. ಮತ್ತು ಅವರು ಯಾವ ಒಂದು ಆದರ್ಶ ಜೀವನವನ್ನು ನಡೆಸಿಕೊಂಡು ಬಂದರೋ, ಅದನ್ನು ನಾವು ನಮ್ಮಲ್ಲಿ ಅನುಸರಿಸುವಂಥ ಪ್ರಯತ್ನವನ್ನು ಈ ಸಂದರ್ಭದಲ್ಲಿ ಮಾಡಬೇಕು. ಹಾಗೆ ಮಾಡಿದರೆ ನಿಜವಾಗಿಯೂ ಅದು ಒಂದುಒಳ್ಳೆಯ ಶ್ರದ್ಧಾಂಜಲಿಯಾಗುತ್ತದೆಂದು ನಾನು ತಿಳಿದುಕೊಂಡಿದ್ದೇನೆ. ಈ ಸಂದರ್ಭದಲ್ಲಿ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರುತ್ತೇನೆ ಮತ್ತು ಅವರ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯಿಂದ ಏನು ಒಂದು ಅಪಾರವಾದ ನಷ್ಟವಾಗಿದೆ, ದುಃಖವಾಗಿದೆ, ಆ ದುಃಖವನ್ನು ತಡೆದು ಕೊಳ್ಳುವಂತಹ ಶಕ್ತಿಯನ್ನು ದೇವರು ನೀಡಲೆಂದು ದೇವರಲ್ಲಿ ಪ್ರಾರ್ಥನೆ ಮಾಡುತ್ತೇನೆ.

ಶ್ರೀ ಡಿ.ಬಿ. ಚಂದ್ರೇಗೌಡ (ವಿರೋಧ ಪಕ್ಷದ ನಾಯಕರು) : ಸನ್ಮಾನ್ಯ ಸಭಾಧ್ಯಕ್ಷರೇ,, ಮಾನ್ಯ ಶಂಕರೇಗೌಡರು ದಿವಂಗತರಾಗಿ ಈ ದಿವಸ ಅವರ 11ನೇ ದಿವಸದ ಪುಣ್ಯ ತಿಥಿ ಮಂಡ್ಯದಲ್ಲಿ ಜರುಗುತ್ತಿದೆ. ಈ ದಿವಸ ಸಮಯೋಚಿತವಾದ ದಿವಸವೆಂದು ನಾನು ಅಂದುಕೊಂಡಿದ್ದೇನೆ. ಒಂದು ದೃಷ್ಟಿಯಿಂದ ಅವರು ನನಗೆ ರಾಜಕೀಯ ಗುರುಗಳು ಅವರು ಒಬ್ಬ ಅಪ್ಪಟ್ಟ ಗಾಂಧೀವಾದಿ. ಗಾಂಧಿ ಕಾಲದ ಅನೇಕ ಮಹಾ ಮುಖಂಡರುಗಳು ಅಗಲುತ್ತಾ ಉಳಿದ ಹಲ ಕೆಲವು ಕೊಂಡಿಗಳಲ್ಲಿ ಇದು ಒಂದು ಕೊಂಡಿಯಾಗಿತ್ತು. ಇವೊತ್ತು ಅದೂ ಕೂಡ ಕಳಚಿದೆ. ಅದಮ್ಯ ರಾಷ್ಟ್ರಪ್ರೇಮಿ, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಮತ್ತು ನೈಜ ಸಮಾಜವಾದಿಯಾಗಿದ್ದರು. ಸಾಹಿತ್ಯ ಸಂಸ್ಕೃತಿ ಕಲೆ ನಾಟಕ ಅಭಿನಯ ಅವರಲ್ಲಿ ಇತ್ತು. ಒಂದು ದೃಷ್ಟಿಯಿಂದ ಸಾಹಿತ್ಯದ ಆಕಾರ ಪ್ರಾಕಾರಗಳಲ್ಲಿ ಶಂಕರಗೌಡರು ಕೈಹಾಕದೆ ಇರತಕ್ಕಂತಹ ಕ್ಷೇತ್ರಗಳೇ ಇಲ್ಲವೆಂದು ಹೇಳಬಹುದು. ಮೇಲು ನೋಟಕ್ಕೆ ಅವರು ಒಬ್ಬ ಸಾಹಿತಿಯಂತೆ ಕಾಣದಿದ್ದರೂ ಕೂಡ ಸಾಮಾಜಿಕವಾಗಿ ಮತ್ತು ಅಂದಿನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಿದ್ದರು. ಸ್ವಾತಂತ್ರ್ಯ ನಂತರ ಹಲವಾರು ಜನಹಿತ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡಿದ್ದರು. ಅದರಲ್ಲಿ ಎರಡು ಮುಖ್ಯವಾದವು ಎಂದರೆ ಸಹಕಾರಿ ಕ್ಷೇತ್ರ ಮತ್ತು ವಿದ್ಯಾ ಕ್ಷೇತ್ರದಲ್ಲಿ ಬಹು ಮುಖ್ಯವಾದ ಸೇವೆಯನ್ನು ಅವರು ಸಲ್ಲಿಸಿದ್ದಾರೆಂದರೆ ತಪ್ಪಾಗುವುದಿಲ್ಲ. ಬಹುಶಃ ಕರ್ನಾಟಕದಲ್ಲಿ ಅಂದಿನ ಹಳೆಯ ಮೈಸೂರಿಗೆ ಸಹಕಾರ ಕ್ಷೇತ್ರದಲ್ಲಿ ಅಗ್ರ ಸ್ಥಾನ ಮಂಡ್ಯ ಜಿಲ್ಲೆಗೆ ದೊರೆತದ್ದು ಶಂಕರಗೌಡರಿಂದ ಎಂದು ಹೇಳಿದರೆ ಅದು ಅತಿಯೋಕ್ತಿಯಾಗುವುದಿಲ್ಲ. ಮೇಲಾಗಿ ಸ್ವಾತಂತ್ರ್ಯದ ಅರ್ಥ ಜನರಿಗೆ ತಲುಪಬೇಕು ಎಂಬ ದಿಸೆಯಲ್ಲಿ ಕಾರ್ಯಕ್ರಮವನ್ನು ಹಾಕಿಕೊಂಡಿದ್ದಂತಹವರು ಅವರು. ಅಂದಿನ ಕಾಲದಲ್ಲಿದ್ದಂತಹ ನಮ್ಮ ವಿದ್ಯಾಭ್ಯಾಸದ ಪರಿಸ್ಥಿತಿಯನ್ನು ಮನಗಂಡು ವಿದ್ಯಾಕ್ಷೇತ್ರವನ್ನು ಅರ್ಥಮಾಡಿಕೊಂಡು ಇದರ ಬಗ್ಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕ್ರೊಂಡರು. ಇವತ್ತು ಅತ್ಯಂತ ದೊಡ್ಡ ಆಸ್ತಿಯನ್ನು ಮಂಡ್ಯ ಜಿಲ್ಲೆಯಲ್ಲಿ ತಾವು ಸ್ಥಾಪಿಸಿದ ಸಂಸ್ಥೆಗಳ ಮೂಲಕ ಬಿಟ್ಟು ಹೋಗಿದ್ದಾರೆ ಇಂದಿನ

ಗ್ರಾಮೀಣ ಸಮಸ್ಯೆಗಳ ಪರಿಹಾರಕ್ಕೆ ಗಾಂಧೀ ಪ್ರಣೀತ ಆರ್ಥಿಕ ನೀತಿಯೇ ಮೂಲ ಸಿದ್ಧಾಂತವಾಗಬೇಕು. ಅದರ ಅನುಷ್ಠಾನ ಈ ಸರ್ಕಾರಗಳ ಕರ್ತವ್ಯವಾಗಬೇಕೆಂದು ವಾದವನ್ನು ಮಾಡಿಕೊಂಡು ಬಂದರಲ್ಲಿ ಇವರೂ ಒಬ್ಬರು. ಇದು ಗಾಂಧೀ ತತ್ವ ಎಂದು ಮಾತಿನಲ್ಲಿ ಬಹಳಷ್ಟು ಜನರು ಆಡುತ್ತೇವೆ. ಆದರೆ ಮಾನ್ಯ ಶಂಕರಗೌಡರು ಗಾಂಧೀಜಿಗೆ ಅತ್ಯಂತ ಪ್ರಿಯವಾದಂಥ ಖಾದಿ ಕೇಂದ್ರವನ್ನು ಕೀಲಾರ ಗ್ರಾಮದಲ್ಲಿ ಬಿಟ್ಟು ಹೋಗಿದ್ದಾರೆ. 1953ರಲ್ಲಿ ತಮ್ಮ ಶಾಸನಸಭಾ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟ ಮುಖ್ಯ ಕಾರಣ ಏನೆಂದರೆ ಅಂದಿನ ಸರ್ಕಾರ ರೈತರ ಸಮಸ್ಯೆಗಳಿಗೆ ಸ್ಪಂದಿಸಲಿಲ್ಲ ಎನ್ನುವುದು. ತಾನು ನಂಬಿಕೊಂಡು ಹಮ್ಮಿಕ್ಕೊಂಡು ಬಂದಂಥ ವೈಚಾರಿಕತೆಗೆ ಧಕ್ಕೆ ಬಂದಾಗ ಅಂಥ ಅಧಿಕಾರ ಗದ್ದುಗೆಗಳನ್ನು ತಿರಸ್ಕಾರ ಮಾಡಿದ ನಿದರ್ಶನಗಳು ಅಲ್ಲಿ. ಏನೇನು ಕಂಡು ಬರುತ್ತವೋ ಅವು ಒಂದು ಮೈಲಿಗಲ್ಲು ಎಂದು ನಾನು ಭಾವಿಸುತ್ತೇನೆ. 8ನೇ ಲೋಕಸಭಾ ಸದಸ್ಯರಾಗಿದ್ದಾಗ ಯಾವುದೋ ಒಂದು ಸಣ್ಣ ವಿಚಾರದಲ್ಲಿ ಮನಸ್ತಾಪ ಬಂದಾಗ ತಕ್ಷಣವೇ ತಮ್ಮ ಲೋಕಸಭಾ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟರು. ಆದರೆ ಮಾನ್ಯ ರಾಮಕೃಷ್ಣ ಹೆಗಡೆಯವರ ಸಂಬಂಧ ಚೆನ್ನಾಗಿದ್ದುದರಿಂದ ಅವರು ಮತ್ತೆ ಆ ರಾಜೀನಾಮೆಯನ್ನು ವಾಪಸ್ಸು ತೆಗೆದುಕೊಂಡರು ಎಂಬುದನ್ನು ನಾನು ನೆನಪು ಮಾಡಿಕೊಳ್ಳುತ್ತೇನೆ. ಮಾನ್ಯ ಶಂಕರಗೌಡರು ಈ ಸಮಾಜಕ್ಕೆ ಒಂದು ದೊಡ್ಡ ಕೊಡುಗೆಯನ್ನೇನೋ ಕೊಟ್ಟು ಹೋಗಿದ್ದಾರೆ. ಆದರೆ ಅವರ ಸಂಸಾರಕ್ಕೆ ಅಷ್ಟೇ ಒಂದು ದೊಡ್ಡ ಹೊರೆಯನ್ನೂ ಕೂಡ ಬಿಟ್ಟು ಹೋಗಿದ್ದಾರೆ. ಮಾನ್ಯ ಮುಖ್ಯ ಮಂತ್ರಿಗಳು ಇದನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ಸುಮಾರು 40 ವರ್ಷಗಳ ಕಾಲ ಸಾರ್ವಜನಿಕ ಜೀವನವನ್ನು ನಡೆಸಿ ರಾಜ್ಯದ ಶಿಕ್ಷಣ ಮಂತ್ರಿಗಳಾಗಿ, ಶಾಸಕರಾಗಿ, ಸಂಸತ್ ಸದಸ್ಯರಾಗಿ. ಕೆಳಮನೆ ಹಾಗೂ ಮೇಲ್ಮನೆಯ ಸದಸ್ಯರಾಗಿ ಕೆಲಸಮಾಡಿ ಅವರುಬಿಟ್ಟುಹೋಗಿರತಕ್ಕ ಒಂದು ಸ್ವಂತ ಆಸ್ತಿ ಎಂದರೆ ಇರತಕ್ಕ ಒಂದು ಮನೆ ಮತ್ತು ಅದರ ಮೇಲೆ ಸುಮಾರು 13 ಲಕ್ಷ ರೂಪಾಯಿಗಳ ಸಾಲ. ನಾನಾದರೂ ಹೇಳುತ್ತೇನೆ. ಈನ ರೀತಿ ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡತಕ್ಕವರಿಗೆ ಈ ಸಮಾಜ ಅಥವಾ ಸರ್ಕಾರ ಅವರ ಜವಾಬ್ದಾರಿಯನ್ನು ಹೊತ್ತುಕೊಳ್ಳದಿದ್ದರೆ ಮುಂದೆ ನಾವು ಸಾರ್ವಜನಿಕ ಜೀವನದಲ್ಲಿ ಪ್ರಾಮಾಣಿಕವಾಗಿ ಕೆಲಸ ಮಾಡಲು ಕಷ್ಟವಾಗುತ್ತದೆ. ಇದನ್ನು ಮಾನ್ಯ ಮುಖ್ಯ ಮಂತ್ರಿಗಳು ಗಮನದಲ್ಲಿಟ್ಟುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ಮಾನ್ಯ ಶಂಕರಗೌಡರು ಶಿಕ್ಷಣ ಸಚಿವರಾಗಿದ್ದಾಗ ಅನೇಕ ಸುಧಾರಣೆಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ತಂದಿದ್ದರು ಅದು ಸುಧಾರಣೆಯ ಲಾಭವನ್ನು ಕೇವಲ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವವರೇ ಅಲ್ಲದೆ ಶಿಕ್ಷಕೇತರ ಕ್ಷೇತ್ರದಲ್ಲಿರುವವರೂ ಕೂಡ ಇನ್ನೂ ನೆನಪು ಮಾಡಿಕೊಳ್ಳುತ್ತಿದ್ದಾರೆ.

ಶ್ರೀ ಎನ್. ಹುಚ್ಚಮಾಸ್ತಿಗೌಡ (ಹುಲಿಯೂರುದುರ್ಗ): ಮಾನ್ಯ ಅಧ್ಯರು ಇಂದು ಸೂಚಿಸಿರತಕ್ಕಂಥ ಮೂರಜನರಿಗೆ ಸಂಬಂಧಪಟ್ಟ ಸಂತಾಪ ಸೂಚನಾ ನಿರ್ಣಯವು

ನಮ್ಮ ಮುಂದಿದೆ. ನನ್ನ ಭಾಗ್ಯವೆಂದರೆ ಈ ಮೂರು ಜನರ ಜೊತೆಯಲ್ಲಿಯೂ ಕೂಡ ಕೆಲಸ ಮಾಡತಕ್ಕಂಥ ಅವಕಾಶ ನನಗೆ ಒದಗಿತು. ಸನ್ಮಾನ್ಯ ಶಂಕರಗೌಡರಂತೂ ನನ್ನ ಜೊತೆಯಲ್ಲಿ ಸಹಭಾಗಿಯಾಗಿ ಕೆಲಸ ಮಾಡಿದಿದ್ದು ಉಂಟು. ಮಂಡ್ಯ ಅದು ತಾಲ್ಲೂಕು ಕೇಂದ್ರವಾಗಿದ್ದು, ಜಿಲ್ಲಾ ಕೇಂದ್ರವಾಗಿ ಪರಿಣಮಿಸಿದಂತಹ ಪರಿಸ್ಥಿತಿಯಲ್ಲಿ ಹೊಸದಾಗಿ ಜಿಲ್ಲೆಯಾದ ಮೇಲೆ ಮಾನ್ಯ ಶಂಕರಗೌಡರು ಸಲ್ಲಿಸಿದ ಸೇವೆ ಬಹಳ ದೊಡ್ಡದು.

(ಗೊಂದಲ)

ಶ್ರೀ ಬಿ.ಕೆ. ಶಿವಕುಮಾರ್ : ಈ ರೀತಿ ತಾವು ಮಾತನಾಡುತ್ತಿದ್ದರೆ ತಮ್ಮನ್ನು ಆಚೆಗೆ ಹಾಕಬೇಕಾಗುತ್ತದೆ.

ಶ್ರೀ **ವಾಟಾಳ್ ನಾಗರಾಜ್** : ನನ್ನನ್ನು ಆಚೆಗೆ ಹಾಕುವುದು ನಿಮ್ಮ ಹಣೆಯಲ್ಲಿಯೇ ಬರೆದಿಲ್ಲ. ಸುಮ್ಮನೆ.... ಕುಳಿತುಕೊಳ್ಳಿ. ಗುರುತರವಾದ ಇಂಥ ಒಂದು ಸಂದರ್ಭದಲ್ಲಿ ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದಾರೆ. ನಾನು ಅವರಿಗೆ ಬುದ್ಧಿವಾದವನ್ನು ಹೇಳುತ್ತಿಲ್ಲ.

ಶ್ರೀ ಎನ್. ಹುಚ್ಚುಮಾಸ್ತಿಗೌಡ : ಮಾನ್ಯ ಅಧ್ಯಕ್ಷರೇ ಒಂದು ಎದುರು ಪಕ್ಷದಲ್ಲಿರುವ ಮಾನ್ಯ ಸದಸ್ಯರು ಮಾನ್ಯ ಸ್ನೇಹಿತರು ಇಂಥ ಒಂದು ಸಂದರ್ಭದಲ್ಲಿ ಮಧ್ಯೆ ಮಧ್ಯೆ ಮಾತನಾಡುವುದು ಸೂಕ್ತವಲ್ಲ. ಈ ರೀತಿ ಮಾಡಿದರೆ ಅದು ತಪ್ಪಲ್ಲವೇ ? ಅವರಿಗೆ ಒಳ್ಳೆಯ ಬುದ್ಧಿ ಬರಲಿ ಎಂದು ಹೇಳುತ್ತೇನೆ.

12.50 ಪಿ.ಎಂ.

ದಿ ಶಂಕರೇಗೌಡರು ಹೊಸದಾಗಿ ಆದಂತಹ ಜಿಲ್ಲೆಯಲ್ಲಿ ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪನೆ ಮಾಡಿದ್ದಾರೆ. ಎಂದೆಂದೂ ಶಾಶ್ವತವಾಗಿ ಉಳಿಯತಕ್ಕ ಸಂಸ್ಥೆಗಳು ಅವು. ಅತ್ಯಂತ ಅವಶ್ಯಕವಾಗಿ ರೈತರಿಗೆ ಮತ್ತು ರೈತರ ಮಕ್ಕಳಿಗೆ ಬೇಕಾದಂತಹ ಅನೇಕ ಕೆಲಸಗಳನ್ನು ಮಾಡಿದ್ದಾರೆ. ಸಾಮಾನ್ಯ, ಒಬ್ಬ ರೈತರ ಮನೆಯಲ್ಲಿ ಹುಟ್ಟಿದಂತಹ ವ್ಯಕ್ತಿ ಇವರು. ನಾನು ತಿಳಿದುಕೊಂಡಿರು ಮಟ್ಟಿಗೆ ಅತ್ಯಂತ ದೊಡ್ಡ ರೈತರೇನು ಅಲ್ಲ. ಸಾಮಾನ್ಯ ರೈತರ ಮಗ ಇವರು. ಬಡತನದಲ್ಲಿ ವಿದ್ಯಾಭ್ಯಾಸ ಮಾಡಿ ಇಷ್ಟೊಂದು ಮಹತ್ವವಾದ ಸೇವೆ ಮಾಡಿದ್ದಾರೆ. ಅವರಿಗೆ ಭಗವಂತ ಆ ಶಕ್ತಿ ಕೊಟ್ಟಿದ್ದಾನೆಂದು ಭಾವಿಸುತ್ತೇನೆ. ಅವರ ಪ್ರಯತ್ನ ಬಹಳ ದೊಡ್ಡದು. ಸಾಹಿತ್ಯ ಕ್ಷೇತ್ರದಲ್ಲೂ ಕೂಡ ಅವರು ಕೆಲಸ ಮಾಡಿ ಮಹಾತ್ಮ ಗಾಂಧೀಜಿಯವರ ಜೀವನ ಚರಿತ್ರೆಯನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಅಪಾರ ಸೇವೆ ಮಾಡಿದ್ದಾರೆ. ವಿದ್ಯಾಮಂತ್ರಿಗಳಾಗಿದ್ದಾಗ ದೊಡ್ಡ ದೊಡ್ಡ ಗ್ರಂಥಗಳನ್ನು ಅಚ್ಚು ಹಾಕಿಸುವುದಕ್ಕೆ ಹಾಗೂ ಪುಸ್ತಕಗಳೇ ಇಲ್ಲದಂತಹ ಕಾಲದಲ್ಲಿ ಪ್ರತಿಯೊಬ್ಬರಿಗೂ ಪುಸ್ತಕಗಳು ದೊರಕುವಂತೆ ಮಾಡುವುದಕ್ಕೆ ಬಹಳ ಪ್ರಯತ್ನ ಮಾಡಿದ್ದಾರೆ. ಇಂಥ ಉತ್ತಮವಾದ ಕೆಲಸ ಮಾಡಿದಂಥ ಒಬ್ಬ ಸಾಮಾನ್ಯ ರೈತರ ಮಗ ಇನ್ನೂ ಹೆಚ್ಚು ಕಾಲ

ನಮ್ಮೊಡನಿದ್ದು ಸೇವೆ ಸಲ್ಲಿಸುವುದಕ್ಕೆ ಅವಕಾಶ ಇರಬೇಕಾಗಿತ್ತು. ಆದರೆ ಅವರ ಮತ್ತು ನಮ್ಮೆಲ್ಲರ ದುರ್ದೈವದಿಂದ ಅವರು ಗತಿಸಿದ್ದಾರೆ. ಅವರ ಆತ್ಮಕ್ಕೆ ಚಿರಶಾಂತಿ ದೊರಕಲಿ. ಅವರ ಕುಟುಂಬದವರಿಗೆ ಕಷ್ಟ ಸಹಿಸುವ ಶಕ್ತಿಯನ್ನು ಭಗವಂತ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇನೆ.

ಶ್ರೀ ಎಂ.ಎಸ್. ಆತ್ಮಾನಂದ( ಮಂಡ್ಯ) : ಮಾನ್ಯ ಅಧ್ಯಕ್ಷರೆ, ಮಂಡ್ಯ ಜಿಲ್ಲೆಯ ಪ್ರಗತಿಗೆ ಅದರ ಅಭ್ಯುದಯಕ್ಕೆ ವಿಶ್ವೇಶ್ವರಯ್ಯನವರು ಹೇಗೆ ನಾಂದಿ ಹಾಡಿದರೋ ಅದೇ ರೀತಿ ಶಂಕರೇಗೌಡರು ನಮ್ಮ ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಹಾಗೂ ನಮ್ಮ ಜಿಲ್ಲೆಯ ಇಂದಿನ ಸ್ಥಿತಿಗೆ ಕಾರಣ ಕರ್ತರಾಗಿದ್ದಾರೆ. ಸದಾ ಶ್ರೀಮಾನ್ಯನ ಬಗ್ಗೆ ಚಿಂತನೆ ಮಾಡುತ್ತಿದ್ದ ವ್ಯಕ್ತಿಯಾಗಿದ್ದರು. ಅವರು. ಅವರಿಗೆ ಸಮಾಜದ ಬಗ್ಗೆ ಬಹಳ ಕಳಕಳಿ ಇತ್ತು. ಇಂಥ ಶಂಕರೇಗೌಡರು ಶಿಕ್ಷಣ ಸಚಿವರಾಗಿದ್ದುದು ಮಾತ್ರವಲ್ಲದೆ, ನಾಟಕಕಾರರಾಗಿ, ಸಾಹಿತಿಗಳಾಗಿ ಕೆಲಸ ಮಾಡಿ ಅನೇಕ ಸಂಘ ಸಂಸ್ಥೆಗಳನ್ನು ನಮ್ಮ ಜಿಲ್ಲೆಗೆ ಕುರುಹಾಗಿ ಬಿಟ್ಟುಹೋಗಿದ್ದಾರೆ. ಇಂಥ ವ್ಯಕ್ತಿಯ ಧ್ಯೇಯಾದರ್ಶಗಳು ನಮ್ಮಂಥ ಕಿರಿಯರಿಗೆ ಮಾರ್ಗದರ್ಶನವಾಗಲಿ ಎಂದು ಆಶಿಸುತ್ತಾ ಶಂಕರೇಗೌಡರೂ ನಿಧನರಾಗಿರುವುದು ತಮಗೆಲ್ಲರಿಗೆ ತುಂಬಲಾರದ ನಷ್ಟವೆಂದು ಹೇಳುತ್ತಾ. ಮೂವರು ಮಹನೀಯರುಗಳಾದ ಶಂಕರೇಗೌಡರು ಗ್ರೇಸ್ ಠಕ್ಕರ್ ಹಾಗು ಪಟ್ಟಣಶೆಟ್ಟರ ಆತ್ಮಕ್ಕೆ ಚಿರಶಾಂತಿ ದೊರೆಯಲಿ ಮತ್ತು ಮೃತರ ಕುಟುಂಬದವರಿಗೆ ದುಃಖವನ್ನು ಭರಿಸುವ ಶಕ್ತಿಯನ್ನು ಭಗವಂತ ಕರುಣಿಸಲಿ ಎಂದು ಪ್ರಾರ್ಥಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀ ಬಿ.ಎಂ. ಇದಿನಬ್ಬ (ಉಲ್ಲಾಳ) : ಶಂಕರೇಗೌಡರ ಪರಿಚಯ 1962ರಿಂದಲೂ ನನಗೆ ಇತ್ತು. ಅವರು ದಕ್ಷಿಣ ಕನ್ನಡ ಜಿಲ್ಲೆಗೆ ಬಂದಾಗ, ಒಂದು ಭಾಷಣ ಮಾಡಿದಾಗ ಅವರ ಭಾಷಣ ಕೇಳಿ ಅವರ ದೇಶಪ್ರೇಮ, ಜಾತ್ಯಾತೀತ, ಮನೋಭಾವದ ಆ ಒಂದು ಶಕ್ತಿಯನ್ನು ನೋಡಿ ನಾನು ಅವರ ಬಗ್ಗೆ ಬಹಳ ಆಕರ್ಷಕವಾಗುತ್ತಿದೆ. ಅನಿರೀಕ್ಷಿತವಾಗಿ 1967ರಲ್ಲಿ ನಾನು ಶಾಸಕನಾಗಿ ಬಂದಾಗ ಅವರು ಶಿಕ್ಷಣ ಮಂತ್ರಿಗಳಾಗಿದ್ದರು, ಶಿಕ್ಷಣ ಮಂತ್ರಿಗಳಾಗಿ, ಬಂದಿರತಕ್ಕ ಟೀಕೆಗಳಿಗೆ ಅವರು ಕಟ್ಟ ಕಡೆಗೆ ಕೊಡುತ್ತಿದ್ದಂಥಹ ಉತ್ತರವನ್ನು ಎಂತಹವನೂ ಕೇಳಬೇಕಾದದ್ದೇ. ಅಷ್ಟೊಂದು ಮಾರ್ಮಿಕವಾಗಿ ಅಷ್ಟೊಂದು ಶಕ್ತಿಯುತವಾಗಿ ಬಂದ ಆ ಎಲ್ಲಾ ಟೀಕೆಗಳಿಗೂ ಸರಿಯಾದಂತಹ ಉತ್ತರವನ್ನು ಕೊಡುತ್ತಿದ್ದರು. ಮಾತ್ರವಲ್ಲ, ಅವರ ಆ ಭಾಷಣದಲ್ಲಿನ ಒಳ್ಳೆಯ ಶೈಲಿ ಓತಪ್ರೋತವಾಗಿ ಪ್ರತಿಯೊಬ್ಬರಿಗೂ ಹಿಡಿಸುವಂಥಾದಾಗಿತ್ತು ಅವರು ಗಾಂಧೀವಾದಿಗಳಾಗಿ, ಸಹಕಾರಿಗಳಾಗಿ, ದೇಶಪ್ರೇಮಿಗಳಾಗಿ, ಸಾಹಿತಿಗಳಾಗಿ, ಕವಿಗಳಾಗಿ ನಾಟಕಕಾರರಾಗಿ, ನಾಟಕದಲ್ಲಿ ನಟನೆ ಮಾಡುವವರಾಗಿ ಈ ಎಲ್ಲಾ ಕ್ಷೇತ್ರಗಳಲ್ಲೂ ಅತ್ಯುತ್ತಮವಾದ ಸತ್ವಭರಿತವಾದ ಶಕ್ತಿಯನ್ನು ಪಡೆದಿದ್ದರು. ಅವರು ಬರೆದದ್ದನ್ನು ಓದಿದರೆ ಪ್ರತಿಯೊಬ್ಬರಿಗೂ ದೇಶಪ್ರೇಮ ತಾನಾಗಿ ಬರಲಿಕ್ಕೆ ಸಾಧ್ಯ ಉಂಟು.

ಅಷ್ಟು ಅಚ್ಚುಕಟ್ಟಾಗಿ ಬರೆಯುತ್ತಿದ್ದರು. ಅದೇ ರೀತಿಯಲ್ಲಿ ನಾಟಕಗಳನ್ನೂ ತುಂಬಾ ಬರೆದಿದ್ದಾರೆ. ನಾಟಕಗಳಲ್ಲಿ ಅಭಿನಯವನ್ನೂ ಕೂಡಾ ಮಾಡಿದ್ದಾರೆ. ಅವರದ್ದದಲ್ಲಿ ಒಂದು ಸತ್ವ ಇತ್ತು. ಆ ರೀತಿಯ ಒಂದು ಸಹಕಾರ ಮನೋಭಾವದವರು. ರೈತರ ಬಗ್ಗೆ ಅನುಕಂಪ ಇರತಕ್ಕವರು ಇಡೀ ಮಂಡ್ಯಾ ಜಿಲ್ಲೆಯಲ್ಲಿ ಪ್ರತಿಯೊಂದು ಮನೆಯಲ್ಲೂ ಅವರನ್ನೂ ಇವತ್ತು ಗೌರವದಿಂದ ಕಾಣುತ್ತಾರೆ. ಕೇಳುತ್ತಾರೆ. ನೋಡುತ್ತಾರೆ ಎಂಬುದನ್ನು ನಾನು ಕೇಳಿ ತಿಳಿದುಕೊಂಡಿದ್ದೇನೆ. ಅದೂ ಅಲ್ಲದೇ ಅವರು ಶಾಸನಸಭೆಯಲ್ಲಿ ಇರುವಾಗ. ಶಿಕ್ಷಣ ಮಂತ್ರಿಗಳಾಗಿರುವವರೆಗೂ ಕೂಡ ಶಿಕ್ಷಣ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸ ಬಹಳ ದೊಡ್ಡದು. ನನ್ನ ಮನಸ್ಸಿನಲ್ಲಿ ಮತ್ತು ಒಂದು ಬಹಳ ಹಸಿರಾಗಿ ಉಳಿದ ವಿಚಾರ ಎಂದರೆ 1969ರಲ್ಲಿನ ಮೈಸೂರು ದಸರಾ ಮಹೋತ್ಸವದಲ್ಲಿ ಅದರ ಉಸ್ತುವಾರಿ ಇವರಿಗೆ ಇತ್ತು. ಮೈಸೂರಿನಲ್ಲಿ ನಾನೂ ಕೂಡಾ ದಸರಾ ಸಮ್ಮೇಳನಕ್ಕೆ ಹೋಗಿದ್ದೆ. ಅವೋತ್ತು ಪ್ರಾರಂಭದಲ್ಲಿ ಒಂದು ಪ್ರಾರ್ಥನೆ ಮಾಡಬೇಕೆಂದು ನಿಶ್ಚಯ ಮಾಡಿದಾಗ ಅಲ್ಲಿ ಸಿದ್ಧಪಡಿಸಿದ್ದ ಪ್ರಾರ್ಥನೆಯ ಪ್ರತಿಯನ್ನು ಅವರು ಮೊದಲೇ ಓದಿ ನೋಡಿದರು. ಅವರಿಗೆ ಅದು ಅಷ್ಟು ಹಿಡಿಸಲಿಲ್ಲ. ಆ ಪ್ರಾರ್ಥನೆಯಲ್ಲಿ ಜಾತ್ಯಾತೀತ ಭಾವವೆ ವ್ಯಕ್ತವಾಗಿಲ್ಲವೆನ್ನುವ ಭಾವನೆ ಬಂತು. ಅಲ್ಲೇ ಬದಿಯಲ್ಲೇ ಇದ್ದ ನನ್ನ ಹತ್ತಿರ ಹೇಳಿದರು. ದೇಶಪ್ರೇಮದ. ಐಕ್ಯಮತ್ಯತೆಯ ಜಾತ್ಯತೀತ ಮನೋಭಾವದ ಒಂದು ಪ್ರಾರ್ಥನೆಯನ್ನ ಮಾಡಿಬಿಡಿ ಎಂದು ನನಗೆ ಹೇಳಿದರು. ಓದಿ ನೋಡಿ ಜಾತ್ಯಾತೀತ ಮನೋಭಾವನೆ ಅದರಲ್ಲಿ ಸರಿಯಾಗಿ ವ್ಯಕ್ತವಾಗಿಲ್ಲವೆಂಬುದನ್ನು ಕಂಡು ಅವರು ಆ ರೀತಿ ಹೇಳಿದರು. ಎಂದರೆ ಈಗಿನ ಎಷ್ಟೊಂದು ಪ್ರಾರ್ಥನೆಯಗಳನ್ನು ನಾವು ಕಾಣುತ್ತೇವೆ. ಮನೋಭಾವ ಬರಬೇಕೆಂದು ನಾವು ಒಂದು ಕಡೆ ಸಾರುತ್ತೇವೆ. ಅಲ್ಲಿಗೆ ಹೋಗತಕ್ಕವರ ಅಭಿಪ್ರಾಯಗಳು ಬೇರೆ ಬೇರೆ, ಇರುತ್ತದೆಂದು ಹೇಳತಕ್ಕ ಭಾವನೆಯನ್ನು ಅಲ್ಲಿ ನಾವು ಕಂಡಿದ್ದೇವೆ, ಆದುದರಿಂದ ಶ್ರೀಯುತ ಶಂಕರಗೌಡರು ಬಹಳ ದೊಡ್ಡ ಮನುಷ್ಯರು ಅಂತಹವರನ್ನು ಇನ್ನೂ ನಾವೂ ಕಾಣುವುದು ಬಹಳ ಕಷ್ಟ. ಮಾನ್ಯ ಚಂದ್ರೇಗೌಡರು ಹೇಳಿದ ಹಾಗೆ ಗಾಂಧೀವಾದಿಗಳಾಗಿ ಅಳಿದುಳಿದ ಕೆಲವರಲ್ಲಿ ದೊಡ್ಡ ಮನುಷ್ಯರಾಗಿದ್ದವರಿವರ ಇಂತಹವರು ಬಹಳ ಕಡಿಮೆ. ಆದುದರಿಂದ ಇವರನ್ನು ನಾವು ಸದಾ ನೆನೆಸಬೇಕು ಮತ್ತು ಅವರ ಬಗ್ಗೆ ಏನೆಲ್ಲಾ ಆಗಬೇಕೋ, ಏನೆಲ್ಲಾ ಸ್ಮಾರಕಗಳು ಆಗಬೇಕೋ ಅದೆಲ್ಲಾ ಆಗುವುದು ಅಗತ್ಯ. ಏಕೆಂದರೆ ಅಷ್ಟು ದೊಡ್ಡ ಮನುಷ್ಯರವರು, ಎಲ್ಲಾ ವಿಧದಲ್ಲೂ ಕೀರ್ತಿಯನ್ನು ಪಡೆದಿದ್ದವರವರು. ಅವರು ಆಗಾಗ ನಮ್ಮ ಮಂಗಳೂರಿಗೂ ಕೂಡಾ ಬರುತ್ತಿದ್ದರು. ಬಂದು ಬೇರೆ ಬೇರೆ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದರು. ಅವರ ಭಾಷಣ ಎಂದರೆ ಜನರು ಬರುತ್ತಿದ್ದರು. ಆ ರೀತಿಯ ವಿಷಯಗಳು, ಆ ರೀತಿಯ ಸಮರ್ಥನೆಗಳು, ಆ ರೀತಿಯ ಮಾತಿನ ಶೈಲಿ, ಎಲ್ಲರನ್ನೂ ಆಕರ್ಷಿಸುವಂತಹ ಸಾಹಿತಿ ಮಾತ್ರವಲ್ಲ, ಗಾಂಧೀವಾದಿ ಮಾತ್ರವಲ್ಲ,

ದೇಶಪ್ರೇಮಿ ಮಾತ್ರವಲ್ಲ ಶಾಸಕ ಮಾತ್ರವಲ್ಲ, ಒಬ್ಬ ಒಬ್ಬ ಮಂತ್ರಿ ಮಾತ್ರವಲ್ಲ, ಒಬ್ಬ ಸಹಕಾರಿ ಮಾತ್ರವಲ್ಲ ಇಡೀ ಜನರಿಗೆ ಬೇಕಾದ ವ್ಯವಸ್ಥೆಯನ್ನು ರೂಪಿಸುವುದರಲ್ಲಿ ಅಗ್ರಗಣ್ಯ ಮಾನ್ಯರಾದ ಶ್ರೀಯುತ ಶಂಕರೇಗೌಡರ ನಿಧನ ನಿಜಕ್ಕೂ ತಂಬಿಬಾರದ ನಷ್ಟ. ಆದುದರಿಂದ ಅವರ ಆತ್ಮಕ್ಕೆ ದೇವರು ಸದ್ಗತಿಯನ್ನು ನೀಡಲಿ ಎಂದು ಹೇಳಿ. ಅದೇ ರೀತಿ ಗ್ರೇಸ್ ಠಕ್ಕರ್ ವಿಷಯವನ್ನೂ ಕೇಳಿದ್ದೇ ನಲ್ಲದೇ ನಾನು ಅವರನ್ನು ನೋಡಿಲ್ಲ. ಪಟ್ಟಣಶೆಟ್ಟಿಯವರನ್ನಾದರೆ ನಾನು ಬಲ್ಲೆ. ಅವರು ಅಜ್ಞಾತ ವಾಸದಲ್ಲಿ ಸಹಾ ಕೆಲವು ಸಮಯ ಇದ್ದ ಮನುಷ್ಯ. ಅವರು ಮಂಗಳೂರಿಗೂ ಸಹಾ ಬಂದಿದ್ದರು. ಮಂಗಳೂರಿನಲ್ಲಿ ನಮ್ಮನ್ನೆಲ್ಲಾ ಕೆಲವರನ್ನು ಅಲ್ಲಿ ಹುಡುಕಿ ಮಾತನಾಡಿ ಬಂದಿದ್ದರು. ಮತ್ತೆ ಇಲ್ಲಿ ಕೂಡಾ ಶಾಸಕನಾಗಿದ್ದಾಗ ಕೂಡಾ ಕೆಲವು ಸಾರಿ ಸಿಕ್ಕಿ ಮಾತನಾಡಿದ್ದು, ಇವರು ಬಹಳ ದೊಡ್ಡ ದೇಶ ಪ್ರೇಮಿಗಳು ಬಹಳ ದೊಡ್ಡ ಕೆಲಸವನ್ನು ಅವರ ಕ್ಷೇತ್ರದಲ್ಲಿ ಮಾಡಿದ್ದಾರೆ. ಅದೇ ರೀತಿ ಶಂಕರೇಗೌಡರೂ ಈ ಮೂವರ ಆತ್ಮಕ್ಕೆ ದೇವರು ಸದ್ಗತಿ ನೀಡಲಿ ಎಂದು ಹೇಳಿ ಮತ್ತೆ ವಿಮಾನದಲ್ಲಿ ಸುಮಾರು ನೂರಕ್ಕೆ ಹತ್ತಿರ ಜನ ತೀರಿ ಹೋಗಿದ್ದಾರೆ. ಅವರ ಆತ್ಮಕ್ಕೂ ಕೂಡಾ ದೇವರು ಸದ್ಗತೆಯನ್ನು ನೀಡಲಿ ಎಂದು ಹೇಳಿ ಇಂತಹ ಅವಕಾಶವನ್ನು ಕಲ್ಪಿಸಿಕೊಟ್ಟ ಮಾನ್ಯ ಅಧ್ಯಕ್ಷರಿಗೆ ವಂದಿಸಿ ಮಾತನ್ನು ಮುಗಿಸುತ್ತೇನೆ.

1.00 ಪಿ.ಎಂ.

ಪ್ರೊ. ಎಂ.ಡಿ. ನಂಜುಂಡಸ್ವಾಮಿ (ಧಾರವಾಡ ಗ್ರಾಮಾಂತರ) : ಮಾನ್ಯ ಅಧ್ಯಕ್ಷರೆ, ಸಂತಾಪ ಸೂಚನೆಗೆ ಒಂದು ಸಣ್ಣ ತಿದ್ದುಪಡಿ ಮಾಡುವುದಕ್ಕೆ ತಮ್ಮ ಅಪ್ಪಣೆ ಪಡೆದು ನಾನು ಮಾತನಾಡುತ್ತೇನೆ. ಮಾನ್ಯ ಶಂಕರೇಗೌಡರು, ಶ್ರೀಮತಿ ಥಕ್ಕರ್‌ರವರು, ಪಟ್ಟಣಶೆಟ್ಟಿಯವರು ಮತ್ತೆ ವಿಮಾನ ದುರಂತದಲ್ಲಿ ಪ್ರಾಣವನ್ನು ಕಳೆದುಕೊಂಡವರು ಅವರ ಜೊತೆಗೆ ಬಹಳ ಜನ ಪ್ರಾಣವನ್ನು ಕಳೆದುಕೊಂಡವರನ್ನು ನಾವು ಮರೆತಿದ್ದೇವೆಂದು ನನ್ನ ಭಾವನೆ. ನಮ್ಮ ದೇಶದ ಸಂಸತ್ತಿನಲ್ಲಾಗಲೀ ಅಥವಾ ಈ ದೇಶದ ಬೇರೆ ಯಾವುದೇ ವಿಧಾನಸಭೆಗಳಲ್ಲಿ ಮಾಡದೆ ಇರತಕ್ಕ ಒಂದು ಕನಿಷ್ಟ ಕರ್ತವ್ಯವನ್ನು ಈ ವಿಧಾನಸಭೆ ಮಾಡಬೇಕೆಂದು ಈ ಸಭೆಯ ಎಲ್ಲ ಸದಸ್ಯರಲ್ಲಿ ನಾನು ಮನವಿ ಮಾಡಿಕೊಳ್ಳುತ್ತೇನೆ. ಕಳೆದ ಸಂಸತ್ ಚುನಾವಣೆಗಳಲ್ಲಿ, ಕಳೆದ ವಿಧಾನಸಭೆ ಚುನಾವಣೆಗಳಲ್ಲಿ ಪ್ರಾಣವನ್ನು ಕೊಟ್ಟಂತಹ ಹಲವಾರು ಪಕ್ಷಗಳ ಕಾರ್ಯಕರ್ತರುಗಳಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವ ಕನಿಷ್ಟ ಕರ್ತವ್ಯವನ್ನು ಮಾಡಬೇಕು. ಇಲ್ಲಿಗೆ ಆಯ್ಕೆಯಾಗಿ ಬಂದವರು ಆ ಕನಿಷ್ಟ ಕರ್ತವ್ಯವನ್ನು ಮಾಡಿಲ್ಲ. ನಮ್ಮ ದೇಶದ ಸಂಸತ್‌ನಲ್ಲಿ ಮಾಡಿಲ್ಲ. ನಮ್ಮ ದೇಶದ ಯಾವುದೇ ರಾಜ್ಯದ ವಿಧಾನಸಭೆಗಳಲ್ಲಿ ಈ ಕನಿಷ್ಟ ಕರ್ತವ್ಯವನ್ನು ಮಾಡಿಲ್ಲ. ಕರ್ನಾಟಕ ವಿಧಾನಸಭೆ ಅದನ್ನು ಮಾಡಬೇಕೆಂದು ಹೇಳಿ ನಾನು ಎಲ್ಲಾ ಸದಸ್ಯರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

**ಅಧ್ಯಕ್ಷರು :** ಮಾನ್ಯ ಶಂಕರೇಗೌಡರು ಈ ರಾಜ್ಯದ ಚಿಂತನಾಶೀಲ ರಾಜಕಾರಣಿಗಳಲ್ಲಿ ಒಬ್ಬರಾಗಿದ್ದರು ಎಂದು ನನ್ನ ನಂಬಿಕೆ. ಅವರ ಉಜ್ವಲವಾದ ದೇಶಾಭಿಮಾನ ಅವರ ಜೊತೆಯಲ್ಲಿ ಮಾತನಾಡಿದಾಗ ಮಾತ್ರ ನಮಗೆ ದೇಶಾಭಿಮಾನವಲ್ಲ, ದೇಶಾಭಿಮಾನದ ತೀವ್ರತೆ ನಮಗೆ ಕಂಡು ಬರುತ್ತಿತ್ತು. ಸಮಾಜದಲ್ಲಿರತಕ್ಕ ಓರೆಕೋರೆ ಎಲ್ಲಾವನ್ನೂ ಶರವೇಗದಲ್ಲಿ ತಿದ್ಧಬೇಕು ಎನ್ನುವ ಕಾತುರತೆ ಶಂಕರೇಗೌಡರದಾಗಿತ್ತು. ನಾನು ಕಾಲೇಜಿನಲ್ಲಿ ಓದುತ್ತಿದ್ದ ಕಾಲದಲ್ಲಿ ನಮ್ಮ ಜಿಲ್ಲೆಯ ಪ್ರತಿಷ್ಠಿತ ನಾಯಕರಾಗಿ ಹೋಗಿದ್ದರು. ನಾನು ವಿಧ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಉತ್ತರೋತ್ತರ ಅವರ ವಿರುದ್ಧ ರಾಜಕೀಯ ಮಾಡುತ್ತೇವೆನ್ನುವ ಅನಿಸಿಕೆ ನಮ್ಮದಾಗಿರಲಿಲ್ಲ. ಆದರೆ ಕಳೆದ 25 ವರ್ಷಗಳಲ್ಲಿ ಆ ಉದ್ಧದಲ್ಲಿ ಕೇವಲ ಮೂರು ವರ್ಷಗಳನ್ನು ಬಿಟ್ಟರೆ ನಾನೂ ಅವರು ರಾಜಕೀಯದ ಎರಡು ಪ್ರವಾಹಗಳಲ್ಲಿ ನಿರತರಾಗಿದ್ದೆವು. 1973ನೇ ಇಸವಿಯಲ್ಲಿ ಅವರು ಕಾಂಗ್ರೆಸ್ ಪಕ್ಷವನ್ನು ಸೇರತಕ್ಕ ಮನಸ್ಸು ಮಾಡಿದರು. ಗತಿಸಿಹೋದ ಶ್ರೀಮಾನ್ ದೇವರಾಜಅರಸ್‌ರವರ ಮನೆಯಲ್ಲಿ ನನ್ನ ಅವರ ಭೇಟಿಯಾದಾಗ ನಾನು ಕಾಂಗ್ರೆಸ್ ಪಕ್ಷದ ಪರವಾಗಿ ಸ್ವಾಗತವನ್ನು ಕೊಟ್ಟೆ. ಮಾನ್ಯ ಚಂದ್ರೇಗೌಡರು ಮತ್ತು ಹುಚ್ಚಮಾಸ್ತಿಗೌಡರು ಹೇಳಿದ ಹಾಗೆ ಸರಿ ಬರದ ಪರಿಸರದಲ್ಲಿ ಅವರು ಎಂದೂ ಉಳಿಯಬೇಕು ಎನ್ನತಕ್ಕ ಆಸೆಯನ್ನು ಇಚ್ಛೆಯನ್ನು ಹೊಂದಿರುವರಾಗಿರಲಿಲ್ಲ. ಮಾನ್ಯ ಮುಖ್ಯ ಮಂತ್ರಿಗಳು ಮಾತನಾಡುವಾಗ ಶಂಕರೇಗೌಡರು ನಿಷ್ಠೂರವಾದಿಯೆಂದು ಹೇಳಿದರು ಬಹುಶಃ ಅವರ ನಿಷ್ಠೂರವಾದಿ ತನವೆ ಹಲವಾರು ಸೋಲಿಗೆ ಕಾರಣವಾಗಿತ್ತು ಎನ್ನತಕ್ಕದ್ದು ಅವರ ಬಳಿ ಇದ್ದ ನಮಗೆ ಗೊತ್ತು. ಮಾನ್ಯ ಶಂಕರೇಗೌಡರು ಸಮಾಜ ಸುಧಾರಕರು ಆಗಿದ್ದರು. ಸಾಹಿತ್ಯ ಪ್ರೇಮಿಗಳಾಗಿದ್ದರು, ಕಲೋಪಾಸಕರಾಗಿದ್ದರು. ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಹಳ ಹೆಚ್ಚಿನ ಸೇವೆಯನ್ನು ಮಾಡಿದ್ದರು. ಸಹಕಾರ ಮನೋಭಾವನೆಯನ್ನು ಜನಮನದಲ್ಲಿ ಬಿತ್ತುವುದಕ್ಕೆ ಅವರು ಪ್ರೇರಕರಾಗಿದ್ದರು. ಅವರ ನಿಧನದಿಂದ ನಮ್ಮ ರಾಜ್ಯದ ಸಾರ್ವಜನಿಕ ಜೀವನದಲ್ಲಿ ಒಂದು ದೊಡ್ಡ ಶೂನ್ಯವನ್ನು ತಂದೊಡ್ಡಿದೆ ಎಂದು ನಾನು ಭಾವನೆ ಮಾಡುತ್ತೇನೆ. ಗೌರವಾರ್ಥವಾಗಿ ಮಾನ್ಯ ಸದಸ್ಯರು ಎದ್ದುನಿಂತು ಒಂದು ನಿಮಿಷ ಮೌನವನ್ನು ಆಚರಿಸುವುದರ ಮೂಲಕ ತಮ್ಮ ಸಂತಾಪ ಸೂಚನೆಯನ್ನು ವ್ಯಕ್ತಪಡಿಸಬೇಕೆಂದು ಕೋರುತ್ತೇನೆ.

(ಸದನವು ಎದ್ದುನಿಂತು ಒಂದು ನಿಮಿಷ ಮೌನವನ್ನು ಆಚರಿಸಿತು.)



ಸತಿಪತಿಗಳೊಂದಾದ ಭಕ್ತಿ ಶಿವಂಗೆ

ತಮ್ಮ ಪತ್ನಿಯೊಂದಿಗೆ



ಕುಟುಂಬ ಪ್ರೇಮಿ

ಪತ್ನಿ ಮಕ್ಕಳು ಮೊಮ್ಮಕಳೊಂದಿಗೆ



ಈ ಆನಂದಕ್ಕೆಣೆ ಯಾವುದು?



ಕುವೆಂಪು ತೋರಿದ ದಾರಿಯಲ್ಲಿ ಮಾಂಗಲ್ಯ

ಸರಳ ಮದುವೆಯಲ್ಲಿ ಪತ್ನಿಯೊಂದಿಗೆ



ಪಾದುಕಾ ಕಿರೀಟಿಯಲ್ಲಿ ದಶರಥ

ದಶರಥ ಪಾತ್ರದಲ್ಲಿ



ದಾನ ಶೀಲ ಕರ್ಣ



ಕೋಲಾರದ ಕ್ಷಾಮಕ್ಕೆ ಮಂಡ್ಯದ ಕೊಡುಗೆ



ಜ್ಞಾನಗಂಗೋತ್ರಿ ಬಿಡುಗಡೆಯ ಸಂದರ್ಭದಲ್ಲಿ

(ಕುವೆಂಪು ಜೊತೆ)



ತಾಜ್ಯ ವಯಸ್ಕರ ಶಿಕ್ಷಣ ಸಮ್ಮೇಳನದ ಸ್ವಾಗತಾಧ್ಯಕ್ಷ



ಜಿಲ್ಲಾ ಕಾಂಗ್ರೆಸ್ಸಿನ ನೇತಾರ



ಕಲಾತಪಸ್ವಿಗಳ ಸಂಗಮ
ನಟಿ ವೈಜಯಂತಿಮಾಲಾ

# ಶಂಕರಗೌಡ: ಕೆಲವು ಅಭಿಪ್ರಾಯಗಳು

## ದೇಜಗೌ

ಶ್ರೀಯುತರು ವಿದ್ಯಾಸಚಿವರಾದದ್ದು ಕೇವಲ ಆಕಸ್ಮಿಕವಲ್ಲ. ಅವರ ಬಾಳು ವಿದ್ಯಾಕ್ಷೇತ್ರಕ್ಕೆ ಮೀಸಲಾದ್ದೆನ್ನುವುದನ್ನು ಕಡೆಗಣಿಸುವಂತಿಲ್ಲ. ಅವರ ಬಾಳಿನ ಗುರಿ ವಿದ್ಯಾಪ್ರಸಾರ ಹಾಗೂ ಜ್ಞಾನ ಸಂವರ್ಧನೆ. ಅವರು ಈ ಕ್ಷೇತ್ರದಲ್ಲಿ ಸಾಧಿಸಿದ ಸಿದ್ಧಿ ಅಪಾರ ಮಂಡ್ಯ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಹಣ ಸಂಪಾದಿಸಿ ವಿದ್ಯಾರ್ಥಿನಿಲಯ ಇಂಜಿನಿಯರಿಂಗ್ ಕಾಲೇಜು ಮತ್ತು ಪ್ರಥಮ ದರ್ಜೆ ಕಾಲೇಜುಗಳನ್ನು ನಡೆಸಿದರು. ಆ ಸಂಸ್ಥೆಗಳ ಬೆಳವಣಿಗಾಗಿ ಮನೆ ಮಡದಿ ಮಕ್ಕಳನ್ನು ಸಹ ಮರೆತು, ಮೂರು ಹೊತ್ತು ಅವುಗಳ ಚಿಂತೆಯಲ್ಲಿಯೇ ಮಗ್ನರಾಗಿ, ನಾನಾ ರೀತಿಯಲ್ಲಿ ತ್ಯಾಗ ಮಾಡಿ ಬಾಳನ್ನು ನಡೆಸಿದರು. ಎಷ್ಟೇ ಕಷ್ಟಗಳು ತೊಡಗಿದರೂ ಅಧ್ಯಾಪಕರ ಸಂಬಳಗಳನ್ನು ಮಾತ್ರ ಖೋತಾಮಾಡಲಿಲ್ಲ, ಏನು ಕಾರ್ಯ ಕೈಗೊಂಡರೂ ಅದನ್ನು ಅಚ್ಚುಕಟ್ಟಾಗಿ ಸಮರ್ಪಕವಾಗಿ ಪೂರೈಸುವ ಛಲ ಅವರದು. ಸಣ್ಣತನವಾಗಲಿ ಸಣ್ಣತರದ ಕೆಲಸವಾಗಲಿ ಅವರಿಗೆ ಅಲರ್ಜಿ. ಅವರ ಈ ಆಶಯಕ್ಕೆ ದ್ಯೋತಕವಾಗಿ ಎರಡು ಮೂರು ಕಾಲೇಜುಗಳು ಆದರ್ಶ ರೀತಿಯಲ್ಲಿ ಬೆಳೆಯುತ್ತಾ, ಹಳ್ಳಿಯ ಮಕ್ಕಳ ವಿದ್ಯಾಭಿವೃದ್ಧಿಯನ್ನು ಸಾಧಿಸುತ್ತಿವೆ. ವಿಧಿ ಅವರಿಗರಿವಿಲ್ಲದಂತೆಯೇ ಅವರನ್ನು ವಿದ್ಯಾಸಚಿವ ಪದವಿಗೆ ತಕ್ಕವರಾಗುವಂತೆ ಪೋಷಿಸುತ್ತಿತ್ತು.

## ವೀರೇಂದ್ರ ಪಾಟೀಲ್

ಶ್ರೀ ಕೆ.ವಿ. ಶಂಕರಗೌಡರು ಅಪಾರ ಸ್ನೇಹಪರತೆಯುಳ್ಳವರು, ಒಮ್ಮೆ ಪರಿಚಯವಾದರೆ ಆ ಸ್ನೇಹದ ಗಂಟನ್ನು ಭದ್ರಪಡಿಸಿ ಉತ್ತಮ ಮೌಲ್ಯಗಳಿಗೆ ದಾರಿ ಮಾಡಿಕೊಡಬಲ್ಲ ಸಾಮರ್ಥ್ಯ ಶಾಲಿಗಳವರು. ತಮ್ಮ ಸ್ವಂತ ಊರಾದ ಮಂಡ್ಯದಲ್ಲಿ ಅವರ ಸೇವೆಯೆಂದರೆ ಸುವರ್ಣಾಕ್ಷರಗಳಿಂದ ಬರೆಯುವಂತಹದ್ದು, ಕೇವಲ ಸಣ್ಣ ಶಾಲೆಯಿದ್ದ ಕಡೆ ವಿಶ್ವವಿದ್ಯಾನಿಲಯ ಅರ್ಹತೆ ಪಡೆಯುವಷ್ಟು ಶಾಲಾ ಕಾಲೇಜುಗಳನ್ನು ಸ್ಥಾಪಿಸಿ ಸಂಸ್ಕೃತಿಸಂಪನ್ನರಾಗಿದ್ದಾರೆ. ಅವರ ವಿದ್ಯಾಪ್ರಗತಿಯ ವ್ಯಾಮೋಹ ಅಂತಹದು.

ಶ್ರೀ ಕೆ.ವಿ.ಶಂಕರಗೌಡರು ಸಹಕಾರ ಪ್ರಪಂಚದಲ್ಲಿ ಖ್ಯಾತರಾದವರು. ವಿವಿದೋದ್ದೇಶ ಸಹಕಾರ ಚಳುವಳಿಯನ್ನು ಮಂಡ್ಯ ಜಿಲ್ಲೆಯಲ್ಲಿ ಬೇರೂರಿಸಿದವರೇ ಅವರು. ಯಾವ ಸಾರ್ವಜನಿಕ ಸೇವೆಯೇ ಆಗಲಿ ಆ ಕಡೆ ಗಮನವಿರಿಸಿ ಅದನ್ನು ಸಾಧಿಸಿಕೊಂಡು ಬರುವ ಸರ್ವಶಕ್ತಿ ಅವರಲ್ಲಿದೆ.

## ಕೆ.ಸಿಂಗಾರಿಗೌಡ

ಶಂಕರಗೌಡರದು ತುಂಬಾ ನಿರ್ದಾಕ್ಷಿಣ್ಯ ಪ್ರವೃತ್ತಿ. ಅನೇಕರು ಅವರಿಂದ ಅಧಿಕಾರಿಗಳಿಗೆ, ಮಂತ್ರಿಗಳಿಗೆ ಹೇಳಿಸಿ ಉಪಕಾರ ಹೊಂದಬೇಕೆಂದು ಬಯಸಿ ನಿರಾಶರಾಗಿರುವುದುಂಟು. ಅಂತಹವರು ನನ್ನ ಬಳಿಗೆ ಬಂದು ನಡೆದುದನ್ನು ಹೇಳಿ ಶ್ರೀ ಗೌಡರ ಬಗೆಗೆ ಕಟುವಾಗಿ

ಮಾತನಾಡಿದುದುಂಟು. ಅವರು ಇಡೀ ಜನರಿಗೆ ಉಪಯೋಗವಾಗುವಂತಹ ಕೆಲಸಗಳನ್ನು ಹಠಮಾಡಿ ಮಾಡಿಸಿಕೊಟ್ಟ ಪ್ರಸಂಗಗಳು ಅನೇಕ ಆದರೆ ಇವರು ದೊಡ್ಡವರು, ಇವರು ಬಡವರು, ಇವರು ನನ್ನ ಹತ್ತಿರದವರು ಎಂದು ಅವರೆಂದೂ ಯೋಚಿಸಿದವರಲ್ಲ ಈ ದೃಷ್ಟಿಯಿಂದ ಅವರು ತಮ್ಮ ಮಾವಂದಿರನ್ನೆ ಎದುರು ಹಾಕಿಕೊಂಡಿದ್ದುಂಟು. ಆದರೆ ಅವರನ್ನು ನಾನು ಹೇಗೋ ಏನೋ ಯಾವಾಗಲೂ ಒಳಹಾಕಿಕೊಂಡೇ ಬಂದಿದ್ದೇನೆ. ಕಷ್ಟದಲ್ಲಿ ತಮ್ಮ ಬಳಿಗೆ ಸಹಾಯ ಕೇಳಿಬಂದವರಿಗೆ ಇಲ್ಲ ಅನ್ನುವ ಮನೋಭಾವ ಶ್ರೀ ಶಂಕರಗೌಡರದ್ದಲ್ಲ ತಮ್ಮ ಬಳಿ ಹಣವಿಲ್ಲದಿದ್ದರೂ ಸಾಲ ಮಾಡಿಯಾದರು ತೊಂದರೆಯಲ್ಲಿದ್ದವರಿಗೆ ಹಣ ಕೊಟ್ಟ ಪ್ರಸಂಗಗಳು ಅನೇಕ. ಅವರು ತಮ್ಮ ಕುಟುಂಬದ ಆಯವ್ಯಯಕ್ಕಾಗಿ ಮಾಡಿದ ಸಾಲದ ಹೊರೆಗಿಂತ ಹೀಗೆ ಸಹಾಯ ಒದಗಿಸಲು ಮಾಡಿದ ಸಾಲದ ಹೊರೆಯೇ ಜಾಸ್ತಿ ಎಂದು ನನಗನ್ನಿಸುತ್ತದೆ.

ಬಸವರಾಜ ಕಟ್ಟೀಮನಿ

ಶಿಕ್ಷಣ ಇಲಾಖೆ ಬಲು ದೊಡ್ಡದು ಪೂರ್ವ, ಪ್ರಾಥಮಿಕ, ಪ್ರಾಥಮಿಕ, ಮಾಧ್ಯಮಿಕ, ಕಾಲೇಜು, ವಿಶ್ವವಿದ್ಯಾನಿಲಯ, ತಾಂತ್ರಿಕ, ತಾಂತ್ರಿಕೇತರ ಇತ್ಯಾದಿಯಾಗಿ ಶಾಖೋಪಶಾಖೆಗಳಾಗಿ ಅಜ್ಜ ನೆಟ್ಟ ಆಲದ ಮರದಂತೆ ಅದು ಬೆಳೆದಿದೆ. ಕನ್ನಡದ ಅಭಿವೃದ್ಧಿ, ಸಾಹಿತ್ಯ, ಸಂಗೀತ, ಲಲಿತಕಲಾ, ಅಕಾಡೆಮಿಗಳೂ ಅದೇ ಇಲಾಖೆಗೆ ಸೇರಿಕೊಂಡಿವೆ. ಜಾತ್ರೆಯಂತೆ, ಸಂತೆಯಂತೆ ಕಿಕ್ಕಿರಿದು ಗಜಿಬಿಜಿಯಾಗಿದ್ದ ಈ ಇಲಾಖೆಯ ವಿವಿಧ ಅಂಗಗಳನ್ನು ಶಿಸ್ತುಗೊಳಪಡಿಸುವ ಕಾರ್ಯ ಅನೇಕ ವರ್ಷ ನಡೆದಿರಲಿಲ್ಲ. ಶ್ರೀ ಶಂಕರಗೌಡರು ಬಂದ ಮೇಲೆಯೆ ಈ ದೆವ್ವದಂತ ಇಲಾಖೆ ಒಂದು ಹಿಡಿತಕ್ಕೆ ಬಂದದ್ದು ತಮ್ಮ ಎಲ್ಲಾ ಸಮಯವನ್ನು ಅವರು ಇಲಾಖೆಯ ಸುಧಾರಣೆಗಾಗಿಯೆ ವಿನಿಯೋಗಿಸಿದರು. ಅನೇಕ ಮಂತ್ರಿಗಳಂತೆ ತಿಂಗಳಿನ ಇಪ್ಪತ್ತು ದಿವಸ ಭಾಷಣ ಮಾಡುತ್ತಾ ತಿರುಗಲಿಲ್ಲ, ಹಿಂದಿನ ಮಂತ್ರಿಮಂಡಲದಲ್ಲಿ ಎಲ್ಲರಿಗಿಂತ ಕಡಿಮೆ ಪ್ರವಾಸ ಭತ್ಯ ಪಡೆದವರು ಇವರೇ ಉತ್ತರ ಕರ್ನಾಟಕದ ಅನೇಕ ಊರುಗಳ ಜನರು ಇವರನ್ನು ನೋಡಲು ಇವರ ಮಾತು ಕೇಳಲು ಆತುರರಾಗಿದ್ದರು, ಇವರು ಹೋಗಬೇಕಲ್ಲವೆ? ಈ ವಿಷಯದಲ್ಲಿ ಕುವೆಂಪು ಅವರಂತೆಯೇ ಇವರದೂ ಪೂರ್ಣ ನಿರಾಸಕ್ತಿ, ಬೆಂಗಳೂರಲ್ಲಿ ಕುಳಿತು ಮಾಡಬೇಕಾದ ಕಾರ್ಯವೇ ಬೆಟ್ಟದಷ್ಟು ಇರುವಾಗ ಅದನ್ನು ಬಿಟ್ಟು ಆ ಊರು ಈ ಊರು ಎಂದು ತಿರುಗುವುದು ಉಚಿತವಲ್ಲವೆಂದೇ ಗೌಡರ ಅಭಿಪ್ರಾಯ. ಸ್ವಾಗತ ಸಮಾರಂಭ, ಸನ್ಮಾನ, ಸತ್ಕಾರ, ಹಾರ ತುರಾಯಿ, ಫೋಟೋ, ಪ್ರಶಂಸೆಯ ಸುರಿಮಳೆ ಯಾವುದೂ ಹಿಡಿಸದು ಈ ಗೌಡರಿಗೆ. ತಮ್ಮ ಕರ್ತವ್ಯವಾಯಿತು ತಾನಾಯಿತು ಬೇರಾವುದರ ಗೊಡವೆಯೂ ಬೇಡ.

ಎಚ್.ಎಲ್. ನಾಗೇಗೌಡ

ಬೇರೆ ಬೇರೆ ಕ್ಷೇತ್ರಗಳನ್ನು ಆರಿಸಿಕೊಂಡು ನಾವು ಮತ್ತೆ ಭೇಟಿ ಆದದ್ದು ಕಾಲು ಶತಮಾನದ ಅನಂತರ, ಆ ಇಪ್ಪತ್ತೈದು ವರ್ಷಗಳ ದೀರ್ಘ ಅವಧಿಯಲ್ಲಿ ಗೌಡರು ತಮ್ಮ ಮೂಲ ಗುಣ ಕಳೆದುಕೊಳ್ಳದಿದ್ದರೂ ಸಗಣಿಯವರೊಡನೆ ಸರಸವಾಡಿದಂತೆ ಕಂಡಿತು. ಸಗಣಿಯವನೊಡನೆ ಸರಸಮಾಡುವುದಕ್ಕಿಂತ ಗಂಧದವರೊಡನೆ ಗುದ್ದಾಡುವುದು ಲೇಸೆಂದು ತಿಳಿದಿದ್ದರೂ ಅನಿವಾರ್ಯವಾಗಿ ಸಗಣಿಯವನೊಡನೆ ವಾಸನೆ ಅಂಟಿಸಿಕೊಂಡಂತೆ ಕಂಡಿತು. ಆದರೆ ಗಂಧದ ಕೊರಡು ಗಂಧವೇ, ಅದೆಂದೂ ತನ್ನ ಗಂಧವನ್ನು ಕಳೆದುಕೊಳ್ಳುವುದಿಲ್ಲ ಈಚೆಗೆ ಶಂಕರಗೌಡರನ್ನು ಕಂಡಾಗ ಅವರು ಹೊಚ್ಚ ಹೊಸ ಗಂಧದ ಕೊರಡಾಗಿಯೇ ಪರಿಮಳ ಬೀರಿದರು, ಎಂದಿನ ಅವರ ವಾತ್ಸಲ್ಯ ಪೂರಿತ ಮಾತು, ಹಿಂದಿನ ಗೆಳೆತನದ ಸಲಿಗೆ ಇವು ಕಂಡವು.

ಪಿ. ಮಲ್ಲಿಕಾರ್ಜುನಪ್ಪ

ಮಾನ್ಯ ಶ್ರೀ ಶಂಕರಗೌಡರು ಹುಟ್ಟು ರೈತರು, ಕೃಷಿ ಅವರ ಜೀವಾಳ ಅಂತಲೇ ಗೌಡರು ಪ್ರವೇಶಿಸಿದ ಯಾವ ಕ್ಷೇತ್ರವಾಗಲಿ ಸ್ವಚ್ಛಂದವಾಗಿ ಬೆಳೆದಿದೆ. ಗೌಡರ ಗುಣಗಳು ಮನನೀಯವಾದವುಗಳು, ಅವರು ಸ್ನೇಹ ಪರರು ಶಂಕರಗೌಡರ ಸ್ನೇಹ ಸಂಪಾದಿಸಿದ ಪ್ರತಿಯೊಬ್ಬ ಸ್ನೇಹಿತರಿಗೂ ಅವರ ಗೆಳೆತನದ ಮೌಲ್ಯ ತಿಳಿದಿದೆ. ಮೇಲಾಗಿ ವಿದ್ಯಾವಿನಯ ಸಂಪನ್ನರು, ಸಮಾಜ ಸುಧಾರಕರು, ರಾಜಕೀಯ ಪಟುಗಳು, ಒಳ್ಳೆಯ ಸಹೃದಯಸ್ಥರು. ಅಷ್ಟೇ ಚೆನ್ನಾಗಿ ಆಡಳಿತ ನಡೆಸುವ ಧೀಮಂತ ನಾಯಕರು ಜನಾನುರಾಗಿಗಳಾದ ಶ್ರೀ ಶಂಕರಗೌಡರಂತಹ ಕನ್ನಡ ಸುಪುತ್ರರು ಮಂಡ್ಯ ಜಿಲ್ಲೆಯಲ್ಲಿ ಜನಿಸಿರುವುದು ಇಡೀ ಜಿಲ್ಲೆಗೆ ಕೀರ್ತಿಯ ಕಳಸವನ್ನು ತಂದಿದೆ. ಶಂಕರಗೌಡರು ವಿಶೇಷವಾಗಿ ಪಿ.ಯು.ಸಿ ಮಂಡಳಿಗೆ ಸಲ್ಲಿಸಿದ ಸೇವೆ ಅತಿ ಮಹತ್ತರವಾದುದು. ಅವರನ್ನು ಎಂದೆಂದಿಗೂ ಮಂಡಳಿ ನೆನೆಯುತ್ತಿರುತ್ತದೆ.

ಪ.ಸು.ಭಟ್ಟ

ತನ್ನ ಸಂಗಡ ಕೆಲಸ ಮಾಡುವವರನ್ನು ಸಮತಾಭಾವನೆಯಿಂದ ಗೌಡರು ನೋಡುತ್ತಿದ್ದರು ಯಾವುದಾದರೂ ಕೆಲಸವಾಗಬೇಕಾದರೂ "ಈ ಕೆಲಸ ಬೇಗ ಆಗಬೇಕು" ಎಂದು ಕೈ ಹಿಡಿದು ಸೌಜನ್ಯದ ಮೂರ್ತಿಯಾಗಿ ಹೇಳುತ್ತಿದ್ದರು. ಹೀಗಾಗಿ ಕಾರ್ಯಕರ್ತರು ಶ್ರೀ ಶಂಕರಗೌಡರು ಹೇಳಿದ ಗೆರೆ ದಾಟದೆ ಕೆಲಸ ಮಾಡುತ್ತಿದ್ದರು. ಮಂತ್ರಿಯಾದ ಮೇಲೂ ಶಂಕರಗೌಡರಲ್ಲಿ ಯಾವ ಬದಲಾವಣೆಯನ್ನು ನೋಡಲಿಲ್ಲ. ಚುನಾವಣೆಯಲ್ಲಿ ಸೋತಾಗ ಅವರು ಕುಗ್ಗಲಿಲ್ಲ. ಮಂತ್ರಿಯಾದಾಗ ಹಿಗ್ಗಿ ತಮ್ಮ ದರ್ಪ ತೋರಲಿಲ್ಲ ತನಗೆ ಅಧಿಕಾರ ಬಂದಾಗ ಒಳ್ಳೆಯ ಕೆಲಸ ಮಾಡಬೇಕೆಂಬ ಹಂಬಲ ಅವರದು. ತಾವು ಮಂತ್ರಿಯಾದಾಗ ಕನ್ನಡದಲ್ಲಿ ಒಳ್ಳೆಯ ಕೆಲಸ ನಡೆಯಲಿ ಎಂಬ ಮನೋಭಾವನೆಯಿಂದ ಅನೇಕ ಒಳ್ಳೆಯ

ಕೆಲಸ ಮಾಡಿದರು 'ಜ್ಞಾನ ಗಂಗೋತ್ರಿ' ಕಿರಿಯರ ವಿಶ್ವಕೋಶ, ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳು, ಮೈಸೂರು ವಿಶ್ವವಿದ್ಯಾನಿಲಯದ ವಿಶ್ವಕೋಶ ಇವುಗಳಲ್ಲಿ ಹೆಚ್ಚಿನ ಆಸಕ್ತಿವಹಿಸಿದರು. ಒಳ್ಳೆಯ ಕೆಲಸ ಯಾರೇ ಮಾಡಲಿ ಅವರಿಗೆ ಪ್ರೋತ್ಸಾಹ ಕೊಡುವ ಬುದ್ಧಿ ಶಂಕರಗೌಡರದು. ಅವರ ರಾಜಕೀಯ ವಿರೋಧಿಗಳೊಬ್ಬರು ಹೈಸ್ಕೂಲ್ ಕೆಲಸಕ್ಕೆ ಹೋದಾಗ ಅವರ ಇಡೀ ಮನೋಭಾವ ಪ್ರದರ್ಶನವಾಯಿತು. ಅವರು ರಾಜಕೀಯದಲ್ಲಿ ನನ್ನ ವಿರೋಧಿ ಇರಬಹುದು ಆದರೆ ಹೈಸ್ಕೂಲ್ ಕಟ್ಟಿ ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾಗುತ್ತಿರುವಾಗ ನಾನು ಸಹಾಯ ಮಾಡಬಾರದೆ? ಎಂದು ಶಂಕರಗೌಡರು ಹೇಳಿದರು. ಶಂಕರಗೌಡರು ಸಹಾಯ ಮನೋಭಾವನೆಯನ್ನು ಜೀವನದ ಎಲ್ಲಾ ರಂಗದಲ್ಲೂ ತೋರಿಸಿದ್ದಾರೆ.

**ಡಾ|| ಬೆಸಗರಹಳ್ಳಿ ರಾಮಣ್ಣ**

ಜನತೆಯ ಅಗತ್ಯಗಳನ್ನು ಅರ್ಥ ಮಾಡಿಕೊಂಡು, ತನ್ನ ವೈಯಕ್ತಿಕ ಸೋಲುಗಳನ್ನು ಗಮನಕ್ಕೆ ತೆಗೆದುಕೊಳ್ಳದೆ, ಒಂದು ಜಿಲ್ಲೆಗೆ ಒಂದು ರಾಜ್ಯಕ್ಕೆ ದುಡಿದ ಶ್ರೀ ಶಂಕರಗೌಡರು ಸಮಾಜ ಸೇವಕರು, ಸದಾ ಒಂದು ರಾಷ್ಟ್ರದ ಜನಕ್ಕೆ ಸ್ಫೂರ್ತಿ ಕೊಡಬಲ್ಲರು. ಇಂಥ ಮಹಾನುಭಾವರ ಸೇವೆ ರಾಷ್ಟ್ರವ್ಯಾಪ್ತಿಯಲ್ಲಿ ಇಡೀ ದೇಶದ ಜನತೆಗೆ ದೊರಕದೆ ಹೋದದ್ದು ಭಾರತದ ದುರ್ದೈವ. ಇಂತ ಸಮಾಜಸೇವಕರನ್ನು ರಾಷ್ಟ್ರದಲ್ಲಿ ಅತ್ಯುನ್ನತವಾದ ಸ್ಥಾನವನ್ನು ಅಲಂಕರಿಸಿ ದೇಶಕ್ಕೆ ಮಾರ್ಗದರ್ಶನ ಕೊಡಿ ಎಂದು ಕೇಳುವ ಸೌಜನ್ಯತೆಯನ್ನು ನಾವು ಬೆಳೆಸಿಕೊಂಡಾಗ ಮಾತ್ರ ನಮ್ಮ ಜನರ ಉದ್ಧಾರವಾದೀತು, ನಮ್ಮ ಸಂಸ್ಕೃತಿಯ ಹಿರಿಮೆ ಇನ್ನೂ ಹಿರಿದಾದಿತು.

**ಜಿ.ನಾರಾಯಣ**

ಕಾಲ ಉರುಳಿದ ಹಾಗೆಲ್ಲ ವ್ಯಕ್ತಿ ಮರೆಯಾಗುತ್ತಾನೆ. ವ್ಯಕ್ತಿ ಮಾಡಿದ ಕೆಲಸವು ಮರೆತು ಹೋಗುತ್ತದೆ, ಶಂಕರಗೌಡರು ಪರಿಷತ್ತಿಗೆ ಮಾಡಿದ ಸಹಾಯ ಪರಿಷತ್ತು ತಮ್ಮನ್ನು ಜ್ಞಾಪಕದಲ್ಲಿಟ್ಟುಕೊಳ್ಳಲಿ ಎಂದು ಮಾಡಿದ್ದಲ್ಲ ಕನ್ನಡದ ಕೆಲಸ ಚೆನ್ನಾಗಿ ನಡೆಯಲಿ ಎಂಬ ಕಾರಣದಿಂದ ಮಾಡಿದ್ದು. ಆದರೂ ಪರಿಷತ್ತು ಶಂಕರಗೌಡರನ್ನು ಮರೆಯುವಂತಿಲ್ಲ. ಅಷ್ಟೆ ಅಲ್ಲ, ಅವರ ಮಾತನ್ನು ನಡೆಸಿಕೊಟ್ಟ ಶ್ರೀ ವೀರೇಂದ್ರಪಾಟೀಲರನ್ನೂ, ಶ್ರೀ ಹೆಗ್ಗಡೆ ಅವರನ್ನು ಪರಿಷತ್ತು ಮರೆಯಲು ಸಾಧ್ಯವಿಲ್ಲ. ಶ್ರೀ ವೀರೇಂದ್ರ ಪಾಟೀಲ್, ಶ್ರೀ ರಾಮಕೃಷ್ಣ ಹೆಗ್ಗಡೆ, ಶ್ರೀ ಶಂಕರಗೌಡ ಅವರದು ಅಪೂರ್ವ ಸಮಾಗಮ. ಒಬ್ಬಳೆ ತಾಯಿಯ ಮೂರು ಜನ ಮಕ್ಕಳಲ್ಲಿ ವಿರಸ ಕಾಣಬಹುದು, ಆದರೆ ಬೇರೆ ಬೇರೆ ತಾಯಿಯರ ಮಕ್ಕಳಾದ ಈ ಮೂವರು ಸಹೋದರರಲ್ಲಿ ವಿರಸ ಕಾಣುವಂತೆಯೇ ಇಲ್ಲ. ಆ ಕಾರಣದಿಂದಲೇ ಅಧಿಕಾರ ಮಾಡಿದ ಮೇಲೂ ಈ ಮೂವರು ಒಂದೇ ದೋಣಿಯಲ್ಲಿ ಒಂದೆ ಗುರಿಯಲ್ಲಿ ಯಾನ ಮಾಡುತ್ತಿದ್ದಾರೆ.

**ಡಾ|| ಹಾ.ಮಾ. ನಾಯಕ**

ಗೌಡರ ಹೆಸರನ್ನು ಅನೇಕ ವರ್ಷಗಳಿಂದ ಬಲ್ಲವನಾಗಿದ್ದರೂ, ಅವರನ್ನು ಮುಖತಃ ನೋಡುವ ಅವಕಾಶಗಳು ಬಂದದ್ದು ಅವರು ಕರ್ನಾಟಕದ ಶಿಕ್ಷಣ ಸಚಿವರಾಗಿದ್ದಾಗ, ಅವರನ್ನು ಭೇಟಿಯಾದ ಕೆಲವು ಸಂದರ್ಭಗಳು ನನ್ನ ನೆನಪಿನ ಹೊಲದಲ್ಲಿ ಇನ್ನೂ ಹಸಿರಾಗಿದೆ. ಅಪರಿಚಿತ, ಅಮಹತ್ವದ ತರುಣನೊಬ್ಬನನ್ನು ಅವರು ಕಂಡ ಬಗೆ, ಅವನ ಅಭಿಪ್ರಾಯಗಳಿಗೆ ಅವರು ನೀಡಿದ ಮಹತ್ವ ಇವು ನನ್ನಲ್ಲಿ ಅವರ ವಿಷಯಕ್ಕೆ ಹೆಚ್ಚಿನ ಗೌರವವನ್ನು ಮೂಡಿಸಿದವು. ಮುಂದೆ ಅನೇಕ ಸಂದರ್ಭಗಳಲ್ಲಿ ಅವರನ್ನು ಕಾಣಬೇಕಾಯಿತು. ಆದರೆ ಮೊದಲ ಬಾರಿ ಅವರ ಬಗ್ಗೆ ಮೂಡಿದ ಭಾವನೆ ಯಾವ ಕಾರಣದಿಂದಲೂ ಬದಲಾಗಲಿಲ್ಲ. ಅವರ ವಿನಯ ಸೌಜನ್ಯ, ಅಭಿಮಾನ, ಅಂತಃಕರಣ, ಅನ್ನಿಸಿದ್ದನ್ನು ನೇರವಾಗಿ ಹೇಳುವ ಎದೆಗಾರಿಕೆ ಯಾರನ್ನೂ ಆಕರ್ಷಿಸುತ್ತದೆ. ಸಂಸ್ಕೃತಿ ಸಂಪನ್ನ ಯಾರು ಎನ್ನುವುದರ ಮೇಲೆ ಸಂಪುಟಗಳನ್ನು ಬರೆಯುಬಹುದು. ಆದರೆ ಶಂಕರಗೌಡರಂತಹ ವ್ಯಕ್ತಿಗಳು ಅದಕ್ಕೆ ಜೀವಂತ ಉದಾಹರಣೆಗಳಾಗಿರುತ್ತಾರೆ. ಅಂತಹ ಚೇತನಗಳು ಸಮಾಜ ಜೀವನದಲ್ಲಿ ರಾಷ್ಟ್ರ ಜೀವನದಲ್ಲಿ ಮಾದರಿಯಾಗಿ ನಿಲ್ಲುತ್ತವೆ. ಅವರಿಗೆ ಸೋಲು ಗೆಲುವುಗಳು ಮುಖ್ಯವಲ್ಲ. ತಾವು ನಂಬಿದ ಮೌಲ್ಯಗಳು ಸಾಧ್ಯವಾದಷ್ಟು ಚಲಾವಣೆಯಲ್ಲಿರಬೇಕೆಂಬ ಹಾದಿಯಲ್ಲಿ ಅವರು ಶ್ರಮಿಸುತ್ತಿರುತ್ತಾರೆ ಸಂಸ್ಕೃತಿ ಸಂಪನ್ನತೆಯ ಮುಖ್ಯ ಲಕ್ಷಣ ಅದು.

**ಹ.ಕ. ರಾಜೇಗೌಡ**

ಶ್ರೀ ಶಂಕರಗೌಡರ ಹೆಮ್ಮೆಯ ಸಾಧನೆ ಜನತಾ ಶಿಕ್ಷಣ ಸಂಸ್ಥೆ. ಮಂಡ್ಯ ಜಿಲ್ಲೆ ಹಳ್ಳಿಗಳ ಪ್ರದೇಶ, ಈ ಜಿಲ್ಲೆಯ ಜನರಲ್ಲಿ 100ಕ್ಕೆ 90ಜನ ವ್ಯವಸಾಯದಿಂದ ಜೀವಿಸುವ ರೈತರು. ಈ ಜನ ತಮ್ಮ ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡಿಸಲು ಅಸಮರ್ಥರಾಗಿದ್ದಾರೆ. ಹಳ್ಳಿಯಿಂದ ನಗರಗಳಿಗೆ ಬಂದು ವ್ಯಾಸಂಗ ಮಾಡಲು ಈ ಹುಡುಗರಿಗೆ ಯಾವ ರೀತಿಯ ಅನುಕೂಲಗಳು ಇರಲಿಲ್ಲ. ತಮ್ಮ ಎಳೆವಯಸ್ಸಿನಲ್ಲಿ ಶ್ರೀ ಗೌಡರಿಗೂ ಇಂತಹದೇ ಸಮಸ್ಯೆ ಎದುರಾಗಿತ್ತು. ಆಗ ತೊಂದರೆ ಅನುಭವಿಸಿದ ಗೌಡರಿಗೆ ಈಗ ಪರಿಹಾರ ಕಂಡುಹಿಡಿಯುವುದು ಕಷ್ಟವಾಗಲಿಲ್ಲ. ತಮ್ಮ ಮಿತ್ರರನ್ನು ಕೂಡಿಕೊಂಡು ಶಂಕರಗೌಡರು ಜಿಲ್ಲೆಯ ಪ್ರಮುಖ ಕೇಂದ್ರಗಳಲ್ಲಿ ನಾಟಕವಾಡಿದರು. ದಾನಶೂರ ಕರ್ಣ ಮತ್ತು ಪಾದುಕ ಕಿರೀಟ ಈ ಬಳಗ ಆಡಿದ ಜನಪ್ರಿಯ ನಾಟಕಗಳು ಇದರಿಂದ ಬಂದ ಹಣದಲ್ಲಿ ಮಂಡ್ಯ ಹಾಗೂ ನಾಗಮಂಗಲಗಳಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಇದರೊಂದಿಗೆ ಜಿಲ್ಲೆಗೆ ಶಿಕ್ಷಣ ಸಮಸ್ಯೆ ನೀಗಿಸಲು ಜನತಾ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಇದರ ಆಶ್ರಯದಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜು, ಒಂದು ಪ್ರಥಮ ದರ್ಜೆ ಕಾಲೇಜು ಒಂದು ಶಿಕ್ಷಣ ಕಾಲೇಜು ನಡೆಯುತ್ತಿವೆ. ಜನ ಸಾಮಾನ್ಯರ ಮಕ್ಕಳಿಗೆ ಸುಲಭವಾಗಿ ಉನ್ನತ

ಶಿಕ್ಷಣ ದೊರೆಯಬೇಕೆಂಬುದು ಇವರ ಹಂಬಲ. ಅದಕ್ಕಾಗಿ ತಮ್ಮ ಮಿತ್ರರೊಂದಿಗೆ ಅಹರ್ನಿಸಿ ದುಡಿತ. ಇಂದು ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಬಹುತೇಕ ತಮ್ಮ ನೌಕರರಿಗೆ ಕ್ರಮವಾಗಿ ಅವರಿಗೆ ದೊರೆಯಬೇಕಾದ ಸಂಬಳ-ಸಾರಿಗೆಗಳನ್ನು ಕೊಡುತ್ತಿಲ್ಲ ಎಂಬ ದೂರಿದೆ. ಆದರೆ ಮಂಡ್ಯದ ಜನತಾ ಶಿಕ್ಷಣ ಸಂಸ್ಥೆಯಲ್ಲಿ ಕಡಿಮೆ ಸಂಬಳ ಕೊಡುವುದಿರಲಿ, ತಡವಾಗಿ ಸಂಬಳ ಕೊಡುವ ಪದ್ಧತಿ ಇಲ್ಲ. ಶ್ರೀಗೌಡರು ತಮ್ಮ ವೈಯುಕ್ತಿಕ ಆಸ್ತಿ-ಪಾಸ್ತಿಗಳ ಮೇಲೆ ಸಾಲ ಮಾಡಿಯಾದರೂ ಕ್ರಮಬದ್ಧವಾಗಿ ಸಂಬಳ ಪಾವತಿ ಮಾಡಿಯಾರು. ತಮ್ಮ ಶಿಕ್ಷಣ ಸಂಸ್ಥೆಯ ಅಧ್ಯಾಪಕರನ್ನು ಮಿತ್ರರಂತೆ, ಮನೆಯವರಂತೆ ಕಾಣುವ ಶಂಕರಗೌಡರ ಹಿರಿಮೆ ಅನುಕರಣೀಯ. ಶಿಕ್ಷಣ ಕ್ಷೇತ್ರದಲ್ಲಿ ಸರಕಾರ, ಒಂದು ವಿಶ್ವ ವಿದ್ಯಾನಿಲಯ ಸಾಧಿಸಬಹುದಾದ್ದನ್ನು ಶಂಕರಗೌಡರು ಜನತಾ ಶಿಕ್ಷಣ ಸಂಸ್ಥೆಯ ಮೂಲಕ ಸಾಧಿಸಿದ್ದಾರೆ.

## ಜಿ. ಮಾದೇಗೌಡ

1940ರ ದಶಕದಲ್ಲಿ ನಾನು ಇಂಟರ್ ಮೀಡಿಯಟ್ ಓದುತ್ತಿದ್ದಾಗ ನನಗೆ ಶಂಕರಗೌಡರು ಪರಿಚಯವಾದರು. ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಶಂಕರಗೌಡರನ್ನು ಆಯ್ಕೆ ಮಾಡುವ ವಿಚಾರದಲ್ಲಿ ಕೆ.ಎಂ. ಸುಬ್ಬೇಗೌಡರು ನನ್ನನ್ನು ಸೇರಿ ಐದಾರು ಜನ ಗೆಳೆಯರನ್ನು ಕೀಲಾರಕ್ಕೆ ಕರೆದುಕೊಂಡು ಹೋಗಿದ್ದಾಗ ಪ್ರಥಮವಾಗಿ ನನ್ನ ಶಂಕರಗೌಡರ ಪರಿಚಯವಾಯಿತು.

ಕೀಲಾರದಲ್ಲಿ ಶಂಕರಗೌಡರ ಅಣ್ಣ ಹಾಗೂ ಹೊನಗಾನಹಳ್ಳಿಯಲ್ಲಿ ಶಂಕರಗೌಡರ ಮಾವ ಸಿಂಗಾರಿಗೌಡರನ್ನು ಒಪ್ಪಿಸಿ, ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಗೊಳಿಸುವುದರ ಮೂಲಕ ಪ್ರಾರಂಭವಾದ ನನ್ನ ಅವರ ಬಾಂಧವ್ಯ ಅವರ ಕಡೆ ಉಸಿರು ಇರುವ ತನಕ ಮುಂದುವರೆಯಿತು. ಶಂಕರಗೌಡರ ಬಗ್ಗೆ ಮಾತಾಡಿದರೆ ಇಂದಿನ ಜನ ನಂಬುವುದಿಲ್ಲ. ನನ್ನಂತಹವರಲ್ಲಿ ಸಾರ್ವಜನಿಕ ಬದುಕಿನಲ್ಲಿ ನಿಷ್ಠೆ, ಪ್ರಾಮಾಣಿಕತೆ, ನೈತಿಕತೆ ಉಳಿದುಕೊಂಡು ಬಂದಿದ್ದರೆ, ಅದಕ್ಕೆ ಶಂಕರಗೌಡರೇ ಕಾರಣ.

ನನ್ನ ತಲೆಮಾರಿನ ಸುಮಾರು ಮಂದಿಯನ್ನು ಅವರು ಬೆಳೆಸಿದರು. ಇಂದು ನಾನು-ಚೌಡಯ್ಯನಂತಹವರು ರಾಜಕೀಯದಲ್ಲಿ ಶುದ್ಧ ಚಾರಿತ್ರ್ಯ ಕಾಪಾಡಿಕೊಂಡು ಬರಲು ಶಂಕರಗೌಡರ ವ್ಯಕ್ತಿತ್ವ ನಮ್ಮ ಮೇಲೆ ಬೀರಿದ ಪ್ರಭಾವ ಕಾರಣ ಎಂದರೆ ತಪ್ಪಾಗಲಾರದು.

ಇಲ್ಲಿನ ರಾಜಕೀಯ ಗುಂಪುಗಾರಿಕೆಯಿಂದ ರಾಜಕಾರಣದಲ್ಲಿ ಅವರಿಗೆ ಸಿಗಬೇಕಾದ ಸ್ಥಾನ-ಮಾನಗಳು ದೊರೆಯಲಿಲ್ಲ. ಅವರು ಒಂದು ಬಾರಿ ಮೇಲ್ಮನೆಗೆ ಆಯ್ಕೆಯಾಗಿ ಪೂರ್ಣ ಅವಧಿ ಮುಗಿಸಿದ್ದು ಬಿಟ್ಟರೆ, ಶಾಸಕರಾಗಿ, ಸಂಸದರಾಗಿ ಪೂರ್ಣ ಪ್ರಮಾಣದಲ್ಲಿ ರಾಜಕೀಯದಲ್ಲಿ ಇದ್ದು ಸೇವೆ ಮಾಡಲು ಸಾಧ್ಯವಾಗಲಿಲ್ಲ. ಅವರು ಶಿಕ್ಷಣ ಸಚಿವರಾಗಿ , ಮಾಡಿದ ಸಾಧನೆ ಇಂದಿಗೂ ದಾಖಲೆಯಾಗಿದೆ. ಅವರು ರಾಜಕೀಯಕ್ಕಿಂತ ಮಿಗಿಲಾಗಿ

ಸಾಮಾಜಿಕ, ಶಿಕ್ಷಣ, ರಂಗಭೂಮಿ, ಕಲೆ, ಸಾಹಿತ್ಯದಲ್ಲಿ ಮಾಡಿದ ಸಾಧನೆ ಅಪಾರವಾದುದು. ಆ ಕಾರಣಕ್ಕಾಗಿ ಮಂಡ್ಯ ಜಿಲ್ಲೆಯಲ್ಲಿ ಶಂಕರಗೌಡರ ಹೆಸರು ಶಾಶ್ವತವಾಗಿ ಉಳಿದುಕೊಂಡಿದೆ.

ಹೆಚ್.ಡಿ. ಚೌಡಯ್ಯ

ಆಡು ಮುಟ್ಟದ ಸೊಪ್ಪಿಲ್ಲ ಎನ್ನುವ ಗಾದೆಯಂತೆ ಮಂಡ್ಯ ಜಿಲ್ಲೆಯಲ್ಲಿ ಕೆ.ವಿ.ಶಂಕರಗೌಡರು ಕೈಯಾಡಿಸದ ಕ್ಷೇತ್ರಗಳಿಲ್ಲ. ನನ್ನ ತಲೆಮಾರಿಗೆ ಶಂಕರಗೌಡರು ರಾಜಕೀಯ ರಂಗದಲ್ಲಿ ಮಾರ್ಗದರ್ಶಕರಾಗಿದ್ದರು. ಮುಂದಿನ ತಲೆಮಾರು ಶತಮಾನಗಳ ಕಾಲ ನೆನೆಪಿಸಿಕೊಳ್ಳುವಂತೆ ಕೆಲಸಗಳನ್ನು ಅವರು ಮಾಡಿದ್ದಾರೆ.

ಜಿಲ್ಲೆಯ ಶಿಕ್ಷಣ ಕ್ಷೇತ್ರದಲ್ಲಿ ಅವರು ಮಾಡಿದ ಸಾಧನೆ ಅಪಾರವಾದುದು. ಇಂದಿನ ತಲೆಮಾರಿಗೆ ನಿಜಕ್ಕೂ ಶಂಕರಗೌಡರ ಬಗ್ಗೆ ಅಭಿಮಾನ ಮತ್ತು ಗೌರವ ಇದ್ದರೆ ಶಿಕ್ಷಣ, ಸಹಕಾರ ಕ್ಷೇತ್ರದಲ್ಲಿ ಅವರು ಮಾಡಿರುವ ಸಾಧನೆಗಳನ್ನು ಉಳಿಸಿಕೊಂಡು ಹೋಗಬೇಕಾಗಿದೆ. ಮಂಡ್ಯ ಜಿಲ್ಲೆಯ ಸಹಕಾರ ಕೇಂದ್ರ ಬ್ಯಾಂಕ್, ರೈತರ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ, ಜನತಾ ಶಿಕ್ಷಣ ಸಂಸ್ಥೆ ಇವೆಲ್ಲವೂ ಕೆ.ವಿ. ಶಂಕರಗೌಡರ ಹೆಸರನ್ನು ಚಿರಸ್ಥಾಯಿಗೊಳಿಸಿವೆ. ಇಂದಿನ ರಾಜಕಾರಣಿಗಳು ಶಂಕರಗೌಡರ ಬದುಕನ್ನು ಆದರ್ಶವಾಗಿಟ್ಟುಕೊಳ್ಳಬೇಕು.

ಹೆಚ್. ಹೊನ್ನಪ್ಪ

ನಿಜ ಹೇಳಬೇಕೆಂದರೆ ನಾನು ಪ್ರಾರಂಭದಿಂದಲೂ ಶಂಕರಗೌಡರ ವಿರೋಧಿಯಾಗಿ ರಾಜಕೀಯದಲ್ಲಿದ್ದೆ. 80ರಲ್ಲಿ ಅರಸು ಮತ್ತು ಬಂಗಾರಪ್ಪನವರ ಕ್ರಾಂತಿರಂಗ ಪಕ್ಷ ಹುಟ್ಟಿದ ನಂತರ ನಾನು ಅನಿವಾರ್ಯವಾಗಿ ಕೆರಗೋಡು ಕ್ಷೇತ್ರದಲ್ಲಿ ಕ್ರಾಂತಿರಂಗದ ಬೆಂಬಲಿತ ಅಭ್ಯರ್ಥಿಯಾಗಿದ್ದ ಶಂಕರಗೌಡರ ಪರವಾಗಿ ಕೆಲಸ ಮಾಡಬೇಕಾಗಿ ಬಂತು.

ಚುನಾವಣೆಯ ಸಂದರ್ಭದಲ್ಲಿ ಶಂಕರಗೌಡರ ವ್ಯಕ್ತಿತ್ವವನ್ನು ಹತ್ತಿರದಿಂದ ಗಮನಿಸಿದ ನನಗೆ ಶಂಕರೇಗೌಡರ ಬಗ್ಗೆ ಅಪಾರ ಗೌರವ ಉಂಟಾಗಲು ಕಾರಣವಾದದ್ದು ಅವರ ಸಮಾಜವಾದಿ ಧೋರಣೆ. ಹಿರಿಯರು, ಕಿರಿಯರು ಎನ್ನುವ ಬೇಧ-ಭಾವ ಇಲ್ಲದೆ ಅವರು ನಡೆದುಕೊಳ್ಳುತ್ತಿದ್ದ ರೀತಿ ನನ್ನನ್ನು ಶಂಕರಗೌಡರತ್ತ ಬಹುವಾಗಿ ಆಕರ್ಷಿಸಿತು. ಚುನಾವಣೆಯಲ್ಲಿ ಶಂಕರಗೌಡರು ಅಪಜಯ ಅನುಭವಿಸಿದ ನಂತರವೂ ನನ್ನ ಮತ್ತು ಅವರ ಸಂಬಂಧ ಮುಂದುವರೆಯಿತು.

ನಂತರ ನಾನು ಮಂಡ್ಯ ಸಕ್ಕರೆ ಕಂಪನಿ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ಜನತಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ವಕೀಲರಾಗಿದ್ದ ಮಲ್ಲಯ್ಯನವರ ವಿರುದ್ಧ ಅವರು ಸ್ಪರ್ಧಿಸಿದಾಗ ನಾನು ಬಹುವಾಗಿ ಶ್ರಮಿಸಿದೆ. ಶಂಕರಗೌಡರು ಗೆಲ್ಲುವಲ್ಲಿ ನನ್ನದು ಒಂದು ಪಾಲಿತ್ತು. ನನ್ನ ಓಡಾಟವನ್ನು ಗಮನಿಸಿದ್ದ ಶಂಕರಗೌಡರು ಅವರು ಅಧ್ಯಕ್ಷರಾದ ಕೂಡಲೇ ನನ್ನನ್ನು ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿದರು. ತಾವು

ನಂಬಿದ ವ್ಯಕ್ತಿಗಳ ಬಗ್ಗೆ ಯಾವಾಗಲೂ ಅವರಿಗೆ ಅಪಾರ ವಿಶ್ವಾಸವಿತ್ತು. ಇದು ಅವರ ದೊಡ್ಡ ಗುಣ.

ನನ್ನಂತಹ ಕಿರಿಯನ ಮೇಲೆ ಅವರು ಇರಿಸಿದ ವಿಶ್ವಾಸ, ಹೊರಿಸಿದ ಜವಾಬ್ದಾರಿ ಇವೆಲ್ಲವೂ ಇಂದಿಗೂ ನನ್ನಲ್ಲಿ ಶಂಕರಗೌಡರ ಬಗ್ಗೆ ಗೌರವ-ಪ್ರೀತಿ ಮೂಡಲು ಕಾರಣವಾಗಿದೆ. ಅಷ್ಟೇ ಅಲ್ಲ, ನಾನು ಬಹಳ ದಿನಗಳ ಕಾಲ ಅವರ ವಿರೋಧಿಯಾಗಿದ್ದನಲ್ಲ ಎಂಬ ಪಶ್ಚಾತ್ತಾಪ ಕೂಡ ಕಾಡಿದೆ.

ಪ್ರೊ. ಜಯಪ್ರಕಾಶಗೌಡ

ಸ್ವಾತಂತ್ರ್ಯ ನಂತರ ಮಂಡ್ಯ ಜಿಲ್ಲೆಯ ರಾಜಕಾರಣಿಗಳಲ್ಲಿ ಬದುಕಿರುವವರೆಗೂ ಅನಭಿಷಕ್ತ ಸಾಮ್ರಾಟರಾಗಿ ಮೆರೆದ ಶಂಕರಗೌಡರ ಹಿಂದೆ ಇರುವ ರಹಸ್ಯ ಅವರ ಔದಾರ್ಯ.

ದಕ್ಷತೆ, ಪ್ರಾಮಾಣಿಕತೆ, ಸರಳತೆ ಜೊತೆ ಜೊತೆಗೆ ಉದಾರತೆಯನ್ನು ಮೈಗೂಡಿಸಿಕೊಂಡಿದರಿಂದಲೇ ತಮ್ಮ ರಾಜಕೀಯ ಶತ್ರುಗಳಿಗೂ ಮಿತ್ರರಾಗಿ ಉಳಿದದ್ದು ಅವರ ಎಲ್ಲಾ ರಚನಾತ್ಮಕ ಚಟುವಟಿಕೆಗಳಿಗೆ ಯಾರೂ ತಡೆಯೊಡ್ಡಲಾರದಾದರು.

ಒಬ್ಬ ರಾಜಕಾರಣಿಯಾಗಿ ಪಕ್ಷಬೇಧ ಮರೆತು ಜನರಿಗೆ ಸಹಾಯ ಮಾಡುವ ಅವರ ಮನೋಧರ್ಮ ಅನುಕರಣೀಯವಾದದ್ದು. ಚುನಾವಣೆಯ ಸಂದರ್ಭದಲ್ಲಷ್ಟೇ ಶತೃತ್ವವನ್ನು ಪಡೆದುಕೊಳ್ಳುತ್ತಿದ್ದ ಶಂಕರಗೌಡರು ಚುನಾವಣೆಯ ನಂತರ ಎಲ್ಲರಿಗೂ ಸ್ನೇಹಿತರಾಗಿ ಬಿಡುತ್ತಿದ್ದರು.

ಅವರ ಅಪಾರವಾದ ಓದಿನ ಹಿನ್ನೆಲೆ ಅವರ ಸುಸಂಸ್ಕೃತತನಕ್ಕೆ ಕಾರಣವಾಗಿತ್ತೆಂದರೆ ಅತಿಶಯೋಕ್ತಿ ಅಲ್ಲ. ಪ್ರತಿಭೆ ಇದ್ದವರನ್ನು ಜಾತಿ-ಮತ, ಕುಲ-ಗೋತ್ರಗಳೆನ್ನದೆ, ಹಿರಿಯರು-ಕಿರಿಯರೆನ್ನದೆ ಗೌರವಿಸುತ್ತಿದ್ದ ಅವರ ನಡವಳಿಕೆ ನಾಡಿನುದ್ದಕ್ಕೂ ಅಭಿಮಾನಿಗಳನ್ನು ಸೃಷ್ಟಿಸಿತ್ತು. ನಾಳಿನ ಬಗ್ಗೆ, ನಾಳಿನ ಭವಿಷ್ಯದ ಬಗ್ಗೆ ಸದಾ ಯೋಚಿಸುತ್ತಿದ್ದ ಶಂಕರಗೌಡರ ದೂರದೃಷ್ಟಿಯ ಫಲವಾಗಿ ಮಂಡ್ಯ ಶೈಕ್ಷಣಿಕವಾಗಿ ಮುಂದುವರಿಯಲು ಕಾರಣವಾಯಿತು. ಕಲೆ-ಸಾಹಿತ್ಯ ಗೌಡರ ದೃಷ್ಟಿಯಲ್ಲಿ ಮನರಂಜನೆ ಮಾತ್ರವಲ್ಲ ಪರೋಕ್ಷ ಶಿಕ್ಷಣ ಕೂಡ ಹೌದು. ಅವುಗಳ ಮೂಲಕವಾಗಿ ಸುಸಂಸ್ಕೃತ ಸಮಾಜವೊಂದರ ನಿರ್ಮಾಣ ಸಾಧ್ಯವೆಂದು ಅವರು ಬಲವಾಗಿ ನಂಬಿದ್ದರು.

ಈ ದಿನ ಶಂಕರಗೌಡರು ಜೀವಂತವಾಗಿ ಉಳಿದಿರುವುದಕ್ಕೆ ಅವರ ರಚನಾತ್ಮಕ ಕಾರ್ಯಗಳಿಗಿಂತ, ಸಾಹಿತ್ಯ ಮತ್ತು ಸಂಸ್ಕೃತಿ, ಕಲೋಪಾಸನೆ ಬಹುಮುಖ್ಯ ಎಂದರೆ ತಪ್ಪಾಗಲಾರದು.

ಶ್ರೀಮಂತರನ್ನೆಂದೂ ಓಲೈಸದ ಶಂಕರಗೌಡರು, ಶ್ರೀ ಸಾಮಾನ್ಯರ ಮುಖ್ಯ ಪ್ರತಿಪಾದಕರಾಗಿದ್ದರು. ಶ್ರೀಮಂತರಿಂದ ಜನೋಪಯೋಗಿ ಕಾರ್ಯಗಳಿಗೆ ಸಹಾಯ ಪಡೆದರೇ ಹೊರತು, ಅವರ ಆಜ್ಞಾನುವರ್ತಿಗಳಾಗಲಿಲ್ಲ. ಚಿಂತನ ಪ್ರಧಾನವಾದ ಅವರ ವ್ಯಕ್ತಿತ್ವದ ಕಾರಣದಿಂದ ಒಂದು ಹೊಸ ಪೀಳಿಗೆಯ ಭರವಸೆಯ ನಾಯಕರನ್ನು ಸೃಷ್ಟಿಸಿದರು. ತಮ್ಮ ಅನಂತರವೂ ಮಂಡ್ಯ ಜಿಲ್ಲೆಯ ರಾಜಕೀಯ ಕ್ಷೇತ್ರ ಶೂನ್ಯವಾಗಬಾರದೆಂಬ ದೃಷ್ಟಿ ಅವರಲ್ಲಿ ಮನೆ ಮಾಡಿದ್ದ ಕಾರಣದಿಂದ ಮಂಡ್ಯ ಜಿಲ್ಲೆ ಇನ್ನೂ ರಚನಾತ್ಮಕ ಚಟುವಟಿಕೆಗಳಿಂದ ಹೊರತಾಗಿಲ್ಲ.

ತಮ್ಮ ಬಿಡುವಿಲ್ಲದ ರಾಜಕೀಯದ ನಡುವೆಯೂ ಸಾಹಿತಿಗಳ, ಕಲಾವಿದರ ಒಡನಾಟವನ್ನು ಸದಾ ಬಯಸುತ್ತಿದ್ದ ಶ್ರೀಯುತ ಗೌಡರ ಹೃದಯ ಶ್ರೀಮಂತಿಕೆ ಅವರ ಒಡನಾಟದಲ್ಲಿದ್ದ ಎಲ್ಲರನ್ನೂ ಆಶ್ಚರ್ಯಚಕಿತರನ್ನಾಗಿಸುತ್ತಿತ್ತು. ಮಂಡ್ಯ ಜಿಲ್ಲೆಯ ಎಲ್ಲಾ ಕ್ಷೇತ್ರಗಳಲ್ಲೂ ಬೀಜಾಂಕುರಕ್ಕೆ ಕಾರಣರಾದ ಶಂಕರಗೌಡರ ದೂರದೃಷ್ಟಿಯ ಫಲವಾಗಿ ಮಂಡ್ಯದ ಕಡೆ ಎಲ್ಲರನ್ನೂ ತಿರುಗಿ ನೋಡುವಂತೆ ಮಾಡಿತು.

ಬದುಕಿದ್ದ ಸೀಜರ್‌ಗಿಂತ ಸತ್ತ ಸೀಜರ್ ಹೆಚ್ಚು ಪ್ರಭಾವಶಾಲಿ ಎಂಬ ಮಾತೊಂದನ್ನು ಜೂಲಿಯಸ್ ಸೀಝರ್ ನಾಟಕದಲ್ಲಿ ಬ್ರೂಟಸ್ ಗೊಣಗಿಕೊಳ್ಳುತ್ತಾನೆ. ಇಂದು ಶಂಕರಗೌಡರು ಮಂಡ್ಯ ಜಿಲ್ಲೆಯಲ್ಲಿ ಸತ್ತ ಸೀಝರ್ ಎಂದರೆ ತಪ್ಪಾಗಲಾರದು.

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಸಂಧ್ಯಾರೆಡ್ಡಿ | 20.00 |

| | | | |
|---|---|---|---|
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಮಲ್ಲಿಕಾರ್ಜುನಕೂಡಲಗಿ | 30.00 |
| 32. | ಕಾಗೋಡು ಚಳವಳಿ | ಮಲ್ಲಿಕಾರ್ಜುನಕೂಡಲಗಿ | 15.00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |

| | | | |
|---|---|---|---|
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15.00 |